॥ ಶ್ರೀ ವಿದ್ಯಾಶಂಕರೋ ವಿಜಯತೇ ॥

ಶ್ರೀಮಜ್ಜಗದ್ಗುರು ಶ್ರೀ ಕೂಡ್ಲೀ-ಶೃಂಗೇರೀ ಸಂಸ್ಥಾನದ

# ಪ್ರಾಚೀನ ಶಾಸನ ಲೇಖನ ಸಂಗ್ರಹ

## ಭಾಗ ೧

ಶಿಷ್ಯೋಪದೇಶನಿರತಾಃ ಪಂಚವಿಂಶತಿವತ್ಸರೈಃ ।
ಶ್ರೀ ಭಾರತ್ಯೋ ವಿರಾಜಂತೇ ಸಚ್ಚಿದಾನಂದ ಶಂಕರಾಃ ॥

ಜಗದ್ಗುರು

ಶ್ರೀ ಸಚ್ಚಿದಾನಂದ ಶಂಕರಭಾರತೀ ಶ್ರೀ ಶ್ರೀಗಳವರ

ಪೀಠಾರೋಹಣ

## ರಜತೋತ್ಸವ ಕಾಣಿಕೆ

ಶ್ರೀ ಕೂಡಲೀ ಕ್ಷೇತ್ರ

ಶಿವಮೊಗ್ಗಾ ಜಿಲ್ಲಾ, ಮೈಸೂರು ರಾಜ್ಯ

೧೮೮೩ ನೇ ಪ್ಲವಸಂವತ್ಸರದ ವೈಶಾಖ ಶುದ್ಧ ತೃತೀಯಾ ಮಂಗಳವಾರ

ಮುದ್ರಣ:

ಮೈಸೂರು ಸರ್ಕಾರದ ಪಠ್ಯಪುಸ್ತಕ ಮುದ್ರಣಾಲಯ,

ಮೈಸೂರು

1965

॥ ಶ್ರೀ ವಿದ್ಯಾಶಂಕರೋ ವಿಜಯತೇ ॥

ಶ್ರೀಮಜ್ಜಗದ್ಗುರು ಶ್ರೀ ಕೂಡ್ಲೀ–ಶೃಂಗೇರೀ ಸಂಸ್ಥಾನದ

# ಪ್ರಾಚೀನ ಶಾಸನ ಲೇಖನ ಸಂಗ್ರಹ

ಭಾಗ ೧

ಶಿಷ್ಯೋಪದೇಶನಿರತಾಃ ಪಂಚವಿಂಶತಿವತ್ಸರೈಃ ।
ಶ್ರೀ ಭಾರತ್ಯೋ ವಿರಾಜಂತೇ ಸಚ್ಚಿದಾನಂದ ಶಂಕರಾಃ ॥

ಜಗದ್ಗುರು

ಶ್ರೀ ಸಚ್ಚಿದಾನಂದ ಶಂಕರಭಾರತೀ ಶ್ರೀ ಶ್ರೀಗಳವರ

ಪೀಠಾರೋಹಣ

## ರಜತೋತ್ಸವ ಕಾಣಿಕೆ

ಶ್ರೀ ಕೂಡಲೀ ಕ್ಷೇತ್ರ

ಶಿವಮೊಗ್ಗಾ ಜಿಲ್ಲಾ, ಮೈಸೂರು ರಾಜ್ಯ

೧೮೮೭ನೇ ಪ್ಲವಸಂವತ್ಸರದ ವೈಶಾಖ ಶುದ್ಧ ತೃತೀಯಾ ಮಂಗಳವಾರ

ಮುದ್ರಣ:

ಮೈಸೂರು ಸರ್ಕಾರದ ಪಠ್ಯಪುಸ್ತಕ ಮುದ್ರಣಾಲಯ,

ಮೈಸೂರು

1965

# ಅರ್ಪಣೆ

ಶ್ರೀಮತ್ಪರಮಹಂಸೇತ್ಯಾದಿ ಸಮಸ್ತ ಬಿರುದಾಂಕಿತರಾದ

ಶೃಂಗೇರೀ ಶ್ರೀ ವಿದ್ಯಾಶಂಕರದೇವ ದಿವ್ಯಪಾದ ಪದ್ಮಾರಾಧಕ

## ಶ್ರೀ ಕೂಡ್ಲೀ–ಶೃಂಗೇರೀ ಜಗದ್ಗುರು

ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳವರ



**ಅಡಿದಾವರೆಗಳಲ್ಲಿ**

ಅವರ ಪೀಠಾರೋಹಣದ ಇಪ್ಪತ್ತೈದನೆಯ ಸಂವತ್ಸರವಾದ ೧೮೮೩ ನೇ ಪ್ಲವನಾಮ ಸಂವತ್ಸರದ ವೈಶಾಖ ಶುದ್ಧ ತೃತೀಯಾ ಮಂಗಳವಾರ (18–4–1961) ದಂದು ಕೂಡಲೀ ಕ್ಷೇತ್ರದಲ್ಲ ಜರುಗಿದ ರಜತ ಮಹೋತ್ಸವದ ಕಾಣಿಕೆಯಾಗಿ

ಈ ಶ್ರೀಮಠೀಯ "ಪ್ರಾಚೀನ ಶಾಸನ ಲೇಖನ ಸಂಗ್ರಹ" ವನ್ನು ಸನ್ನದು ಪ್ರಕಾಶನ ಸಮಿತಿಯ ಪರವಾಗಿ ಸಾಷ್ಟಾಂಗ ಪ್ರಣಾಮಪೂರ್ವಕ ಅರ್ಪಿಸಿರುತ್ತೇನೆ.

ಬಿ. ವೆಂಕಟಶಾಮಣ್ಣ,
ಸಂಚಾಲಕ,
ಸನ್ನದು ಪ್ರಕಾಶನ ಸಮಿತಿ.



ಅರಮನೆ, ಮೈಸೂರು

21-1-1964.

# ಮುನ್ನುಡಿ

ಭಾರತದ ಪ್ರಾಚೀನ ಇತಿಹಾಸವನ್ನು ರೂಪಿಸುವುದರಲ್ಲಿ ಪ್ರಾಚೀನ ಶಾಸನಗಳು ಮತ್ತು ಲೇಖನಗಳು ಬಹಳ ಮುಖ್ಯ ಪಾತ್ರವನ್ನು ವಹಿಸಿವೆ. ಇವುಗಳು ಆಯಾ ದೇಶ ಮತ್ತು ಕಾಲಗಳಲ್ಲಿನ ರಾಜಕೀಯ ಪರಿಸ್ಥಿತಿಯನ್ನಲ್ಲದೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗಳನ್ನೂ ತಿಳಿಸುತ್ತವೆ. ನಮ್ಮ ದೇಶದಲ್ಲಿ ಇದುವರೆವಿಗೆ ದೊರೆತಿರುವ ಶಿಲಾಶಾಸನಗಳೂ ಮತ್ತು ಪತ್ರಗಳೂ ಬಹುಮಟ್ಟಿಗೆ ಮುದ್ರಿತವಾಗಿವೆ. ಈಗಲೂ ಸಹ ಸಂಶೋಧಕರ ಉತ್ಸಾಹ ಮತ್ತು ಶ್ರಮಗಳ ಫಲವಾಗಿ ಹೊಸ ಹೊಸದಾಗಿ ಕೆಲವು ಶಾಸನಗಳು ಬೆಳಕಿಗೆ ಬರುತ್ತಿವೆ. ನಾಡಿನ ಶಾಸನಗಳ ಸಂಗ್ರಹಣ ಮತ್ತು ಪ್ರಕಾಶನ ಕಾರ್ಯದಲ್ಲಿ ವಿಶೇಷ ರೀತಿಯಾದ ಈ ಕಾರ್ಯವನ್ನು ನಿರ್ವಹಿಸಿರುವ "ಎಪಿಗ್ರಾಫಿಯಾ ಇಂಡಿಕಾ" ಮತ್ತು "ಎಪಿಗ್ರಾಫಿಯಾ ಕರ್ನಾಟಿಕಾ" ಎಂಬ ಸಂಪುಟಗಳನ್ನು ನಾವು ಈ ಸಂದರ್ಭದಲ್ಲಿ ಸ್ಮರಿಸಬೇಕಾಗಿದೆ.

ಪ್ರಕೃತದಲ್ಲಿ "ಪ್ರಾಚೀನ ಶಾಸನ ಲೇಖನ ಸಂಗ್ರಹ" ವು ಶ್ರೀಮಜ್ಜಗದ್ಗುರು ಶ್ರೀ ಶ್ರೀ ಕೂಡ್ಲೀ-ಶೃಂಗೇರೀ ಮಠಕ್ಕೆ ಸಂಬಂಧಿಸಿದ ಅನೇಕ ಲೇಖನ, ಶಾಸನ, ವಿಜ್ಞಾಪನಾ ಪತ್ರಿಕೆ ಮತ್ತು ತೀರ್ಪುಗಳನ್ನೊಳಗೊಂಡಿದೆ. ಇಂತಹ ಪ್ರಯತ್ನಗಳಿಂದ ಆಧಾರಸಹಿತವಾದ ಇತಿಹಾಸದ ಅಂಶಗಳು ಬೆಳಕಿಗೆ ಬರಲು ದಾರಿಯಾಗುವುದು. ಈ ಗ್ರಂಥವನ್ನು ಸಿದ್ಧಗೊಳಿಸಿರುವುದರ ಮೂಲಕ ಸಂಶೋಧನೆಯಲ್ಲಿ ತೊಡಗಿರುವವರಿಗೆ ಶ್ರೀ ಶ್ರೀ ಕೂಡ್ಲೀ-ಶೃಂಗೇರೀ ಜಗದ್ಗುರು ಸಂಸ್ಥಾನವು ಉಪಕಾರಮಾಡಿದೆ. ವಿದ್ವಜ್ಜನರು ಈ "ಸಂಗ್ರಹ" ವನ್ನು ಸದುಪಯೋಗಪಡಿಸಿಕೊಳ್ಳಲೆಂದು ಹಾರೈಸುತ್ತೇವೆ.

JAYA CHAMARAJA WADIYAR
ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು

ಶೃಂಗೇರೀ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು ಕೂಡಲೀಕ್ಷೇತ್ರದಲ್ಲಿ ನೆಲೆಸಿದ ಅನಂತರ ಕಾಲೀನ

## ಗುರುಪರಂಪರೆ

| ಸಂಖ್ಯೆ | ಗುರುಗಳ ಹೆಸರುಗಳು | ಕಾಲ ಕ್ರಿ. ಶಕ | ಸಮಾಧಿಸ್ಥಳ |
|---|---|---|---|
| ೧. | ಪ್ರಥಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1546-1586 | ಕೂಡಲೀ |
| ೨. | ಶ್ರೀ ವಿದ್ಯಾರಣ್ಯ ಭಾರತೀ ಸ್ವಾಮಿಗಳವರು | 1551-1617 | ,, |
| ೩. | ದ್ವಿತೀಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1599-1628 | ,, |
| ೪. | ಪ್ರಥಮ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1623-1659 | ,, |
| ೫. | ಶ್ರೀ ಅಭಿನವ ವಿದ್ಯಾರಣ್ಯ ಭಾರತೀ ಸ್ವಾಮಿಗಳವರು | 1643-1665 | ,, |
| ೬. | ತೃತೀಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1658-1678 | ,, |
| ೭. | ದ್ವಿತೀಯ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1673-1714 | ,, |
| ೮. | ಚತುರ್ಥ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1693-1724 | ಉದ್ದಗಟ್ಟೆ |
| ೯. | ತೃತೀಯ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1714-1766 | ಚಿತ್ರದುರ್ಗ |
| ೧೦. | ಪಂಚಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1753-1772 | ಮೈರಾರ |
| ೧೧. | ಚತುರ್ಥ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1772-1808 | ಕೂಡಲೀ |
| ೧೨. | ಷಷ್ಠ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1808-1820 | ,, |
| ೧೩. | ಪಂಚಮ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1820-1854 | ,, |
| ೧೪. | ಸಪ್ತಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1854-1859 | ,, |
| ೧೫. | ಷಷ್ಠ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1859-1875 | ಉದ್ದಗಟ್ಟೆ |
| ೧೬. | ಅಷ್ಟಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು | 1873-1897 | ಮೈರಾರ |
| ೧೭. | ಪ್ರಥಮ ಶ್ರೀ ವಿದ್ಯಾಶಂಕರ ಭಾರತೀ ಸ್ವಾಮಿಗಳವರು | 1875-1879 | ಉದ್ದಗಟ್ಟೆ |
| ೧೮. | ಸಪ್ತಮ ಶ್ರೀ ಶಂಕರ ಭಾರತೀ ಸ್ವಾಮಿಗಳವರು | 1879-1924 | ,, |
| ೧೯. | ದ್ವಿತೀಯ ಶ್ರೀ ವಿದ್ಯಾಶಂಕರ ಭಾರತೀ ಸ್ವಾಮಿಗಳವರು | 1924 | ಉದ್ದಗಟ್ಟೆ |
| ೨೦. | ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳವರು | 1924-1932 | — |
| ೨೧. | ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳವರು | 1932-1936 | ಮೈಸೂರು |
| ೨೨. | ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳವರು | 24-4-1936 ರಿಂದ | |

# ಪ್ರಸ್ತಾವನಾ

ಶ್ರೀಮಚ್ಛಂಕರಭಗವತ್ಪೂಜ್ಯಪಾದಾಚಾರ್ಯರವರು ಸಂಸ್ಥಾಪಿಸಿದ "ದಕ್ಷಿಣಾಮ್ನಾಯ" ಪರಂಪರಾಗತವಾದುದು ಶ್ರೀ ಕೂಡಲಿ ಶೃಂಗೇರಿ ಸಂಸ್ಥಾನ. ಇದು ಮೈಸೂರು ದೇಶದ ಜಿಲ್ಲಾ ಮುಖ್ಯಸ್ಥಳವಾದ ಶಿವಮೊಗ್ಗೆಗೆ ಈಶಾನ್ಯದಿಕ್ಕಿನಲ್ಲಿ ಒಂಭತ್ತು ಮೈಲುಗಳ ಅಂತರದ ಮೇಲಿದೆ. ತುಂಗಾ ಮತ್ತು ಭದ್ರಾ ನದಿಗಳ ಸಂಗಮಸ್ಥಳವೂ "ದಕ್ಷಿಣ ವಾರಣಾಸಿ, ಮಹಾಪ್ರಯಾಗ, ಋಷ್ಯಾಶ್ರಮ" ಎಂಬ ಹೆಸರುಗಳಿಂದ ಪ್ರಸಿದ್ಧವೂ, ಪವಿತ್ರವೂ ಆದ ಶ್ರೀ ಕೂಡಲಿ ಕ್ಷೇತ್ರವು ಇದರ ಮುಖ್ಯಸ್ಥಾನ. ಸುಮಾರು ನಾಲ್ಕುನೂರು ವರ್ಷಗಳಿಂದ ಭಾರತದೇಶದ ಅನೇಕ ರಾಜಮಹಾರಾಜರುಗಳು, ಸಾಧುಸಂತರು ಮತ್ತು ಮಾನ್ಯಶಿಷ್ಯಮಹಾಜನಗಳು, ಇವರುಗಳ ಭಕ್ತಿ, ಆದರ, ಗೌರವಗಳ ಫಲವಾಗಿ ಇದು ಸದಾ ಬೆಳಗುತ್ತಲಿರುವದು ಪ್ರಸಿದ್ಧವಾದ ಅಂಶವಾಗಿದೆ.

*ಗುರುಪರಂಪರಾ ಜ್ಞಾನದ ಅವಶ್ಯಕತೆ.*

ಜಗದ್ಗುರು ಸಂಸ್ಥಾನದ ಶಿಷ್ಯ ಮಹಾಜನಗಳಿಗೆ ಶ್ರೀಮಚ್ಛಂಕರಭಗವತ್ಪೂಜ್ಯಪಾದಾಚಾರ್ಯರು ಬೋಧಿಸಿದ ಅನಾದಿ, ಅದ್ವೈತ ಸಿದ್ಧಾಂತವನ್ನು ನಾನಾಮುಖವಾದ ಪ್ರಚಾರದ ಮೂಲಕ ಪ್ರತಿಪಾದಿಸುವದು ಹೇಗೆ ಸಂಸ್ಥಾನದ ಕರ್ತವ್ಯಗಳಲ್ಲೊಂದಾಗಿದೆಯೋ, ಹಾಗೆಯೇ ಗುರುಪರಂಪರೆಯ ಇತಿಹಾಸವನ್ನು ತಿಳಿಸುವದೂ ಕರ್ತವ್ಯವೆನ್ನಬೇಕು. ವಿವಾಹಕ್ಕೆ ವಧೂವರರ ಗೋತ್ರ ಪರಿಜ್ಞಾನವು ಹೇಗೆ ಉಪಕಾರಕವೋ ಹಾಗೆಯೇ "ಬ್ರಹ್ಮವಿದ್ಯೆ"ಗೆ ಗುರುಪರಂಪರೆಯ ಜ್ಞಾನವು ಉಪಕಾರಕ. ಗುರುಪಾರಂಪರ್ಯ ಜ್ಞಾನದಿಂದ ವಿದ್ಯೆಯು ಹೆಚ್ಚು ವೀರ್ಯವತ್ತಾಗುವದು ಎಂದು "ಯಥಾ ಗೋತ್ರ ಪರಿಜ್ಞಾನಂ ವಿವಾಹಸ್ಯೋಪಕಾರಕಂ। ಪಾರಂಪರ್ಯಪರಿಜ್ಞಾನಂ ತಥಾ ಜ್ಞಾನೋಪಕಾರಕಮ್॥ ಪಾರಂಪರ್ಯ ಪರಿಜ್ಞಾನಾದ್ವಿದ್ಯಾ ಸಾ ವೀರ್ಯವತ್ತರಾ।" ಎಂಬ ಸೂತಸಂಹಿತೆಯ ವಚನಗಳು ತಿಳಿಸುವವು. ಆದುದರಿಂದಲೇ ಬೃಹದಾರಣ್ಯಕೋಪನಿಷತ್ತಿನಲ್ಲಿ ಮಧುಕಾಂಡ, ಯಾಜ್ಞವಲ್ಕ್ಯಕಾಂಡ ಮತ್ತು ಉಪನಿಷತ್ ಕಾಂಡಗಳು ಪೂರೈಸಿದ ಮೇಲೆ ಮೂರುಬಾರಿ "ಅಥ ವಂಶಃ" ಎಂದು ಗುರುಪರಂಪರೆಯು ಪ್ರತಿಪಾದಿಸಲ್ಪಟ್ಟಿದೆ. ಆಚಾರ್ಯ ಶ್ರೀಮಚ್ಛಂಕರಭಗವತ್ಪೂಜ್ಯಪಾದರು ಆ ಮಂತ್ರಗಳಿಗೆ ಭಾಷ್ಯ ಬರೆಯುತ್ತ "ಅಥೇದಾನೀಂ ಬ್ರಹ್ಮವಿದ್ಯಾರ್ಥಸ್ಯ ಮಧುಕಾಂಡಸ್ಯ ವಂಶಃ ಸ್ತುತ್ಯರ್ಥೋ ಬ್ರಹ್ಮವಿದ್ಯಾಯಾಃ। ಮಂತ್ರಶ್ಚಾಯಂ ಸ್ವಾಧ್ಯಾಯಾರ್ಥೋ ಜಪಾರ್ಥಶ್ಚ। ತತ್ರ ವಂಶ ಇವ ವಂಶಃ—ಯಥಾ ವೇಣುವಂಶಃ ಪರ್ವಣಃ ಪರ್ವಣೋ ಹಿ ಭಿದ್ಯತೇ ತದ್ವತ್ ಅಗ್ರಾತ್ಪ್ರಭೃತಿ ಆಮೂಲಪ್ರಾಪ್ತೇಃ ಅಯಂ ವಂಶಃ। ಅಧ್ಯಾಯಚತುಷ್ಟಯಸ್ಯ ಆಚಾರ್ಯಪರಂಪರಾಕ್ರಮೋ ವಂಶ ಇತ್ಯುಚ್ಯತೇ, ತತ್ರ ಪ್ರಥಮಾಂತಃ ಶಿಷ್ಯಃ ಪಂಚಮ್ಯಂತ ಆಚಾರ್ಯಃ ಪರಮೇಷ್ಠೀ ವಿರಾಟ್, ಬ್ರಹ್ಮಣೋ ಹಿರಣ್ಯಗರ್ಭಾತ್ ತತಃ ಪರಂ ಆಚಾರ್ಯಪರಂಪರಾ ನಾಸ್ತಿ" (ಈಗ ಇನ್ನು ಮೇಲೆ ಬ್ರಹ್ಮವಿದ್ಯೆಯೇ ಫಲವಾಗಿ ಉಳ್ಳ ಮಧುಕಾಂಡದ ವಂಶವು ಹೇಳಲ್ಪಡುತ್ತದೆ, ಬ್ರಹ್ಮವಿದ್ಯೆಯನ್ನು ಸ್ತುತಿಸುವದಕ್ಕೋಸ್ಕರ. ಈ ಮಂತ್ರವು ಅಧ್ಯಯನ ಮತ್ತು ಜಪಕ್ಕಾಗಿ ಇರುವದು. ಇಲ್ಲಿ ವಂಶವೆಂದರೆ, ಬಿದಿರಿನಂತೆ—ಹೇಗೆ ಬಿದಿರುಕೋಲು ಪ್ರತಿ ಗಿಣ್ಣು ಗಿಣ್ಣಿಗೂ ಬೇರೆ ಬೇರೆಯಾಗುವುದೋ ಹಾಗೆ ತುದಿಯಿಂದ ಬುಡದವರೆವಿಗೂ ಬಂದಿರುವ ಬೇರೆ ಬೇರೆ ವ್ಯಕ್ತಿಗಳ ವಂಶವಿದು. ನಾಲ್ಕು ಅಧ್ಯಾಯಗಳ ಆಚಾರ್ಯ ಪರಂಪರಾಕ್ರಮವು ವಂಶವೆನ್ನಲ್ಪಡುವುದು. ಇಲ್ಲಿ ಪ್ರಥಮಾಂತಪದವು ಶಿಷ್ಯನನ್ನೂ ಪಂಚಮ್ಯಂತಪದವು ಆಚಾರ್ಯನನ್ನೂ ಪ್ರತಿಪಾದಿಸುವುದು. ಪರಮೇಷ್ಠಿಯೆಂದರೆ ವಿರಾಟ್, ಬ್ರಹ್ಮನೆಂದರೆ ಹಿರಣ್ಯಗರ್ಭನು. ಅವನ ಮೇಲಕ್ಕೆ ಆಚಾರ್ಯಪರಂಪರೆ ಇಲ್ಲ) ಎಂದು ಹೇಳಿ, ವಂಶಪರಂಪರೆಯ ಮಂತ್ರಗಳನ್ನೂ ಅಧ್ಯಯನಮಾಡಿ ಜಪಿಸಬೇಕೆಂದು ವಿಧಿಸಿದ್ದಾರೆ. ಇದೇ ವಿಧವಾದ ಇನ್ನೂ ಅನೇಕ ಪ್ರಮಾಣಗಳಿಂದ ಗುರುಪರಂಪರಾಜ್ಞಾನವೂ ಮತ್ತು ತಚ್ಚರಿತ್ರಪರಿಚಯವೂ ಬ್ರಹ್ಮಜಿಜ್ಞಾಸುವಿಗೆ ಆವಶ್ಯಕವೆಂಬುದು ವ್ಯಕ್ತವಾಗುವುದು.

ಬ್ರಹ್ಮಜ್ಞಾನ ಮಹಿಮೆ.

ಸಮಸ್ತ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಅಭಿನ್ನನಿಮಿತ್ತೋಪಾದಾನನೆನಿಸಿ, ಸರ್ವಜ್ಞನೂ, ಸರ್ವಶಕ್ತಿಸಮನ್ವಿತನೂ, ನಿತ್ಯಶುದ್ಧ, ನಿತ್ಯಬುದ್ಧ, ನಿತ್ಯಮುಕ್ತ ಸ್ವಭಾವನೂ ಆದ ಪರಮಾತ್ಮನನ್ನು ತನ್ನ ಆತ್ಮನೆಂದು ಸಾಕ್ಷಾತ್ಕರಿಸಿಕೊಳ್ಳುವುದೇ ಬ್ರಹ್ಮಜ್ಞಾನವೆನ್ನಲ್ಪಡುವುದು. ಈ ಅಧ್ಯಾತ್ಮಜ್ಞಾನಹೀನನಾದವನು ಆಚರಿಸಿದ ಯಾವ ಸತ್ಕ್ರಿಯೆಗಳೂ ಫಲಪ್ರದಗಳಲ್ಲವೆಂದು ಮನುವು ತನ್ನ ಸ್ಮೃತಿಯಲ್ಲಿ "ನ ಹ್ಯನಧ್ಯಾತ್ಮವಿತ್ ಕಶ್ಚಿತ್ಕ್ರಿಯಾಫಲಮುಪಾಶ್ನುತೇ" ಎಂಬ ವಾಕ್ಯದಿಂದ ತಿಳಿಸುವನು. ಭಗವಾನ್ ಯಾಜ್ಞವಲ್ಕ್ಯ ಮಹರ್ಷಿಗಳೂ ಸಹ ವಾಚಕ್ನವೀ ಗಾರ್ಗಿಯನ್ನು ಕುರಿತು, ಇದೇ ಅರ್ಥವನ್ನು "ಯೋ ವಾ ಏತದಕ್ಷರಂ ಗಾರ್ಗಿ, ಅವಿದಿತ್ವಾ ಅಸ್ಮಿನ್ ಲೋಕೇ ಜುಹೋತಿ, ಯಜತೇ, ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣಿ ಅಂತವದೇವಾಸ್ಯ ತದ್ಭವತಿ" ಬೃ. ೩, ೧೦ (ಹೇ ಗಾರ್ಗಿ, ಈ ಅಕ್ಷರ (ಪರಮಾತ್ಮ) ತತ್ವವನ್ನು ತಿಳಿಯದೇ ಈ ಲೋಕದಲ್ಲಾರು ಹೋಮ ಮಾಡುವರೋ ಯಜ್ಞವನ್ನಾಚರಿಸುವರೋ, ಅನೇಕ ವರ್ಷಗಳು ತಪಸ್ಸನ್ನಾಚರಿಸುವರೋ, ಅದೆಲ್ಲವೂ ನಾಶಹೊಂದುವುದು) ಎಂದು ಹೇಳಿದ್ದಾರೆ.

ಬ್ರಹ್ಮಜ್ಞಾನ ಸಂಪನ್ನನ ಸತ್ಕ್ರಿಯೆಗಳೇ ಫಲಪ್ರದಗಳೆಂದ ಹಾಗೆಯೇ, ಕ್ಷತ್ರಿಯರಿಗೆ ಯುದ್ಧದಲ್ಲಿ ಲಭಿಸುವ ವಿಜಯವೂ, ಸ್ವಾರಾಜ್ಯವೂ, ಆಧಿಪತ್ಯವೂ 'ಬ್ರಹ್ಮಜ್ಞಾನ'ದ ಫಲವೇ ಎನ್ನಲಾಗಿದೆ. ದೇವೇಂದ್ರನು ಆತ್ಮಜ್ಞಾನ ಲಭಿಸುವ ಮುಂಚೆ ಅಸುರರೊಡನೆ ಅನೇಕ ಬಾರಿ ಯುದ್ಧಮಾಡಿ ಪರಾಜಿತನಾದನು. ಆತ್ಮಜ್ಞಾನವು ಲಭಿಸಿದ ಮೇಲೆ, ಅಸುರರನ್ನೆಲ್ಲ ವಧಿಸಿ, ಗೆದ್ದು, ಎಲ್ಲ ದೇವತೆಗಳಿಗೂ ಶ್ರೇಷ್ಠನೆನಿಸಿ, ಸ್ವಾರಾಜ್ಯವನ್ನೂ, ಆಧಿಪತ್ಯವನ್ನೂ ಹೊಂದಿದನು ಎಂದು ಋಗ್ವೇದದ ಕೌಷೀತಕೀ ಉಪನಿಷತ್ತಿನ "ಸ ಯಾವದ್ಧ ವಾ ಇಂದ್ರ ಏತಮಾತ್ಮಾನಂ ನ ವಿಜಜ್ಞೇ ತಾವದೇನಮಸುರಾ ಅಭಿಬಭೂವುಃ. ಸ ಯದಾ ವಿಜಜ್ಞೇಽಥ ಹತ್ವಾಽಸುರಾನ್ ವಿಜಿತ್ಯ ಸರ್ವೇಷಾಂ ದೇವಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರೀಯಾಯ" ಎಂಬ ವಾಕ್ಯಗಳು ತಿಳಿಸುವವು. ಹೀಗೆ ಯಜ್ಞಯಾಗಾದಿ ಸತ್ಕರ್ಮಗಳ ಫಲಪ್ರಾಪ್ತಿ ಮತ್ತು ದುಷ್ಟಶಾಸನ, ವಿಜಯ, ಶ್ರೇಷ್ಠತೆ ಹಾಗೂ ಸ್ವಾರಾಜ್ಯ ಮುಂತಾದ ಸತ್ಫಲಗಳು ಬ್ರಹ್ಮಜ್ಞಾನಿಗಲ್ಲದೆ ಬೇರೆಯವರಿಗಲ್ಲ.

ಈ ಕಲಿಯುಗದಲ್ಲಿ ಬ್ರಹ್ಮವಿದ್ಯೆ.

ಇಂದ್ರಾದಿ ದೇವತೆಗಳೂ, ಕೃತ, ತ್ರೇತಾ, ದ್ವಾಪರಯುಗಗಳಲ್ಲಿ ಜನಿಸಿದ್ದ ಮಹಾನುಭಾವರೂ ಕೇವಲ ಪುಣ್ಯವಂತರು ಮತ್ತು ಪ್ರಭಾವಶಾಲಿಗಳು. ಅವರಿಗೆ ಅವರ ಪುಣ್ಯ ಪ್ರಭಾವದಿಂದ ಬ್ರಹ್ಮಜ್ಞಾನ ಲಭಿಸಿರಬಹುದು. ಆದರೆ ಪಾಪಭೂಯಿಷ್ಠವಾದ ಈ ಕಲಿಯುಗದಲ್ಲಿ ಜನಿಸಿ ಅಲ್ಪಾಯುಗಳೂ, ಮಂದಮತಿಗಳೂ ಆಗಿರುವವರಿಗೆ ಬ್ರಹ್ಮಜ್ಞಾನವು ಸಂಭವಿಸಲಾರದೆಂದು ಶಂಕಿಸಬಹುದು. ಆಚಾರ್ಯ ಶ್ರೀಮಚ್ಛಂಕರ ಭಗವತ್ಪೂಜ್ಯಪಾದರು ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯದ ಹನ್ನೆರಡನೆಯ ಖಂಡದಲ್ಲಿ, "ತದ್ಯುಕ್ತಂ ದೇವಾನಾಂ, ಮಹಾಭಾಗ್ಯತ್ವಾತ್, ನ ತ್ವಿದಾನೀಂ ಮನುಷ್ಯಾಣಾಮಲ್ಪಜೀವಿತತ್ವಾತ್, ಮಂದತರಪ್ರಜ್ಞತ್ವಾಚ್ಚ ಸಂಭವತಿ, ಇತಿ ಪ್ರಾಪ್ತೇ, ಇದಮುಚ್ಯತೇ--ಸ ಸರ್ವಾಂಶ್ಚ ಲೋಕಾನಾಪ್ನೋತಿ, ಸರ್ವಾಂಶ್ಚ ಕಾಮಾನ್. ಇದಾನೀಂತನೋಽಪಿ ಕೋಽಸೌ? ಇಂದ್ರಾದಿವತ್ ಯಃ ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಸಾಮಾನ್ಯೇನ ಕಿಲ ಪ್ರಜಾಪತಿರುವಾಚ. ಅತಃ ಸರ್ವೇಷಾಮಾತ್ಮಜ್ಞಾನಂ ತತ್ಫಲಪ್ರಾಪ್ತಿಶ್ಚ ತುಲ್ಯೈವ ಭವತೀತ್ಯರ್ಥಃ. (ದೇವತೆಗಳು ಮಹಾಭಾಗ್ಯಶಾಲಿಗಳಾದುದರಿಂದ ಅವರಿಗೆ ಸರ್ವಲೋಕ ಕಾಮಗಳ ಪ್ರಾಪ್ತಿಯು ಲಭಿಸಿದುದು ಯುಕ್ತ. ಈ ಕಲಿಕಾಲದ ಮನುಷ್ಯರ ಜೀವಿತವು ಅಲ್ಪಕಾಲೀನವಾದುದರಿಂದಲೂ, ಬುದ್ಧಿಯು ಅತಿಮಂದವಾದುದರಿಂದಲೂ ಅವರಿಗೆ ಈ ಫಲವು ಸಂಭವಿಸದು ಎಂದು ಪೂರ್ವಪಕ್ಷವು ಬರಲು ಈ ಉತ್ತರ ಹೇಳಲ್ಪಡುತ್ತದೆ--ಅವನು (ಬ್ರಹ್ಮಜ್ಞಾನಿಯು) ಎಲ್ಲ ಲೋಕಗಳನ್ನೂ ಎಲ್ಲ ಕಾಮಗಳನ್ನೂ ಪಡೆಯುತ್ತಾನೆ. ಈ ಕಲಿಕಾಲೀನನೂ ಸಹ, ಯಾರವನು? 'ಯಾವನು ಇಂದ್ರಾದಿಗಳಂತೆ ಆ ಆತ್ಮನನ್ನು ಅನುಸರಣಪುರಸ್ಸರವಾಗಿ ಸೇವಿಸಿ ತಿಳಿದುಕೊಳ್ಳುವನೋ, ಅವನು' ಎಂದು ಪ್ರಜಾಪತಿಯು ಸಾಮಾನ್ಯವಾಗಿ ಹೇಳಿರುವನಷ್ಟೆ! ಆದುದರಿಂದ ಆತ್ಮಜ್ಞಾನವೂ, ಅದರ ಫಲಪ್ರಾಪ್ತಿಯೂ ಸಮಾನವಾಗಿಯೇ

ಉಂಟಾಗುವುದು ಎಂದರ್ಥ) ಇದೇ ಆಶಂಕೆಯನ್ನೆತ್ತಿ ಆತ್ಮಜ್ಞಾನಕ್ಕೆ ಅದನ್ನು ಪಡೆಯಲಿಚ್ಛಿಸುವವರು ಯಾವ ದೇಶಕಾಲದವರಾಗಿರುವರೆಂಬುದು ಮುಖ್ಯವಲ್ಲವೆಂದೂ. ತೀವ್ರತರವಾದ ಬ್ರಹ್ಮಜಿಜ್ಞಾಸೆಯೇ ಮುಖ್ಯವೆಂದೂ ಉತ್ತರ ವಿತ್ತಿದ್ದಾರೆ.

ಇನ್ನೊಂದೆಡೆ (ಛಾಂದೋಗ್ಯೋಪನಿಷತ್ತಿನ ಒಂದನೇ ಅಧ್ಯಾಯದ ಒಂಭತ್ತನೇ ಖಂಡದಲ್ಲಿ) "ಸ್ಯಾದೇತತ್ಫಲಂ ಪೂರ್ವೇಷಾಂ ಮಹಾಭಾಗಾನಾಮ್, ನೈದಂಯುಗೀನಾನಾಂ–ಇತ್ಯಾಶಂಕಾನಿವೃತ್ತಯೇ ಆಹ–ಸ ಯಃ ಕಶ್ಚಿತ್ ಏತಮೇವಂ ವಿದ್ವಾನ್ ಉದ್ಗೀಥಂ ಏತರ್ಹಿ ಉಪಾಸ್ತೇ, ತಸ್ಯಾಪ್ಯೇವಮೇವ ಪರೋವರೀಯ ಏವ ಹ ಅಸ್ಯ ಅಸ್ಮಿನ್ ಲೋಕೇ ಜೀವನಂ ಭವತಿ ತಥಾ ಅಮುಷ್ಮಿನ್ ಲೋಕೇ" (ಪೂರ್ವದ ಮಹಾನುಭಾವರಿಗೆ ಈ ಫಲವು ಲಭಿಸುವುದು ಎಂಬುದೇನೋ ಯುಕ್ತವಾಗಬಹುದು. ಈ ಕಲಿಯುಗದವರಿಗೆ ಆಗಲಾರದು ಎಂಬೀ ಸಂಶಯವನ್ನು ನಿವೃತ್ತಿಗೊಳಿಸಲು ಹೇಳಿದನು––ಯಾರಾದರೊಬ್ಬನು ಈ ಉದ್ಗೀಥವನ್ನು ಈ ರೀತಿಯಾಗಿ ತಿಳಿದುಕೊಂಡು ಈ ಕಲಿಕಾಲದಲ್ಲಿಯೂ ಉಪಾಸಿಸುವನೋ, ಈ ಲೋಕದಲ್ಲಿಯೂ ಅವನ ಜೀವನವು ಶ್ರೇಷ್ಠವೆನಿಸುವುದು ಹಾಗೆಯೇ ಪರಲೋಕದಲ್ಲಿಯೂ) ಹೀಗೆ ಹೇಳಿ ಈ ಕಲಿಕಾಲದಲ್ಲಿಯೂ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆ ಮತ್ತು ಜ್ಞಾನಗಳನ್ನು ಹೊಂದಬಹುದೆಂದು ಆಶ್ವಾಸನವಿತ್ತಿದ್ದಾರೆ.

ಜನ್ಮವಿಲ್ಲದುದೂ, ಸಮವಾದುದೂ, ಎನಿಸಿದ ಪರಮಾತ್ಮತತ್ತ್ವದ ವಿಷಯದಲ್ಲಿ ಯಾರಿಗೆ ನಿಶ್ಚಿತವಾದ ತಿಳುವಳಿಕೆಯಿದೆಯೋ ಅವರು ಸ್ತ್ರೀ ಶೂದ್ರಾದಿಗಳಾಗಿದ್ದರೂ ಸಹ ಮಹಾಜ್ಞಾನಸಂಪನ್ನರೆನಿಸುವರು. ಲೋಕವು ಅವರ ಆಳವನ್ನು ತಿಳಿಯಲಾರದು ಎಂದು––

> ಅಜೇ ಸಾಮ್ಯೇ ಚ ಯೇ ಕೇಚಿದ್ಭವಿಷ್ಯಂತಿ ಸುನಿಶ್ಚಿತಾಃ ।
> ತೇ ಹಿ ಲೋಕೇ ಮಹಾಜ್ಞಾನಾಃ ತಚ್ಚ ಲೋಕೋ ನ ಗಾಹತೇ ॥

ಎಂಬ ಮಾಂಡೂಕ್ಯಕಾರಿಕೆಗೆ ಅರ್ಥವಿವರಣೆ ಮಾಡುತ್ತ ನಿರೂಪಿಸಿದ್ದಾರೆ.

ಆಚಾರ್ಯರ ಅವತಾರ

ಹೀಗೆ ಸರ್ವಸಾಧಾರಣವಾದ ಬ್ರಹ್ಮವಿದ್ಯೆಯನ್ನು ಸಂಪ್ರದಾಯಾನುಸಾರವಾಗಿ ಪ್ರವರ್ತನ ಮಾಡಬೇಕೆಂಬುದೇ ಆಚಾರ್ಯ ಶ್ರೀಮಚ್ಛಂಕರ ಭಗವತ್ಪೂಜ್ಯಪಾದಾಚಾರ್ಯರವರ ಅವತಾರದ ಉದ್ದೇಶ. ಈ ಮಾತನ್ನು ಶ್ರೀ ಪದ್ಮಪಾದಾಚಾರ್ಯರವರು "ಬ್ರಹ್ಮವಿದಾಮೇಕಪುಂಡರೀಕಸ್ಯ, ಲೋಕಾನುಗ್ರಹೈಕರಸತಯಾ ಸಮ್ಯಗ್ಜ್ಞಾನಪ್ರವರ್ತನಪ್ರಯೋಜನಕೃತಶರೀರ ಪರಿಗ್ರಹಸ್ಯ ಭಗವತೋ ಭಾಷ್ಯಕಾರಸ್ಯ ಮತಂ ಆಗಮಯಿತವ್ಯಂ" (ಬ್ರಹ್ಮಜ್ಞಾನಿಗಳಿಗೆ ವ್ಯಾಘ್ರ (ಶ್ರೇಷ್ಠ)ರೊಬ್ಬರೇ ಆದ, ಲೋಕಾನುಗ್ರಹವೆಂಬ ಒಂದೇ ಧ್ಯೇಯವುಳ್ಳ. ಯಥಾರ್ಥಜ್ಞಾನವನ್ನು ಲೋಕದಲ್ಲಿ ಪ್ರವರ್ತನ ಮಾಡಬೇಕೆಂಬುದೊಂದೇ ಪ್ರಯೋಜನವನ್ನುದ್ದೇಶಿಸಿ ಶರೀರ ಧರಿಸಿದ ಭಗವಂತ––ಪ್ರಪಂಚದ ಉತ್ಪತ್ತಿ, ವಿನಾಶ, ಪ್ರಾಣಿಗಳ ಆಗಮನ, ನಿರ್ಗಮನಗಳು, ವಿದ್ಯೆ, ಅವಿದ್ಯೆಗಳನ್ನು ತಿಳಿದವ–ರಾದ ಭಾಷ್ಯಕಾರರ ಮತವನ್ನು ವೇದಸಮಾನವಾದುದಾಗಿ ಭಾವಿಸಬೇಕು) ಎಂಬ ಮಾತಿನಿಂದ ಹೇಳಿದ್ದಾರೆ. ವಾರ್ತಿಕಕಾರರಾದ ಶ್ರೀಸುರೇಶ್ವರಾಚಾರ್ಯರೂ ಸಹ ತಮ್ಮ ತೈತ್ತಿರೀಯೋಪನಿಷದ್ಭಾಷ್ಯವಾರ್ತಿಕದ ಕೊನೆಯಲ್ಲಿ ಆಚಾರ್ಯರಿಗೆ "ಮುಮುಕ್ಷುಸಾರ್ಥವಾಹಸ್ಯ" (ಮೋಕ್ಷಾಭಿಲಾಷಿಗಳ ಗುಂಪಿನ ನೇತೃಗಳಾದ) ಎಂಬ ವಿಶೇಷಣ ಕೊಟ್ಟಿದ್ದಾರೆ.

ಆಚಾರ್ಯರ ಅವತಾರ ಕಾಲವು ಕ್ರಿಸ್ತಾಬ್ದ ಮೊದಲನೇ ಶತಕವೆಂದು ಶ್ರೀಮಠದ ಗುರುಪರಂಪರಾಕಾಲ ನಿರ್ದೇಶದ ಆಧಾರದ ಮೇಲೆ ನಿರ್ಧರಿಸಲಾಗಿದೆ. ಅವರ ಮೂವತ್ತೆರಡು ವರ್ಷಗಳ ಅವತಾರ ಕಾಲದ ಚರಿತ್ರೆಯನ್ನು ಸಂಕ್ಷೇಪವಾಗಿ ಪ್ರಾಚೀನರು––

> "ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।
> ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥"

(ಎಂಟು ವರ್ಷ ವಯಸ್ಸಿನಲ್ಲಿ ನಾಲ್ಕು ವೇದಗಳನ್ನೂ ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡಿದರು. ಹನ್ನೆರಡನೇ ವರ್ಷದಲ್ಲಿ ಎಲ್ಲ ಶಾಸ್ತ್ರಗಳನ್ನೂ ತಿಳಿದಿದ್ದರು. ಹದಿನಾರನೇ ವರ್ಷದಲ್ಲಿ ಭಾಷ್ಯವನ್ನು ರಚಿಸಿದರು. ಮೂವತ್ತೆರಡನೇ ವಯಸ್ಸಿನಲ್ಲಿ ಪರಂಧಾಮವನ್ನೈದಿದರು) ಎಂದು ಹೇಳಿದ್ದಾರೆ.

ಆಚಾರ್ಯರು ಅನೇಕ ಪ್ರಕರಣ ಗ್ರಂಥಗಳನ್ನೂ, ಪ್ರಸ್ಥಾನ ತ್ರಯ ಭಾಷ್ಯಗಳು, ವಿಷ್ಣು ಸಹಸ್ರನಾಮ, ಸನತ್ಸುಜಾತೀಯ, ಲಲಿತಾ ತ್ರಿಶತೀಸ್ತೋತ್ರ ಮುಂತಾದವುಗಳ ಭಾಷ್ಯಗಳನ್ನೂ ಬರೆದಿರುವರಲ್ಲದೇ, ಪ್ರಪಂಚಸಾರವೆಂಬ ಗ್ರಂಥದಲ್ಲಿ ನಾನಾ ಮಂತ್ರಗಳ ಜಪವಿಧಿ, ದೇವತಾಧ್ಯಾನ, ಹೋಮ ವಿಧಾನಗಳನ್ನೂ ನಿರೂಪಿಸಿದ್ದಾರೆ. ಇದಲ್ಲದೇ ಬಹುಶಃ ಎಲ್ಲ ದೇವತೆಗಳ ಸ್ತೋತ್ರಗಳನ್ನು ರಚಿಸಿದ್ದಾರೆ. ಅವರ ಕಾಲದಲ್ಲಿ ಕೇವಲ ಕರ್ಮಪರರಾಗಿದ್ದುಕೊಂಡು, ಜ್ಞಾನಮಾರ್ಗವನ್ನೂ, ಸನ್ಯಾಸವನ್ನೂ ನಿರಾಕರಿಸುತ್ತಿದ್ದ ಭೂಮಂಡಲ ಮಂಡನರಾದ ಪಂಡಿತೋತ್ತಮ ಮಂಡನಮಿಶ್ರರನ್ನು ವಾದದಲ್ಲಿ ಜಯಿಸಿ, ಮೊದಲೇ ಪಣತೊಟ್ಟಿದ್ದಂತೆ ಅವರಿಗೆ ಸನ್ಯಾಸಾಶ್ರಮವನ್ನಿತ್ತು ಸುರೇಶ್ವರಾಚಾರ್ಯರೆಂಬ ಅಭಿಧಾನದಿಂದ ತಮ್ಮ ಪ್ರಧಾನ ಶಿಷ್ಯರನ್ನಾಗಿ ಮಾಡಿಕೊಂಡರೆಂಬುದು ಪ್ರಸಿದ್ಧವಾದ ಅಂಶವಾಗಿದೆ.

**ಮಠಸ್ಥಾಪನೆ**

ಆಚಾರ್ಯರು ತಮ್ಮ ಅವತಾರ ಪರಿಸಮಾಪ್ತಿ ಕಾಲದಲ್ಲಿ ಜ್ಞಾನಮಾರ್ಗ ಪ್ರವರ್ತನೆಯಿಂದ ತಾವು ಆಚರಿಸಿದ ಲೋಕೋದ್ಧಾರ ಕಾರ್ಯಗಳು ಮುಂದಿನ ಕಾಲದಲ್ಲಿಯೂ ಅನುವೃತ್ತವಾಗಬೇಕೆಂದು ಸಂಕಲ್ಪಿಸಿ ಪೂರ್ವಾದಿ ಚತುರ್ದಿಕ್ಕುಗಳಲ್ಲಿಯೂ ನಾಲ್ಕು ಆಮ್ನಾಯ ಪೀಠಗಳನ್ನು "ಋಚಾಂ ಪ್ರಾಚೀ ಮಹತೀ ದಿಗುಚ್ಯತೇ, ದಕ್ಷಿಣಾಮಾಹುರ್ಯಜುಷಾಮಪಾರಾಂ, ಅಥರ್ವಣಾಮಂಗಿರಸಾಂ ಪ್ರತೀಚೀ, ಸಾಮ್ನಾಮುದೀಚೀ ಮಹತೀದಿಗುಚ್ಯತೇ" (ಋಕ್ಕುಗಳಿಗೆ ವಿಶಾಲವಾದ ಪೂರ್ವದಿಕ್ಕು ಆಧಾರವೆಂದು ಹೇಳಲ್ಪಟ್ಟಿದೆ. ಯಜುಸ್ಸುಗಳಿಗೆ ಅಪಾರವಾದ ದಕ್ಷಿಣ ದಿಕ್ಕನ್ನು ಹೇಳಿರುವರು. ಅಥರ್ವಾಂಗಿರಸರಿಗೆ ಪಶ್ಚಿಮ ದಿಕ್ಕು, ಸಾಮಗಳಿಗೆ ಮಹತ್ತರವಾದ ಉತ್ತರ ದಿಕ್ಕು ಹೇಳಲ್ಪಟ್ಟಿದೆ.) ಎಂಬ ವೇದವಾಕ್ಯಗಳ ಆಧಾರದ ಮೇಲೆ ಸಂಸ್ಥಾಪಿಸಿದರು. ನಾಲ್ಕು ಪೀಠಗಳ ಕ್ಷೇತ್ರ, ಬ್ರಹ್ಮಚಾರಿ ಸಂಜ್ಞೆ, ಮಹಾವಾಕ್ಯಗಳು, ಸಂಪ್ರದಾಯ, ದೇಶ, ತೀರ್ಥ ಮುಂತಾದವುಗಳು ಈ ಮುಂದೆ ನಿರೂಪಿಸಿರುವಂತೆ ಮಠಾಮ್ನಾಯದಲ್ಲಿ ವಿವರಿಸಲ್ಪಟ್ಟಿವೆ.—

| ಸಂಖ್ಯೆ | ದಿಕ್ಕು | ಸ್ಥಾನ | ಮಠದ ಹೆಸರು | ನಾಮ ಅಥವಾ ಪಾದ | ಸಂಪ್ರದಾಯ | ಕ್ಷೇತ್ರ | ದೈವತ |
|---|---|---|---|---|---|---|---|
| ೧ | ಪೂರ್ವ | ಜಗನ್ನಾಥ ... | ಗೋವರ್ಧನ ಮಠ | ಅರಣ್ಯ, ವನ ... | ಭೋಗವಾರ | ಪುರುಷೋತ್ತಮ | ಜಗನ್ನಾಥ |
| ೨ | ದಕ್ಷಿಣ | ಶೃಂಗೇರಿ. ಕೂಡ್ಲಿ | ಶೃಂಗೇರಿ ಮಠ | ಭಾರತೀ, ಸರಸ್ವತೀ, ಪುರೀ | ಭೂರಿವಾರ | ರಾಮಕ್ಷೇತ್ರ ... | ಆದಿವರಾಹ |
| ೩ | ಪಶ್ಚಿಮ | ದ್ವಾರಕಾ ... | ದ್ವಾರಕಾ ಮಠ | ತೀರ್ಥ, ಆಶ್ರಮ ... | ಕೀಟವಾರ | ದ್ವಾರಕಾ ಕ್ಷೇತ್ರ | ಸಿದ್ಧೇಶ್ವರ |
| ೪ | ಉತ್ತರ | ಬದರಿಕಾಶ್ರಮ | ಜ್ಯೋತಿರ್ಮಠ | ಗಿರಿ, ಪರ್ವತ, ಸಾಗರ | ನಂದವಾರ | ಬದರಿಕಾಶ್ರಮ | ಬದರೀ ನಾರಾಯಣ |

| ದೇವಿ | ಆದ್ಯ ಗುರು | ಅಧಿಪತಿ | ವೇದ | ತೀರ್ಥ | ಮಹಾವಾಕ್ಯ |
|---|---|---|---|---|---|
| ವಿಮಲಾ | ಶ್ರೀಹಸ್ತಾಮಲಕಾಚಾರ್ಯ | ಪ್ರಕಾಶ ಬ್ರಹ್ಮಚಾರಿ ... | ಋಗ್ವೇದ ... | ಮಹೋದಧಿ ... | ಪ್ರಜ್ಞಾನಂ ಬ್ರಹ್ಮ |
| ಶಾರದಾ | ಶ್ರೀ ಸುರೇಶ್ವರಾಚಾರ್ಯ | ಚೈತನ್ಯ ಬ್ರಹ್ಮಚಾರಿ ... | ಯಜುರ್ವೇದ ... | ತುಂಗಭದ್ರಾ ... | ಅಹಂ ಬ್ರಹ್ಮಾಸ್ಮಿ |
| ಭದ್ರಕಾಳಿ | ಶ್ರೀ ಪದ್ಮಪಾದಾಚಾರ್ಯ | ಸ್ವರೂಪ ಬ್ರಹ್ಮಚಾರಿ ... | ಸಾಮವೇದ ... | ಗೋಮತಿ ... | ತತ್ತ್ವಮಸಿ |
| ಪೂರ್ಣಗಿರಿ | ಶ್ರೀ ತೋಟಕಾಚಾರ್ಯ | ನಂದಾಖ್ಯ ಬ್ರಹ್ಮಚಾರಿ .. | ಅಥರ್ವಣವೇದ ... | ಅಲಕನಂದಾ ... | ಅಯಮಾತ್ಮಾ ಬ್ರಹ್ಮ |

ಶ್ರೀ ಕೂಡಲೀ ಶೃಂಗೇರಿ ಜಗದ್ಗುರು ಸಂಸ್ಥಾನವು ಆಚಾರ್ಯರ ದಕ್ಷಿಣಾಮ್ನಾಯಪೀಠ ಗುರುಪರಂಪರೆಯಾಗಿದ್ದು, ಅವಿಚ್ಛಿನ್ನವಾಗಿ ಈವರೆಗೆ ನಡೆದುಕೊಂಡು ಬಂದುದಾಗಿದೆ. ಆಚಾರ್ಯರು ತಮ್ಮ ಮಠಾಮ್ನಾಯದಲ್ಲಿ ಅವರ ಸಮಕಾಲೀನರಾದ ಸುಧನ್ವಮಹಾರಾಜ ಮತ್ತಿತರ ನರೇಂದ್ರರನ್ನು ಸಂಬೋಧಿಸಿ

"ಸುಧನ್ವಾ ಹಿ ಮಹಾರಾಜಃ ತದನ್ಯೇ ಚ ನರೇಶ್ವರಾಃ ।
ಧರ್ಮಪಾರಂಪರೀಮೇತಾಂ ಪಾಲಯಂತು ನಿರಂತರಮ್ ॥"

(ಸುಧನ್ವಮಹಾರಾಜನೂ ಮತ್ತಿತರ ರಾಜರುಗಳೂ ನನ್ನ ಈ ಧರ್ಮ (ಆಮ್ನಾಯಪೀಠಗಳ ಶಿಷ್ಯ) ಪರಂಪರೆಯನ್ನು ಸದಾಕಾಲವೂ ಪರಿಪಾಲಿಸುತ್ತಿರಬೇಕು) ಎಂದು ಅನುಶಾಸನಮಾಡಿರುವಂತೆ ತಿಳಿದುಬರುತ್ತದೆ.

ಹಾಗೆಯೇ ಪೀಠಗಳಲ್ಲಿ ಪರಿಶೋಭಿಸುತ್ತಿರುವ ಲೌಕಿಕಸಂಪತ್ತೂ (ದೇವೋಪಚಾರ ರಾಜೋಪಚಾರಗಳು) ಸಹ ಆಚಾರ್ಯಕಾಲೀನನಾದ ಸುಧನ್ವಮಹಾರಾಜನ ಕುತೂಹಲದ ಫಲವೆಂದೂ, ಮಠಾಮ್ನಾಯದ

"ಸುಧನ್ವನಃ ಸಮೌತ್ಸುಕ್ಯನಿವೃತ್ತ್ಯೈ ಧರ್ಮಹೇತವೇ ।
ದೇವರಾಜೋಪಚಾರಾಂಶ್ಚ ಯಥಾವದನುಪಾಲಯೇತ್ ॥"

(ಸುಧನ್ವನ ಕುತೂಹಲನಿವೃತ್ತಿಗಾಗಿ ಮತ್ತು ಧರ್ಮಕ್ಕೋಸ್ಕರ ಏರ್ಪಡಿಸಲ್ಪಟ್ಟ ದೇವೋಪಚಾರಗಳಾದ ಸುವರ್ಣರಜತಮಂಡಪಾದಿ ಪರಿಕರಗಳನ್ನೂ, ರಾಜೋಪಚಾರಗಳಾದ ಛತ್ರಚಾಮರಾಂದೋಲಿಕಾದ್ಯುಪಚಾರಗಳನ್ನೂ ಯಥಾವತ್ತಾಗಿ ಪರಿಪಾಲಿಸಬೇಕು.) ಎಂಬ ಶ್ಲೋಕವು ತಿಳಿಸುತ್ತದೆ.

ಆಚಾರ್ಯರ ಸತ್ಯಸಂಕಲ್ಪದ ಫಲವಾಗಿ ಅವರ ಆಮ್ನಾಯಪೀಠಗಳಿಗೆ ಅನೇಕ ರಾಜ ಮಹಾರಾಜರುಗಳು ನಾನಾವಿಧವಾಗಿ ಸ್ಥಿರ ಚರಸ್ವತ್ತುಗಳನ್ನು ಅರ್ಪಣ ಮಾಡಿರುವುದು, ಅವುಗಳನ್ನು ಯಥಾಸಂಭವವಾಗಿ ಮುಂದಿ ಮುಂದಿನ ಪ್ರಭುತ್ವದವರೂ ಮುಂದುವರೆಸಿಕೊಂಡು ಬರುತ್ತಿರುವುದೂ ಕಂಡುಬರುತ್ತದೆ.

ಪ್ರಕೃತ ಗ್ರಂಥ.

ಶ್ರೀ ಕೂಡಲೀ ಶೃಂಗೇರೀ ಜಗದ್ಗುರು ಸಂಸ್ಥಾನಕ್ಕೆ, ಅದು ಕೂಡಲೀ ಕ್ಷೇತ್ರದಲ್ಲಿ ನೆಲೆನಿಂತು ಮುಂದುವರೆಯಲಾರಂಭಿಸಿದಂದಿನಿಂದ ಬಂದಿರುವ ಅನೇಕ ದಾನಗಳ ಶಾಸನಗಳು ಮತ್ತು ಚಾರಿತ್ರಕ ಪತ್ರವ್ಯವಹಾರಗಳನ್ನು ಸಾಮಾನ್ಯವಾಗಿ ಸಂಗ್ರಹಿಸಿ ಅವುಗಳಲ್ಲಿ ಕೆಲವನ್ನು ಆರಿಸಿ ಅವುಗಳು "ಶ್ರೀಮಠದ ಚರಿತ್ರೆಯ ಮೂಲ" ಗಳೆಂದು ಮುದ್ರಿಸಿ ಪ್ರಕಟಿಸಲಾಗಿದೆ. ಶ್ರೀಮಠದಲ್ಲಿ ಹಿಂದೆ ಸಮ್ಮುಖ ಸರ್ವಾಧಿಕಾರಿಗಳಾಗಿದ್ದ, ಈಗಿನ ಶ್ರೀ ಶ್ರೀಗಳವರಾದ ಶ್ರೀ ಸಚ್ಚಿದಾನಂದ ಶಂಕರ ಭಾರತೀ ಶ್ರೀಶ್ರೀಗಳವರ ಪೂರ್ವಾಶ್ರಮದ ತೀರ್ಥರೂಪರವರಾದ, ದಿವಂಗತ ಬ್ರಹ್ಮಶ್ರೀ ಆಸ್ಥಾನವಿದ್ವಾನ್ ಹಾನಗಲ್ಲು ಗಣೇಶಶಾಸ್ತ್ರಿಗಳವರು ಈ ಸಂಗ್ರಹ ಕಾರ್ಯವನ್ನು ದಿನಾಂಕ 1-5-1939 ರಂದು ಪ್ರಾರಂಭಿಸಿ ನಿರಂತರ ಪರಿಶ್ರಮದಿಂದ ಮುಂದುವರೆಸಿದರು. ಹಾಗೆ ಅವರು ಸಂಗ್ರಹಿಸಿದ ಪುಸ್ತಕವು ಸಾವಿರಾರು ಪುಟಗಳಿಗೆ ಮೇಲ್ಪಟ್ಟು ಬೃಹದ್ಗ್ರಂಥವಾಗಿದೆ. ಅದರಲ್ಲಿ ಕೆಲವನ್ನು ಮಾತ್ರ ಆರಿಸಿ ಮುಂದೆ ಕಾಣಿಸುವಂತೆ ವಿಭಾಗಗಳನ್ನು ಮಾಡಿ ಮುದ್ರಿಸಲಾಗಿದೆ.

ಒಂದನೆಯ ಭಾಗ—ಕದಂಬರ ಮತ್ತು ವಿಜಯನಗರದವರ ಕಾಲ



ಎರಡನೆಯ ಭಾಗ—ಮಠಾಧೀಶ್ವರರು ಮುಂತಾದವರ ಲೇಖನಗಳು

ಆರನೆಯ ಭಾಗ—ಮೈಸೂರು ಧರ್ಮಪ್ರಭುಗಳು ಮತ್ತು ರಾಜ್ಯಧರರು



# ಒಂದನೆಯ ಭಾಗ

## ಕದಂಬರು ಮತ್ತು ವಿಜಯನಗರದವರ ಕಾಲ

### A. ಕದಂಬನೃಪರ ಕಾಲ

ಕದಂಬರ ಮುಖ್ಯ ರಾಜಧಾನಿ ಬನವಾಸಿ. ಇದು ಮೈಸೂರು ದೇಶದ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೋಕಿನಲ್ಲಿದೆ. ಹಾನಗಲ್ಲು, ಹಲಸಗಿ, ಉಚ್ಚಂಗಿ ಕೋಟೆ ಮುಂತಾದವು ಅವರ ಉಪರಾಜಧಾನಿಗಳು ಆಗಿದ್ದುದಾಗಿ ತಿಳಿಯುತ್ತದೆ. ದಕ್ಷಿಣಾಮ್ನಾಯ ಪರಂಪರೆಯು ಶ್ರೀ ಕೂಡಲೀ ಕ್ಷೇತ್ರದಲ್ಲ

ಮುಂದುವರೆಯುಲಾರಂಭಿಸುವ ಮುಂಚಿನ ತಾಮ್ರ ಶಾಸನಗಳು ಮತ್ತು ಶ್ರೀಮಠದ ಹಳೆಯ ಕಡತದಲ್ಲಿ ದೊರೆತ ಶಾಸನ ಪ್ರತಿಗಳನ್ನು ಮೊದಲನೆಯ ಭಾಗದಲ್ಲಿ ಮುದ್ರಿಸಲಾಗಿದೆ. ಕದಂಬ ನೃಪರಲ್ಲೊಬ್ಬನಾದ ಪುರಂದರರಾಯನೆಂಬುವನು ವಿಜಯಶಂಕರಭಾರತೀಸ್ವಾಮಿಗಳೆಂಬುವವರಿಗೆ ಕೆಲವು ಗ್ರಾಮ ಭೂಮಿಗಳನ್ನೂ, ಮಾನಮರ್ಯಾದೆಗಳನ್ನೂ ಕೊಟ್ಟಿರುವನೆಂಬುದಾಗಿ ಮೊದಲನೆಯ ಶಾಸನದಲ್ಲಿ ಉಕ್ತವಾಗಿದೆ. ಶಾಸನದ ಕಾಲ 1075ನೆಯ ಶ್ರೀಮುಖಸಂವತ್ಸರದ ಮಾಘ ಬಹುಳ ೧೪. ಶಾಸನವು ಮೋಡೀನಾಗರಲಿಪಿಯಲ್ಲಿ ಬರೆಯಲ್ಪಟ್ಟಿದೆ. ಶಾಸನದಲ್ಲಿ ವಿಜಯಶಂಕರ ಭಾರತೀ ಶ್ರೀಗಳವರ ಮಹಿಮೆಗಳು ಪರಕಾಯ ಪ್ರವೇಶಾದಿ ಸಕಲ ಯೋಗಗಳ ಪ್ರಾವೀಣ್ಯವು ವರ್ಣಿಸಲ್ಪಟ್ಟಿವೆ. ಶಾಸನವು ಸುಲಭವಾಗಿ ಅರ್ಥಕೊಡುವುದಿಲ್ಲ. ಐರೋಪ್ಯ ಪ್ರವಾಸಿಕನಾದ ಸರ್ ಫ್ರಾನ್ಸಿಸ್ ಬುಕನನ್, ಎಂ. ಡಿ. ಎಂಬುವವನು ತನ್ನ ' ಮೈಸೂರು ಕೆನರಾ ಅಂಡ್ ಮಲಬಾರ್ " ಎಂಬ ಪ್ರವಾಸ ವೃತ್ತಾಂತ ಗ್ರಂಥದಲ್ಲಿ ಈ ಶಾಸನವನ್ನು ಶ್ರೀಮಠದ ಪ್ರತಿನಿಧಿಗಳಿಂದ ಪಡೆದು ಬಂಗಾಳ ಸರಕಾರಕ್ಕೆ ಕೊಟ್ಟುದು ದಾಗಿ ಬರೆಯುತ್ತಾನೆ. (Book Vol. II, Page 412, date 1-4-1802). ಎರಡನೇ ಶಾಸನವು ಅದೇ ಕದಂಬ ವಂಶದವನೆಂದು ಹೇಳಲಾದ ಕದಂಬರಾಯನೆಂಬುವನಿಂದ ವಿಜಯಶಂಕರಭಾರತೀಸ್ವಾಮಿಗಳವರಿಗೆ ಕೊಟ್ಟ ದಾನಧರ್ಮ ಮತ್ತು ಮಾನಮರ್ಯಾದೆಗಳನ್ನು ತಿಳಿಸುತ್ತದೆ. ಇದೂ ಸಹ ಮೋಡಿ ನಾಗರೀ ಲಿಪಿಯಲ್ಲಿದೆ. ಕೊನೆಯ ನಾಲ್ಕೆಂಟು ಅಕ್ಷರಗಳು ಮಾತ್ರ ಕನ್ನಡದಲ್ಲಿ ಇವೆ. ಇದೂ ಸಹ ಸರಿಯಾಗಿ ಅರ್ಥಕೊಡುವುದಿಲ್ಲ. ಇದರಲ್ಲಿ ಕಾಲ ನಿರ್ದೇಶಕ್ಕೆ " ವಿಂಶತಿ ಮನ್ಮಥೇ ಮಾಸಿ ಮಾಘೇ " ಎಂದು ಬರೆದಿದೆ. ಅದಕ್ಕೆ ಶಾಲೀವಾಹನಶಕ ಪ್ರಾರಂಭವಾದ ಇಪ್ಪತ್ತನೆ ಆವೃತ್ತಿಯ ಮನ್ಮಥ ಸಂವತ್ಸರವೆಂದು ಅರ್ಥಮಾಡಿದ್ದಾರೆ. ಅದು ಶಾಲೀವಾಹನಶಕ 1157 ಆಗುತ್ತೆ. ಈ ಎರಡು ಶಾಸನಗಳೂ ಎಪಿಗ್ರಾಫಿಕಾ ಕರ್ನಾಟಿಕಾ 7ನೇ ವಾಲ್ಯೂಮಿನಲ್ಲಿ 79–80ನೆಯ ಶಾಸನವಾಗಿ ಫೋಟೋ ಸಹಿತವಾಗಿ ಮುದ್ರಿಸಲ್ಪಟ್ಟಿವೆ. ಈ ಶಾಸನಗಳ ವಿಷಯವಾಗಿ ಎಲ್. ಇ. ರೈಸ್ ರವರು ಆ ಗ್ರಂಥದ ತಮ್ಮ ಮುನ್ನುಡಿಯಲ್ಲಿ—

The next grant is Sh. 79, on a Copper plate belonging to the Kudali Sringeri Matha. It is engraved in a most confused and irregular manner, in small and rough Nagari characters, and it is difficult to read or make any sense out of some parts. It professes to be a grant of Villages originally made by Kadamba King Purandara Raya (also apparently called Aditya-Sindhu in another place), in 1154, to Vidyasankara Bharati, the Sringeri Guru, and confirmed by the Vijayanagar king Harihara-Raya, presumbly at the instance of his minister Vidyaranya. Near the beginning are a number of professed quotations from the Sankara Vijaya, giving only the first and last words. But they have not been found in the copies of that work that have been consulted. A good deal of the inscription is taken up with the titles and pretensions of the gurus, the countries over which they claim to have travelled, the languages they knew, and the various branches of learning in which they were proficient, one of which seems very like hypnotism. Sh. 80 is another precisely similar copper plate in the same matha. It professes to be a grant, to the guru Vidyasankara-Bharati, of the Sringapuri and two other agraharas, each containing 360 shares, also other Villages yielding altogether a revenue of 12,000 nishkas, by a Kadamba Raya, on a date expressed in a peculiar manner, meant apparently as equivalent to 1235. Then follow lists of the insignia and symbols of the guru, and of the countries between Setu and Hima in which the Sankararya-guru is worshipped by 2,032 great Brahmanas.

(ಮುಂದಿನ ದಾನಪತ್ರ Sh. ೭೯. ತಾಮ್ರಪಟದ ಮೇಲೆ ಬರೆದಿದೆ. ಕೂಡಲೀ ಶೃಂಗೇರೀ ಮಠಕ್ಕೆ ಸೇರಿದುದು. ಸಣ್ಣ ಮತ್ತು ಒರಟಾದ ನಾಗರೀಲಿಪಿಯಲ್ಲಿ ಬಹಳ ಅವ್ಯವಸ್ಥಿತ ರೀತಿಯಲ್ಲಿ ಕೆತ್ತಲ್ಪಟ್ಟಿದೆ. ಕೆಲವು ಭಾಗಗಳನ್ನು ಓದುವುದೂ ಅರ್ಥಮಾಡಿಕೊಳ್ಳುವುದೂ ಬಹಳ ಕಷ್ಟ. ಕದಂಬರಾಜನಾದ ಪುರಂದರರಾಯ (ಮತ್ತೊಂದು ಕಡೆ 'ಆದಿತ್ಯಸಿಂಧು' ಎಂದೂ ಪ್ರಾಯಶಃ ಕರೆಯಲ್ಪಟ್ಟಿರುವವ) ನಿಂದ 1154 ರಲ್ಲಿ ಶೃಂಗೇರೀ ಗುರುಗಳಾದ ವಿದ್ಯಾಶಂಕರ ಭಾರತಿಯವರಿಗೆ ಮೊಟ್ಟಮೊದಲು ದಾನಮಾಡಲ್ಪಟ್ಟ ಗ್ರಾಮಗಳ ವಿಷಯವಾಗಿದೆ. ತನ್ನ ಮಂತ್ರಿಗಳಾದ ವಿದ್ಯಾರಣ್ಯರ ಸಲಹೆ ಮೇರೆ ವಿಜಯನಗರದ ರಾಜನಾದ ಹರಿಹರರಾಯನಿಂದ ಅನುಮೋದಿಸಲ್ಪಟ್ಟಿದೆ. ಈ ಸನ್ನದಿನ ಪ್ರಾರಂಭದಲ್ಲಿ ಶಂಕರವಿಜಯದಿಂದ ಎಂದು ಹೇಳಿರುವ ಅನೇಕ ಶ್ಲೋಕಗಳ ಆದಿ.... ಅಂತ ಮಾತ್ರ ಉದ್ಧರಿಸಲ್ಪಟ್ಟಿದೆ. ಆದರೆ ಆ ಗ್ರಂಥದ ಪ್ರತಿಗಳಲ್ಲಿ ಇವುಗಳು ಸಿಕ್ಕಿಲ್ಲ. ಶಾಸನದ ಬಹುಭಾಗದಲ್ಲಿ ಗುರುಗಳ ಬಿರುದುಗಳು ಅವರು ಸಂಚರಿಸಿರಬಹುದಾದ ದೇಶಗಳು, ಅವರಿಗೆ ಪರಿಚಿತವಾದ ಭಾಷೆಗಳು, ಅವರು ಪ್ರಾವೀಣ್ಯ ಪಡೆದಿದ್ದ ಶಾಸ್ತ್ರ–ಕಲೆ–ಗಳುಅಣಿಮಾದಿಸಿದ್ಧಿಗಳೂ ಸಹ––ಇವುಗಳ ವರ್ಣನೆಯೇ ತುಂಬಿದೆ. Sh. ೮೦ ಇದೇ ರೀತಿಯ ಇದೇ ಮಠದ ಇಂತಹದೇ ಒಂದು ತಾಮ್ರಪಟ, ಇದೂ ಶೃಂಗಪುರಿಯ ಗುರು ವಿದ್ಯಾಶಂಕರ ಭಾರತಿಯವರಿಗೆ ಕೊಟ್ಟ ಸನ್ನದೆಂದು ಘೋಷಿಸುತ್ತದೆ. ಪ್ರತಿಯೊಂದರಲ್ಲಿಯೂ ೩೬೦ ಭಾಗಗಳುಳ್ಳ ಎರಡು ಅಗ್ರಹಾರಗಳೂ, ಒಟ್ಟಿನಲ್ಲಿ ಹನ್ನೆರಡುಸಾವಿರ ನಿಷ್ಕಗಳ ಆದಾಯ ಉಳ್ಳ ಮತ್ತೆ ಕೆಲವು ಗ್ರಾಮಗಳೂ ಕದಂಬರಾಯನೊಬ್ಬನಿಂದ ದಾನಮಾಡಲ್ಪಟ್ಟಿವೆ. ಪ್ರಾಯಶಃ 1235 ಎಂದು ಅಭಿಪ್ರಾಯ ಬರುವ ವಿಚಿತ್ರ ರೀತಿಯ ಕಾಲಸೂಚನೆ ಮಾಡಲ್ಪಟ್ಟಿದೆ. ಅನಂತರ ಗುರುಗಳ ರಾಜಮರ್ಯಾದೆಗಳ ಮತ್ತು 2,032 ಮಹಾಬ್ರಾಹ್ಮಣರಿಂದ ಆಸೇತು ಹಿಮಾಚಲ ಯಾವ ಯಾವ ಪ್ರಾಂತಗಳಲ್ಲಿ ಶಂಕರಾರ್ಯ ಗುರುಗಳು ಪೂಜಿತರಾಗಿದ್ದಾರೋ ಅವುಗಳ ಪಟ್ಟಿಗಳಿವೆ) ಎಂದು ಬರೆದಿದ್ದಾರೆ.

ಈ ಎರಡು ಶಾಸನಗಳನ್ನು ಕುರಿತು ಶ್ರೀ ವಿ. ಶಾಮಾಚಾರ್ಯರು ಹೀಗೆ ಬರೆದಿದ್ದಾರೆ.—

### ಕೂಡ್ಲಿ ಶೃಂಗೇರಿಯ ಮಠ

ಈ ಮಠದ ವಿಷಯದಲ್ಲಿ ಶಾಸನಗಳಿಂದ ತಿಳಿದುಬರುವುದೇನೆಂದರೆ ಇದು ಅದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಆದಿಶಂಕರಾಚಾರ್ಯರಿಂದ ಶಿಷ್ಯ ಪರಂಪರಾಕ್ರಮದಿಂದ ಈವರೆಗೂ ನಡೆದುಬರುತ್ತಾ ಇದೆ. ಈ ಭರತಖಂಡದಲ್ಲಿ ಅದ್ವೈತ ಮತದವರಲ್ಲಿ ಅನೇಕ ಮಠಗಳಿದ್ದರೂ ಅನಾದಿಕಾಲದಿಂದ ನಡೆದು ಬರುವ ನಾನಾವಿಧ ಬಿರುದುಗಳು ಮರ್ಯಾದೆಗಳು ಕಡೂರು ಡಿಸ್ಟ್ರಿಕ್ಟು ಶೃಂಗೇರಿಯಲ್ಲಿರುವ ಮಠಾಧಿಪತಿಗಳಿಗೂ ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿ ಇರುವ ಕೂಡಲಿ ಶೃಂಗೇರಿ ಮಠಾಧಿಪತಿಗಳಿಗೂ ನಡೆದುಬರುತ್ತಾ ಇವೆ.

ಪೂರ್ವದಲ್ಲಿ ಶಂಕರಾಚಾರ್ಯರ ಪರಂಪರೆಯಲ್ಲಿ ಒಬ್ಬ ಯತಿಗಳು ತಾವು ತೀರ್ಥಯಾತ್ರೆಗೆ ಹೋಗಬೇಕೆಂದು ಉದ್ದೇಶಿಸಿ ಈ ದೇಶದಲ್ಲಿ ಆಚಾರವ್ಯವಹಾರ ಗ್ರಾಮ ಭೂವಿದೇವತಾರ್ಚನಾವ್ಯವಸ್ಥೆಗೋಸ್ಕರ ಮತ್ತೊಬ್ಬರನ್ನು ಯತಿಗಳನ್ನಾಗಿ ಮಾಡಿಟ್ಟು ಹೋದಹಾಗೂ ಹೋದವರು ಚಿರಕಾಲ ಬಾರದೆ ಇರಲು ಈ ದೇಶದಲ್ಲಿದ್ದವರು ಗತಿಸಿ ಬೇರೆ ಯತಿಗಳಿದ್ದ ಹಾಗೂ ಅವರಿಗೂ ಇವರಿಗೂ ಸೌಮನಸ್ಯವಿಲ್ಲದೆ ಈ ಎರಡು ಮಠಗಳಾಗಿ ಬಂದದ್ದರಿಂದ ಸಮಸ್ತ ಬಿರುದುಗಳು, ಮರ್ಯಾದೆಗಳು ಈ ಎರಡು ಮಠಗಳಿಗೂ ಸಮಾನವಾಗಿ ಸಲ್ಲುತ್ತಾ ಬಂದುವೆಂದು ಜನರು ಹೇಳುವರು.

ಅವರಂತೆ ನಾನಾ ವಿಧ ಬಿರುದುಗಳು ಮರ್ಯಾದೆಗಳು ಕೂಡಲಿ ಮಠಕ್ಕೆ ನಡೆಸಿಕೊಂಡು ಬರುವುದೆಂದು ಕದಂಬವಂಶದರಸನಾದ ಪುರಂದರರಾಯನು ಶಕ 1075 (A.D. 1154) ರಲ್ಲಿ ವಿಜಯಶಂಕರ ಭಾರತೀಸ್ವಾಮಿಗಳಿಗೆ ತಾಮ್ರ ಶಾಸನವನ್ನು ಬರೆದು ಕೊಟ್ಟಿರುವನು. ಆ ಶಾಸನವು ಎಪಿಗ್ರಾಫಿಕಾ ಕರ್ನಾಟಿಕ ವಾಲ್ಯೂಂ VIII ಶಿವಮೊಗ್ಗ ಡಿಸ್ಟ್ರಿಕ್ಟ್ I ನೇ ಭಾಗದಲ್ಲಿ ಶಿವಮೊಗ್ಗ ತಾಲ್ಲೂಕಿನಲ್ಲಿ 79 ನೇ ನಂಬರು ಶಾಸನವಾಗಿದೆ. ಈ

ಕದಂಬವಂಶದ ರಾಜರು ವೈಜಯಂತೀಪುರಿ (ಬನವಾಸಿ) ಎಂಬ ನಗರದಲ್ಲಿದ್ದುಕೊಂಡು ಸುಮಾರು ಕ್ರಿಸ್ತಶಕ 250 ರಿಂದ 1235 ರವರಿಗೆ ರಾಜ್ಯಭಾರವನ್ನು ಮಾಡುತ್ತಿದ್ದರೆಂದು ಶಿಲಾಲೇಖ ತಾಮ್ರಲೇಖಗಳಿಂದ ಸ್ಪಷ್ಟ.

**ಕದಂಬ ವಂಶ**

| ಕ್ರಿಸ್ತಶಕ | ರಾಜ | ಕ್ರಿಸ್ತಶಕ | ರಾಜ |
|---|---|---|---|
| 250 | ಶಿವಸ್ಕಂದವರ್ಮ | 1118 | ಸೋಮ |
| 400 | ಮಾಂಧಾತೃವರ್ಮ | 1129 | ತೈಲ |
| 450 | ಶಾಂತಿವರ್ಮ | 1130 | ತೈಲಪದೇವ |
| 500 | ಮಧುವರ್ಮ | 1154 | ಪುರಂದರರಾಯ |
| 870 | ಇಂದ್ರ | 1182 | ಭೊಪ್ಪದೇವ |
| 890 | ಅಜವರ್ಮರಸ | 1200 | ಮುಕ್ಕಣ್ಣ |
| 1047 | ಚಾಮುಂಡರಾಯರಸ | 1204 | ಬ್ರಹ್ಮ |
| 1060 | ಸತ್ಯಾಶ್ರಯದೇವ | 1235 | ಕದಂಬರಾಯ |
| 1063 | ಚಾಮುಂಡನಾಯಕ | | |

ಇದಲ್ಲದೆ ಕದಂಬರವಂಶದಲ್ಲಿ ಕೊನೆಯವನಾದ ಕದಂಬರಾಯನು ಶಕ 1157 (A.D. 1235) ರಲ್ಲಿ ವಿಜಯಶಂಕರ ಭಾರತಿಗಳ ಶಿಷ್ಯರಿಗೆ ಈ ಶಾಸನದಲ್ಲಿ ಕಂಡ ಬಿರುದುಗಳನ್ನು ಇನ್ನೂ ಅನೇಕ ಗ್ರಾಮ ಭೂಮಿಗಳನ್ನು ಕೊಟ್ಟಿರುವುದಾಗಿ ಪೂರ್ವದಲ್ಲಿ ನಮೂದಿಸಿದ ವಾಲ್ಯೂಮಿನಲ್ಲಿ 80 ನೇ ನಂಬರಿನಲ್ಲಿ ಮುದ್ರಿತವಾಗಿರುವ ತಾಮ್ರ ಶಾಸನದಲ್ಲಿ ಸ್ಪಷ್ಟವಿದೆ.

ಆದರೆ ಕಾಲವಿಚಾರಪರರಾದ ಜನರ ಆಕ್ಷೇಪವೊಂದುಂಟು. ಏನೆಂದರೆ ವಿಜಯನಗರ ರಾಜ್ಯವನ್ನು ಆದಿಯಲ್ಲಿ ಸ್ಥಾಪಿಸಿದ ಬುಕ್ಕರಾಯನು ರಾಜ್ಯವನ್ನು ಸ್ಥಾಪಿಸಿದ ಕಾಲ ಕ್ರಿ ಶ ಕ. 14 ನೇ ಶತಕ. ಅದೇಕಾಲದಲ್ಲಿ ವಿದ್ಯಾರಣ್ಯರಿದ್ದರೆಂದು ನಾನಾಸಾಧಕಗಳು ದೊರೆಯುತ್ತವೆ. ಹೀಗಿರುವಾಗ ಕ್ರಿಸ್ತಶಕ 12 ನೇ ಶತಕದಲ್ಲಿ 13 ನೇ ಶತಕದಲ್ಲಿ ವಿದ್ಯಾರಣ್ಯರಿದ್ದರೆಂದು ಹೇಳುವುದು ಹೇಗೆ? ಈ ಎರಡು ಶಾಸನಗಳಲ್ಲೂ ವಿದ್ಯಾರಣ್ಯರ ಹೆಸರು ಬರುತ್ತದೆ. ಆದ್ದರಿಂದ ಈ ಶಾಸನಗಳನ್ನು ಕಾಲವಿಷಯದಲ್ಲಿ ನಂಬುವುದು ಹೇಗೆಂದು ಆಕ್ಷೇಪಿಸುವರು.

ಆದರೆ ಈ ವಿಷಯದಲ್ಲಿ ವಿಮರ್ಶೆಮಾಡಿ ನೋಡಿದರೆ ಆಕ್ಷೇಪಕ್ಕೆ ಕಾರಣವಿಲ್ಲ. ಮುಖ್ಯವಾಗಿ ಪೂರ್ವಪೂರ್ವ ಸಂಗತಿಗಳನ್ನು ಶಿಲಾಲೇಖ ತಾಮ್ರಲೇಖ ಅಥವ ನಂಬಿಕೆಗೆ ಅರ್ಹವಾದ ಗ್ರಂಥಗಳು ಇವುಗಳಿಂದ ನಿರ್ಣಯಿಸಬೇಕೇ ಹೊರತು ಈಗಿನ ಕಾಲದ ಬರವಣಿಗೆಗಳಿಂದಲೂ ಹೇಳಿಕೆ ಕಥೆಗಳಿಂದಲೂ ನಿಶ್ಚಯಿಸುವುದಕ್ಕೆ ಯೋಗ್ಯವಲ್ಲವೆಂದು ವಿಚಾರಪರರೆಲ್ಲ ತಿಳಿಯಬೇಕಷ್ಟೆ.

ಪ್ರಕೃತ ಪುರಂದರರಾಯರ ಮತ್ತು ಕದಂಬರಾಯರ ತಾಮ್ರಶಾಸನಗಳೇನೋ ಅವೆ. ಅವುಗಳಲ್ಲಿ "ವಿದ್ಯಾರಣ್ಯ" ರ ಹೆಸರು ಬರುತ್ತದಲ್ಲಾ ಹೇಗೆ ಸಂಗತವಾಗುತ್ತದೆಂದು ಕೇಳಿದರೆ ಒಂದು ಪರಂಪರೆಯಲ್ಲಿ ಒಂದೇ ಹೆಸರಿನವರು ಅನೇಕರಿರುತ್ತಾರೆ. ಕುರುವಂಶದಲ್ಲಿ ಭೀಮಾರ್ಜುನರೆಂದು ಪ್ರಸಿದ್ಧರು ಪೂರ್ವದಲ್ಲಿಯೂ ಇದ್ದರು. ಬಳಿಕ ಪಾಂಡುರಾಯರ ಮಕ್ಕಳಿಗೂ ಅದೇ ಹೆಸರಿತ್ತು. ಹಾಗೆ ಪುರಂದರರಾಯರ ಕಾಲದಲ್ಲಿ ವಿದ್ಯಾರಣ್ಯರೆಂದು ಪ್ರಸಿದ್ಧರಾದ ಯತಿಗಳು ಈ ಪರಂಪರೆಯಲ್ಲಿರಬಹುದು. ಈ ಹೆಸರಿನವರು ಒಬ್ಬರೇ ಇರಬೇಕೆಂದು ನಿಯಮವೇನೂ ಇರುವುದಿಲ್ಲ. ಇದಕ್ಕೆ ಸಾಕ್ಷಿಯಾಗಿ 1591 ನೇ ಶಕವರ್ಷದಲ್ಲಿ ಅಂದರೆ ಕೆಳದಿ ಸೋಮಶೇಖರ ನಾಯಕರ ಕಾಲದಲ್ಲಿ ಬರೆದ ಶಾಸನದಲ್ಲಿ "ವಿದ್ಯಾರಣ್ಯ ಭಾರತೀಸ್ವಾಮಿಗಳವರ ಕರಕಮಲ ಸಂಜಾತರಾದ ನರಸಿಂಹ ಭಾರತೀಸ್ವಾಮಿಗಳಿಗೆ" ಎಂದು ಮೇಲೆ ಕಂಡ ಎಪಿಗ್ರಾಫಿಕಾ ವಾಲ್ಯುಂನಲ್ಲಿ 81 ನೇ ನಂಬರಿನಲ್ಲಿ ಮುದ್ರಿತವಾದ ಶಾಸನದಲ್ಲಿ ಈ ಮಠದ ಗುರುಪೀಠಿಗೆಯಲ್ಲಿಯೇ ಕ್ರಿಸ್ತಶಕ 17 ನೇ ಶತಕದಲ್ಲಿ ಮತ್ತೊಬ್ಬರು ವಿದ್ಯಾರಣ್ಯರಿದ್ದರೆಂದು ಸ್ಪಷ್ಟ ತಿಳಿದುಬರುತ್ತಾ ಇದೆ.

ಆದ್ದರಿಂದ ಕದಂಬ ಕುಲೋದ್ಭವರಾದ ಪುರಂದರರಾಯರ ಕಾಲದಲ್ಲಿಯೂ ವಿದ್ಯಾರಣ್ಯರೆಂದು ಈ ಮಠಕ್ಕೆ ಸೇರಿದವರಿರಬಹುದೆಂದು ಹೇಳಬಹುದಾಗಿದೆ.

ಈ ಕಾರಣದಿಂದ ಆದಿಶಂಕರಾಚಾರ್ಯರ ಕಾಲದಿಂದಲೂ ಅನೇಕ ರಾಜ ಪರಂಪರೆಯಿಂದಲೂ ಈ ಮಠವು ಬಹುಮಾನಿತವಾಗಿ ಬಂದಿದೆ ಎಂದು ಶಿಲಾಲೇಖ ತಾಮ್ರಲೇಖಗಳು ಸ್ಪಷ್ಟಪಡಿಸುತ್ತವೆ.

ವಿ. ಶಾಮಾಚಾರ್ಯ
(ಸಂಸ್ಕೃತದಲ್ಲಿ ಸಹಿ ಇದೆ)
ಟ್ರಾವಲಿಂಗ್ ಪಂಡಿತ-ಲೈಬ್ರರಿ-ಮತ್ತು ಆರ್ಕಲಾಜಿಕಲ್ ಇಲಾಖೆ, ಮೈಸೂರು.

ಮೊಕ್ಕಾಂ ಕೂಡ್ಲಿ
ತಾ 5-11-1922

ಇವೆರಡು ಶಾಸನಗಳೂ 1837 ರಲ್ಲಿ ಬೊಂಬಾಯಿನ ಸದರ ದಿವಾನೀ ಅದಾಲತ್ತು ಕೋರ್ಟಿಗೆ ಹಾಜರಾಗಿದ್ದವು.

## ವಿಜಯನಗರದವರ ಕಾಲ

ವಿಜಯನಗರ ಚಕ್ರವರ್ತಿಗಳು ಕರ್ನಾಟಕ ಸಾಮ್ರಾಜ್ಯ ಪ್ರತಿಷ್ಠಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯ ಭಗವತ್ಪೂಜ್ಯಪಾದಾಚಾರ್ಯರವರ ಅನುಗ್ರಹದಿಂದ ಕರ್ನಾಟಕ ಸಿಂಹಾಸನವನ್ನಲಂಕರಿಸಿ ಕರ್ನಾಟಕ ರಾಜ್ಯವನ್ನು ಆಳುತ್ತಿದ್ದುದು ಚರಿತ್ರೆಯಲ್ಲಿ ಪ್ರಸಿದ್ಧವಾದ ವಿಷಯ. ಚಕ್ರವರ್ತಿಗಳು ಶ್ರೀ ವಿದ್ಯಾರಣ್ಯಭಗವತ್ಪೂಜ್ಯಪಾದಾಚಾರ್ಯರವರು ಅಧಿಷ್ಠಿಸಿದ್ದ ದಕ್ಷಿಣಾಮ್ನಾಯಪೀಠಕ್ಕೆ ನಾನಾವಿಧವಾದ ದಾನಧರ್ಮಗಳನ್ನು ಮಾಡಿರುವುದು ಅನೇಕ ಶಿಲಾಶಾಸನ ತಾಮ್ರಶಾಸನಗಳಿಂದ ವ್ಯಕ್ತವಾಗಿದೆ. ವಿಜಯನಗರ ಸಾಮ್ರಾಜ್ಯವು 1565ರಲ್ಲಿ ನಡೆದ ತಾಳೀಕೋಟೆಯ ಯುದ್ಧಾನಂತರ ವಿಜಯನಗರ (ಹಂಪೆ) ರಾಜಧಾನಿಯನ್ನು ತ್ಯಜಿಸಿ ಪೂರ್ವಕ್ಕೆ ಬಹುದೂರ (ಪೆನಗುಂಡೆ ಚಂದ್ರಗಿರಿಗಳಿಗೆ) ಸಾಗಿಸಲ್ಪಟ್ಟಿತು.

ಅದೇ ಸಮಯದಲ್ಲಿಯೇ ಆಚಾರ್ಯರ ದಕ್ಷಿಣಾಮ್ನಾಯ ಪರಂಪರೆಯಾದ ಶೃಂಗೇರೀಪೀಠವು ಶ್ರೀಕೂಡಲಿ ಕ್ಷೇತ್ರದಲ್ಲಿ ನೆಲೆಸುವಂತಾಯಿತೆಂಬುದು ಮುಂದಿನ ಕೆಲವು ಕಾಗದಪತ್ರಗಳ ಅವಲೋಕನದಿಂದ ಸ್ಪಷ್ಟಪಡುವುದು. ಇಲ್ಲಿ ಮುದ್ರಿಸಿರುವ ವಿಜಯನಗರದ ಐದು ಶಾಸನಗಳು ಆ ಘಟನೆಗಿಂತ ಮುಂಚಿನ ಕಾಲದವುಗಳಾಗಿದ್ದು ಇವುಗಳಲ್ಲಿ ೩-೪-೫ ನೆಯ ಶಾಸನಗಳು ಶ್ರೀಮಠದ ಹಳೆಯ ಕಡತಗಳಲ್ಲಿ ಪ್ರತಿಮಾಡಿಡಲ್ಪಟ್ಟಿದ್ದವುಗಳನ್ನು ಇಲ್ಲಿ ವಿಮರ್ಶಕರ ಉಪಯೋಗಕ್ಕಾಗಿ ಉದ್ಧರಿಸಿ ಮುದ್ರಿಸಲಾಗಿದೆ.

ವಿಜಯನಗರದ ಮೂರನೇ ಚಕ್ರವರ್ತಿಯಾದ ಎರಡನೆ ಹರಿಹರನು ಶಾಲಿವಾಹನಶಕ ೧೩೦೫ ನೆಯ ರುಧಿರೋದ್ಗಾರಿ ಸಂವತ್ಸರ ಫಾಲ್ಗುಣ ಶುದ್ಧ ದಶಮಿಯಂದು ಆರಗ ರಾಜ್ಯದ ಗಾಜನೂರು ಸೀಮೆಗೆ ಸೇರಿದ ನಾಲ್ಕು ಉಪಗ್ರಾಮಗಳೊಡನೆ "ಗಂಗೆಮಂಡಲ" ಎಂಬುದನ್ನು ದಾನಕೊಟ್ಟನೆಂದು ವಿಜಯನಗರದ ಮೊದಲನೆಯ ಶಾಸನ (ನಂ. ೩) ತಿಳಿಸುತ್ತದೆ. ಶೃಂಗೇರಿ ಶಾರದಾ ಅಮ್ಮನವರ ನಿತ್ಯೋತ್ಸವ ಮತ್ತು ನವರಾತ್ರೆ ಪೂಜೆಗೋಸ್ಕರ ಈ ದಾನವನ್ನು ತುಂಗಭದ್ರಾನದೀ ತೀರದಲ್ಲಿ ವಿರೂಪಾಕ್ಷ ಸನ್ನಿಧಿಯಲ್ಲಿ ದಾನಕೊಟ್ಟಂತೆ ತಿಳಿಸುತ್ತದೆ. ಶಾಸನದ ಆದಿಯಲ್ಲಿ ರಾಜನ ವಂಶ ವಿಕ್ರಮಾದಿಗಳನ್ನು ವಿಶೇಷವಾಗಿ ಅಲಂಕಾರ ರೀತಿಯಲ್ಲಿ ವರ್ಣಿಸಲಾಗಿದೆ.

ವಿಜಯನಗರದ ಎರಡನೆಯ ತಾಮ್ರ ಶಾಸನವು (ನಂ. ೪) ಅದೇ ಹರಿಹರರಾಯನು ಶಾಲಿವಾಹನಶಕ ೧೩೧೬ನೆಯ ಭಾವ ಸಂವತ್ಸರದ ಫಾಲ್ಗುಣ ಶುದ್ಧ ೧೦, ಗುರುವಾರದಂದು ಭಾರದ್ವಾಜಗೋತ್ರದ ನಾರಾಯಣ ವಾಜಪೇಯ ಯಾಜಿಗಳು ನರಹರಿ ಸೋಮಯಾಜಿಗಳು ವಸಿಷ್ಠ ಗೋತ್ರದ ಪಾಂಡುರಂಗ ದೀಕ್ಷಿತರು ಈ ಮೂವರು ವಿದ್ವಾಂಸರಿಗೆ ಕೊಟ್ಟ ದಾನವನ್ನು ತಿಳಿಸುತ್ತದೆ. ಹೀಗೆ ದಾನ ಕೊಡಲು ಶ್ರೀವಿದ್ಯಾರಣ್ಯ ಶ್ರೀಪಾದರವರ ಸನ್ನಿಧಿಯಲ್ಲಿ ರಾಜರ ಹೆಸರಿನಲ್ಲಿ ಚತುರ್ವೇದ ಭಾಷ್ಯಗಳ ಪ್ರವರ್ತಿಸುವ ಸಂಬಂಧವೇ ಕಾರಣವೆಂದು ಹೇಳಲಾಗಿದೆ. ಶಾಸನದ ಆದಿಯಲ್ಲಿ "ವಿದ್ಯಾತೀರ್ಥೇಶ ಪಾದಾಬ್ಜ ಪೂಜನಾತ್ ಬುಕ್ಕ ಭೂಪತೇಃ। ಆಸೀದ್ಧರಿಹರೋ ರಾಜಾ ಕ್ಷೀರಾಬ್ಧೇರಿವ ಚಂದ್ರಮಾಃ" (ವಿದ್ಯಾತೀರ್ಥ ದೇವರ ಪಾದಪದ್ಮಗಳ ಪೂಜನದ ಫಲವಾಗಿ ಕ್ಷೀರಸಮುದ್ರದಿಂದ ಚಂದ್ರನುದಯಿಸುವಂತೆ ಬುಕ್ಕ ಭೂಪತಿಗೆ ಹರಿಹರರಾಜನು ಜನಿಸಿದನು) ಎಂದು ಹೇಳಲಾಗಿದೆ.

ಮೂರನೆಯ ಶಾಸನವು (ನಂ.೫) ಅದೇ ಹರಿಹರರಾಜನು ಶಾಲೀವಾಹನಶಕ ೧೩೧೮ ನೆಯ ಧಾತ್ರಸಂವತ್ಸರದ ಮಾಘಶುದ್ಧ ಸಪ್ತಮಿಯಂದು ತುಂಗಭದ್ರಾನದೀ ತೀರದ ವಿರೂಪಾಕ್ಷ ಸನ್ನಿಧಿಯಲ್ಲಿ ಬಸವಾಪಟ್ಟಣದ ಸೀಮೆಗೆ ಸೇರಿದ ದಂಡೂರು ಗ್ರಾಮವನ್ನು ಶೃಂಗೇರೀ ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರಿಗೆ ದಾನಕೊಟ್ಟಿದ್ದನ್ನು ತಿಳಿಸುತ್ತದೆ. ಈ ಶಾಸನದ ಆದಿಯಲ್ಲಿಯೂ ರಾಜನ ವಂಶ ಮತ್ತು ಪ್ರಭಾವಗಳನ್ನು ವಿಶೇಷವಾಗಿ ವರ್ಣಿಸಲಾಗಿದೆ. ಈ ದಂಡೂರು ಗ್ರಾಮವನ್ನು ಕುರಿತ ಮುಂದುಮುಂದಿನ ರಾಜರುಗಳ ಸನ್ನದುಗಳು ಶ್ರೀಮಠಕ್ಕೆ ಇದ್ದ ವಿಚಾರವನ್ನು ಮತ್ತು ಆ ಗ್ರಾಮದ ವಿಷಯದಲ್ಲಿ ಶೃಂಗೇರಿಯಲ್ಲಿ ಇರುವ ಮಠ ಮತ್ತು ಈ ಮಠಗಳಿಗೆ ವಿವಾದ ಸಂಭವಿಸಿ ಆ ಕಾಲದಲ್ಲಿ ಸಂತೇಬೆನ್ನೂರು ಪಾಳೆಯಗಾರರು ಗೋವಳಕೊಂಡ ರಾಜ್ಯದ ದಿವಾನರಾದ ಮಾದಣ್ಣ ಪಂಡಿತರಿಗೆ ಬರೆದ ಕಾಗದಗಳನ್ನು ಮುಂದೆ ಕಾಣಬಹುದು.

ನಾಲ್ಕನೆಯ ತಾಮ್ರ ಶಾಸನವು (ನಂ. ೬) ಶ್ರೀರಂಗರಾಯನೆಂಬುವನು ಶಾಲಿವಾಹನಶಕ ೧೫೨೨ ನೆಯ ವಿಕ್ರಮಸಂವತ್ಸರದ ಆಶ್ವಯುಜ ಶು. ೧೦ ಬುಧವಾರದಂದು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರಿಗೆ ಕೂಡಲೂರು ಎಂಬ ಗ್ರಾಮವನ್ನು ದಾನಮಾಡಿರುವುದನ್ನು ವಿವರಿಸುತ್ತದೆ. ಶ್ರೀರಂಗರಾಯನು ನರಸಿಂಹ ಭೂಪನ ಮೊಮ್ಮಗ ತಿರುಮಲರಾಜನ ಮಗ ಕೂಡಲೂರು ಗ್ರಾಮವು ವೇದಾವತಿ ಜಹರಿ ಎಂಬ ನದಿಗಳ ಸಂಗಮ ಸ್ಥಳಕ್ಕೆ ಒಂದು ಹರದಾರಿ ದೂರದಲ್ಲಿದೆ. ಅದರ ಪೂರ್ವಕ್ಕೆ ಶಂಭು ಗ್ರಾಮ, ದಕ್ಷಿಣಕ್ಕೆ ಮುಂಡಗಂಟೆ, ಪಶ್ಚಿಮಕ್ಕೆ ಗೀಪುರಿ, ಉತ್ತರಕ್ಕೆ ಶಟ್ಟಿಗೆರೆ ಇರುವುದಾಗಿ ಈ ಶಾಸನದಲ್ಲಿ ಹೇಳಿದೆ.

ಐದನೇಯ ತಾಮ್ರ ಶಾಸನವು (ನಂ. ೭) ಶ್ರೀ ಕೃಷ್ಣದೇವರಾಯರು ಶಾಲಿವಾಹನ ಶಕ ೧೪೩೯ ನೇ ವಿಭವ ಸಂವತ್ಸರದ ಮಾಘ ಬಹುಳ ೧೪ ರಲ್ಲು ಶ್ರೀ ಚಂದ್ರಶೇಖರ ಭಾರತೀಸ್ವಾಮಿಗಳಿಗೆ ರಾಯದುರ್ಗ ಸೀಮೆಯ (ವೆಂಠೆಯ) ದೇವಸಮುದ್ರದ ಸೀಮೆಯಲ್ಲಿಯ ವೆಂಕಟಾಪುರ, ಉರತಹಾಳು ಎಂಬ ಎರಡು ಗ್ರಾಮಗಳನ್ನು ದಾನಕೊಟ್ಟ ವಿಚಾರ ತಿಳಿಸುತ್ತದೆ.

## ಎರಡನೆಯ ಭಾಗ

## ಮಠಾಧೀಶ್ವರರು ಮುಂತಾದವರ ಲೇಖನಗಳು

ಎರಡನೆಯ ಭಾಗದಲ್ಲಿ A ಯಿಂದ H ವರೆಗೆ ಎಂಟು ವಿಭಾಗಗಳನ್ನು ಮಾಡಿ ಸನ್ನದುಗಳನ್ನು ಮುದ್ರಿಸಲಾಗಿದೆ.

### A ಶೃಂಗಗಿರಿಯಲ್ಲಿರುವ ಮಠ.

ಶೃಂಗಗಿರಿಯಲ್ಲಿರುವ ಮಠದ ಮೂರು ಪತ್ರಗಳನ್ನು ಮುದ್ರಿಸಿದೆ. ಮೊದಲನೆಯ ಪತ್ರವು ದಕ್ಷಿಣಾಮ್ನಾಯ ಪರಂಪರೆಯು ಶೃಂಗೇರೀ ಕ್ಷೇತ್ರದಿಂದ ಕೂಡ್ಲೀ ಕ್ಷೇತ್ರಕ್ಕೆ ಬದಲಾಯಿಸಲ್ಪಡಲು ಸಂಭವಿಸಿದ ಸಂದರ್ಭವನ್ನು ವಿವರಿಸುತ್ತದೆ. ಅದು ಶೃಂಗೇರೀ ಶ್ರೀರಾಮಚಂದ್ರ ಭಾರತೀಸ್ವಾಮೀಗುರುಕರಕಮಲ ಸಂಜಾತರಾದ ಶೃಂಗೇರೀ ಶ್ರೀ ನರಸಿಂಹಭಾರತಿಸ್ವಾಮಿಗಳಿಗೆ ಅವರ ಪ್ರಿಯಶಿಷ್ಯರಾದ ಶೃಂಗೇರೀ ಶ್ರೀಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ರಾಮಚಂದ್ರಭಾರತಿಗಳೆಂಬುವರು ಭಾಷಾಪೂರ್ವಕಬರಿಸಿ ಪಪ್ಪಿಸಿದ ನಿಬಂಧನೆ ಬಿನ್ನವತ್ತಳೆ. ಈ ನಿಬಂಧನೆ ಬಿನ್ನವತ್ತಳೆಯ ಕಾಲ ಶಾ. ಶ. ೧೫೦೪ (A.D. 158?) ನೆಯ ವಿಷುಸಂವತ್ಸರದ ಮಾಘ ಶು. ಸಪ್ತಮಿ. ಇದರಿಂದ ತಿಳಿಯುವ ಅಂಶಗಳು :— " ಶೃಂಗೇರೀ ಶ್ರೀ ನರಸಿಂಹಭಾರತೀಸ್ವಾಮಿಗಳವರು ವಾರಾಣಸೀ ಮುಂತಾದ ಮಹಾಯಾತ್ರೆಗೆ ಚಿತ್ತೈಸಿದ್ದರು. ಆ ಸಂದರ್ಭದಲ್ಲಿ ಶೃಂಗೇರೀಯ ಮಹಾಜನಗಳು ಈ ನಿಬಂಧನೆ ಬಿನ್ನವತ್ತಳೆಯ ಲೇಖಕರಾದ ರಾಮಚಂದ್ರಭಾರತಿಗಳಿಗೆ ಕೃತ್ರಿಮತನದಿಂದ ಸನ್ಯಾಸಾಶ್ರಮ ಕೊಡಿಸಿದರು ಮತ್ತು ಶ್ರೀ ನರಸಿಂಹಭಾರತೀಸ್ವಾಮಿಗಳವರು ಶೃಂಗೇರೀಗೆ ಹಿಂದಿರುಗಿ ಬರಬಾರದೆಂದು ದುರಾಲೋಚನೆಯಿಂದ ಸ್ಥಳ ಬಂದುಕಟ್ಟುಮಾಡಿಕೊಂಡರು. ಶ್ರೀ ನರಸಿಂಹಭಾರತೀಸ್ವಾಮಿಗಳು ತೀರ್ಥಯಾತ್ರೆ ಮಾಡಿಕೊಂಡು ಸಕಲದೇಶ ಸಂಚಾರಮಾಡಿಕೊಳ್ಳುತ್ತ ಶೃಂಗೇರೀಗೆ

ಚಿತ್ತೈಸುವುದಕ್ಕಾಗಿ ತುಂಗಭದ್ರಾ ಸಂಗಮಸ್ಥಳವಾದ ಶ್ರೀ ಕೂಡಲಿ ಕ್ಷೇತ್ರಕ್ಕೆ ದಯಮಾಡಿಸಿದರು. ಶೃಂಗೇರೀ ಸ್ಥಳದ ವಿದ್ಯಮಾನಗಳೆಲ್ಲ ಅವರಿಗೆ ತಿಳಿದವು. ಆಗ ಅವರು ಶೃಂಗೇರೀ ಮಹಾಜನಗಳನ್ನು ಮತ್ತು ನಿಬಂಧನೆ ಬಿನ್ನವತ್ತಳೆಯ ಲೇಖಕರಾದ ರಾಮಚಂದ್ರಭಾರತಿಗಳನ್ನು ಕೂಡಲಿ ಕ್ಷೇತ್ರಕ್ಕೆ ಬರಮಾಡಿಕೊಂಡರು. ರಾಮಚಂದ್ರಭಾರತಿಗಳು ಶ್ರೀ ನರಸಿಂಹಭಾರತೀಶ್ರೀಗಳವರ ಆಜ್ಞೆಯಂತೆ ನಡೆದುಕೊಳ್ಳುತ್ತೇವೆಂದು ವಿನಯಪೂರ್ವಕ ಬಿನ್ನಹವಮಾಡಿಕೊಂಡರು. ಶ್ರೀ ನರಸಿಂಹಭಾರತೀ ಸ್ವಾಮಿಗಳಿಗೆ ಪರಮ ಕರುಣೆ ಹುಟ್ಟಿತು. ರಾಮಚಂದ್ರಭಾರತಿಗಳು ಶೃಂಗೇರೀ ಸ್ಥಳದಲ್ಲಿ ಶಾರದಾಪೂಜೆ ಮುಂತಾದ ವಿನಿಯೋಗಗಳನ್ನು ನಿಬಂಧನೆ ಪ್ರಕಾರ ನಡೆಸಿಕೊಂಡು ಆಜ್ಞಾನುಸಾರ ನಡೆದುಕೊಳ್ಳುವಂತೆ ಅಪ್ಪಣೆಕೊಟ್ಟರು. ಅದರಂತೆ ಈ ಪತ್ರ ಬರೆದ ಕಾಲದವರೆಗೂ ಅದೇ ರೀತಿ ಅಮ್ಮನವರ ಪೂಜೆ ಮಾಡಿಕ್ಕೊಂಡು ಆದಾಯ ವೆಚ್ಚದ ಲೆಖ್ಖ ಶಿಲ್ಕು ಹಣ ಶ್ರೀ ನರಸಿಂಹಭಾರತೀ ಸ್ವಾಮಿಗಳವರಿಗೆ ನಿಬಂಧನೆ ಬಿನ್ನವತ್ತಳೆಯ ಲೇಖಕರು ಒಪ್ಪಿಸುತ್ತಾ ಬಂದರು. ಮುಂದೆ, ಶ್ರೀ ನರಸಿಂಹಭಾರತಿಗಳು ಸಂಸ್ಥಾನಕ್ಕೆ ನೇಮಿಸಿದವರಿಗೂ, ಅವರ ಸ್ಥಾನಾಪನ್ನರಾಗಿ ಕರಕಮಲಸಂಜಾತರಾಗಿ ನೇಮಿಸಲ್ಪಟ್ಟವರಿಗೂ ರಾಮಚಂದ್ರಭಾರತಿಗಳು ಇದೇ ಪ್ರಕಾರ ಆದಾಯ ವೆಚ್ಚ, ಮಿಗತೀ ಹಣ ಸಹಾ ಒಪ್ಪಿಸಿಕೊಂಡು ಸಂಚಾರ, ಆಚಾರವಿಚಾರ ಮೊದಲಾದ ಹೆಚ್ಚು ಹವ್ಯಾಸಕ್ಕೆ ಹೋಗದೇ ಆಜ್ಞಾನುಸಾರ ನಡೆದುಕೊಳ್ಳತಕ್ಕವರು. ಈ ಅಂಶಕ್ಕೆ ರಾಮಚಂದ್ರಭಾರತಿಗಳ ಪರಂಪರಾಗತರಲ್ಲಿ ಯಾರಾದರೂ ಅನ್ಯಥಾ ಮಾಡಿದಲ್ಲಿ ಶ್ರೀಗುರುಚರಣಕ್ಕೆ ಅನ್ಯಥಾ ಮಾಡಿದಂತೆ, ಎಂದು ಈ ಬಿನ್ನವತ್ತಳೆಯನ್ನು ಅವರ ಆತ್ಮಸಾಕ್ಷಿಯಿಂದ ಬಾಷಾಪೂರ್ವಕ ಬರೆಸಿ ಒಪ್ಪಿಸಿದ್ದಾರೆ."

ಇದರ ಮುಂದಿನ ಪತ್ರವೂ ಅದೇ ಶ್ರೀನರಸಿಂಹಭಾರತೀ ಸ್ವಾಮಿಗಳವರಿಗೇನೇ ಅದೇ ರಾಮಚಂದ್ರಭಾರತೀ ಸ್ವಾಮಿಗಳೇ ಬರೆದಹ್ಹಾಗಿದೆ. ಅದರಲ್ಲಿ ಹಿಂದಿನ ನಿಬಂಧನೆಯಂತೆ ಚಿತ್ರಭಾನು ಸಂವತ್ಸರದ ಆದಾಯ ವೆಚ್ಚದ ಲೆಕ್ಕ ಮಿಗತಿ ಹಣ (೫೪೮ ವರಹ ೬ ಹಣ ಮುಪ್ಪಾಗ ಬೇಳೆಯನ್ನು) ಶ್ಯಾನುಭೋಗ ವೆಂಕಣ್ಣ ಊಳಿಗದ ಚನ್ನನೊಡನೆ ಶ್ರೀ ನರಸಿಂಹಭಾರತೀ ಸ್ವಾಮಿಗಳವರಿಗೆ ಕಳಿಸಿದೇನೆ ಎಂದು ಬರೆದಿದ್ದಾರೆ.

ಈ ಎರಡು ಪತ್ರಗಳ ಲೇಖಕರ ಹೆಸರು ಆ ಪತ್ರದ ಮೇಲಿರುವ ಕಾಲಕ್ಕೆ (A.D. 1582) ಈಗ ಪ್ರಸಿದ್ಧ ಪಡಿಸಿರುವ ಶೃಂಗೇರೀ ಗುರುಪರಂಪರೆಯಲ್ಲಿರುವುದಿಲ್ಲ. 1508 ರಿಂದ 1622ರ ವರೆಗೆ ಆ ಪರಂಪರೆಯಲ್ಲಿ ಈ ಮುಂದೆ ನಿರ್ದೇಶಿಸಿರುವ 5 ಜನ ಸ್ವಾಮಿಗಳವರ ಹೆಸರುಗಳಿವೆ.

| | | |
|---|---|---|
| 1. | ರಾಮಚಂದ್ರಭಾರತಿ | 1508—1560 |
| 2. | ನರಸಿಂಹಭಾರತಿ | 1557—1573 |
| 3. | ನರಸಿಂಹಭಾರತಿ | 1563—1576 |
| 4. | ಇಮ್ಮಡಿ ನರಸಿಂಹಭಾರತಿ | 1576—1599 |
| 5. | ಅಭಿನವ ನರಸಿಂಹಭಾರತಿ | 1599—1622 |

ಇವರಲ್ಲಿ ಮೊದಲನೆಯ ಶ್ರೀ ರಾಮಚಂದ್ರಭಾರತೀ ಸ್ವಾಮಿಗಳವರ (1508-1560) ಶಿಷ್ಯರಾದ ಶ್ರೀನರಸಿಂಹಭಾರತೀ ಸ್ವಾಮಿಗಳೇ ಮಹಾಯಾತ್ರೆಗೆ ಹೋದವರು ಮತ್ತು ಅವರೇ ಕೂಡಲಿ ಕ್ಷೇತ್ರದಲ್ಲಿ ಮಠವನ್ನು ಸ್ಥಾಪಿಸಿದರು. ಎಪಿಗ್ರಾಫಿಕಾ ಕರ್ಣಾಟಕ VI ವಾಲ್ಯೂಮಿನಲ್ಲಿ ಪ್ರಕಟಿಸಿರುವ ಕಡೂರ ಡಿಸ್ಟ್ರಿಕ್ಟ್ ಶೃಂಗೇರಿ ಜಹಗೀರಿನ 10ನೇ ಶಾಸನದ ಆಧಾರದಂತೆ 1547ನೇ ಇಸವಿಯಲ್ಲಿ (ಶಾ. ಶ. ೧೪೬೯ನೇ ಪ್ಲವಂಗ) ಶೃಂಗೇರೀ ಮಠದ ಪೀಠಾಧಿಪತಿಗಳಾಗಿ ಶ್ರೀ ನರಸಿಂಹಭಾರತಿಗಳವರಿದ್ದರೆಂಬುವುದು ವ್ಯಕ್ತವಾಗುತ್ತದೆ. ಅವರ ಗುರುಗಳಾದ ಶ್ರೀ ರಾಮಚಂದ್ರಭಾರತೀ ಸ್ವಾಮಿಗಳು A.D. 1547ಕ್ಕೆ ಮುಂಚೆಯೇ ಮುಕ್ತರಾಗಿದ್ದರು. 1545ನೇ ಇಸವಿಯಲ್ಲಿ ಆ ಶ್ರೀ ರಾಮಚಂದ್ರಭಾರತೀಸ್ವಾಮಿಗಳವರಿಗೆ ಆರಗದ ಸೀಮೆಯಲ್ಲಿ ವಿಜಯನಗರದ ಸಾಮಂತರಾಜರಾಗಿದ್ದ ಇಮ್ಮಡಿ ಪರಶುನಾಯಕರ ದಳವಾಯಿ ಹೊನ್ನಪ್ಪನಾಯಕರು ವಿದ್ಯಾಶಂಕರ ದೇವರ ಉದಯ ಕಾಲದ ಅವಸರದ ಸೇವೆಗೆ ಗಾಜನೂರು ಸೀಮೆಯೊಳಗಣ ಬಸ್ತೀಹಳ್ಳಿ ಗ್ರಾಮವನ್ನು ದಾನ ಕೊಟ್ಟಿದ್ದಾರೆ. ಶೃಂಗೇರಿಯವರು ಪ್ರಸಿದ್ಧಪಡಿಸಿರುವ ಪರಂಪರಾ ಪಟ್ಟಿಯಲ್ಲಿ ಈ ಶ್ರೀ ರಾಮಚಂದ್ರಭಾರತಿಗಳು ಆಮೇಲೆ 1560 ರ ವರೆಗೂ ಇದ್ದಂತೆ ಪ್ರಕಟಿಸಿರುವರು. ಹಾಗೆ ಇವರು

1560ರ ವರೆಗೂ ಪೀಠದಲ್ಲಿ ಇದ್ದಿದ್ದರೆ ಶೃಂಗೇರೀ ಜಹಗೀರಿನ 10ನೇ ಶಾಸನದಲ್ಲಿ 1547ನೇ ಇಸವಿಯಲ್ಲಿ ಕೇವಲ ಶ್ರೀನರಸಿಂಹಭಾರತೀ ಸ್ವಾಮಿಗಳವರ ಹೆಸರನ್ನು ಮಾತ್ರ ಉಲ್ಲೇಖಿಸುತ್ತಿರಲಿಲ್ಲ. ಅದರಿಂದಾಗಿ ಆ ಕಾಲಕ್ಕೆ ಪೀಠದ ಮೇಲೆ ಶ್ರೀನರಸಿಂಹಭಾರತೀಸ್ವಾಮಿಗಳವರೊಬ್ಬರೇ ಇದ್ದರೆಂದು ವ್ಯಕ್ತವಾಗುತ್ತದೆ. ಶೃಂಗೇರೀ ಪರಂಪರಾ ಪಟ್ಟಿಯಲ್ಲಿ ಈ ಶ್ರೀನರಸಿಂಹಭಾರತಿ ಸ್ವಾಮಿಗಳು A.D. 1557ರಲ್ಲಿ ಪೀಠವನ್ನಾರೋಹಿಸಿದರೆಂದು ನಿರ್ದೇಶಿಸಲಾಗಿದೆ. ಇದು 1547ರಲ್ಲಿ ಶ್ರೀ ನರಸಿಂಹಭಾರತಿಗಳು ಪೀಠಾಧಿಪತಿಗಳಾಗಿದ್ದರೆಂದು ತಿಳಿಸುವ ಶಿಲಾಶಾಸನಕ್ಕೆ ವಿರೋಧವಾಗುವುದು. ಪರಂಪರಾ ಪಟ್ಟಿಯಲ್ಲಿ ಈ ಶ್ರೀ ನರಸಿಂಹಭಾರತಿಗಳ ಅನಂತರ ಮತ್ತೆ ನರಸಿಂಹಭಾರತಿಸ್ವಾಮಿಗಳೆಂಬ ಅಭಿಧಾನದವರೇ ಪೀಠಕ್ಕೆ ಬಂದರೆಂದು ನಿರ್ದೇಶಿಸಲಾಗಿದೆ. ಅವರ ಅನಂತರ ಇಮ್ಮಡಿ ನರಸಿಂಹಭಾರತಿಸ್ವಾಮಿಗಳೆಂಬುವರೂ ಅವರ ಅನಂತರ ಅಭಿನವ ನರಸಿಂಹಭಾರತಿಗಳೆಂಬುವರೂ ಪೀಠಾಧಿಪತಿಗಳಾಗಿದ್ದರೆಂದು ಪರಂಪರಾ ಪಟ್ಟಿಯಲ್ಲಿ ಹೇಳಲಾಗಿದೆ. ಹೀಗೆ ಉದ್ದಕ್ಕೂ ಒಂದೇ ಹೆಸರಿನವರು ಬರುವುದು ಈ ಪೂರ್ವದಲ್ಲಿಯೂ ಮತ್ತು ಮುಂದಕ್ಕೆ ಈವರೆಗೂ ಕಾಣಬರುವುದಿಲ್ಲ. ಆದ್ದರಿಂದ ನರಸಿಂಹಭಾರತಿ ಎಂದು (1563–1527) ಎರಡನೇ ಸಲ ಬಂದಿರುವವರು ಈ ನಿಬಂಧನೆ ಬಿನ್ನವತ್ತಳೆ ಲೇಖಕರಾದ ರಾಮಚಂದ್ರಭಾರತಿ ಸ್ವಾಮಿಗಳು. ಅವರ ಹೆಸರನ್ನು ಪರಂಪರಾ ಪಟ್ಟಿಯಿಂದ ತೆಗೆದು ಆ ಸ್ಥಾನದಲ್ಲಿ ಮತ್ತೆ ನರಸಿಂಹಭಾರತಿಸ್ವಾಮಿಗಳೆಂದೇ ನಿರ್ದೇಶೀಸಲಾಗಿವೆ. ಹೀಗೆಯೇ ಶೃಂಗೇರೀ ಗುರು ಪರಂಪರಾ ಪಟ್ಟಿಯೊಳಗಿನ ಕಾಲ ನಿರ್ದೇಶದಲ್ಲಿ ಅನೇಕ ವ್ಯತ್ಯಾಸಗಳಿರುವವು. 1565ನೇ ಇಸವಿಯಲ್ಲಿ ನಡೆದ ರಕ್ಕಸ (ತಾಳೀಕೋಟೆ) ತಂಗಡಿ ಯುದ್ಧದಿಂದ ವಿಜಯನಗರ ಸಾಮ್ರಾಜ್ಯಕ್ಕೆ ದೊಡ್ಡ ಆಘಾತವುಂಟಾಯಿತು. ಅದರಿಂದಾಗಿ ಶೃಂಗೇರೀ ಪೀಠಕ್ಕೆ ಇದ್ದ ವಿಜಯನಗರದ ರಾಜರಾಶ್ರಯವು ತಪ್ಪಿದಂತಾಯಿತು. ಕರ್ನಾಟಕ ದೇಶದ ಪ್ರಜೆಗಳಲ್ಲಿಯೂ ಸಹ "ಬಲಿಷ್ಠನಿಂದ ದುರ್ಬಲನಿಗೆ ಬಾಧೆ" (ಪ್ರಬಲೇನ ದುರ್ಬಲಸ್ಯ ಬಾಧಃ) ಎಂಬ ಮಾತ್ಸ್ಯ ನ್ಯಾಯವು ತಲೆದೋರಿತು. ಶೃಂಗೇರಿ ಮಹಾಜನಗಳೂ ಸಹ ರಕ್ಕಸತಂಗಡಿ ಯುದ್ಧಕ್ಕಿಂತ ಮುಂಚೆಯೇ ಸಂಚಾರ ಹೊರಟಿದ್ದ ಶ್ರೀನರಸಿಂಹಭಾರತಿಗಳ ವಿರುದ್ಧ ಸ್ಥಳ ಬಂದು ಕಟ್ಟು ಮಾಡಿಕೊಂಡರು. ಅಲ್ಲದೆ ಅವರೆಲ್ಲ ಒಗ್ಗಟ್ಟಾಗಿ ಸೇರಿ ರಾಮಚಂದ್ರಭಾರತಿಗಳೆಂಬ ಮತ್ತೊಬ್ಬ ಪೀಠಾಧಿಪತಿಗಳನ್ನು ನಿರ್ಮಿಸಿದರು. ಶ್ರೀನರಸಿಂಹಭಾರತೀ ಸ್ವಾಮಿಗಳು ಕೂಡಲಿ ಕ್ಷೇತ್ರಕ್ಕೆ ಬಂದು ನೆಲಸಿ ಅಲ್ಲಿ ಸಂತೇಬೆನ್ನೂರು ನಾಯಕರು ಹೊಸದಾಗಿ ಮಠವನ್ನು ಕಟ್ಟಿಸಿಕೊಟ್ಟಿದ್ದರಿಂದ ಅಲ್ಲಿಯೇ ವಾಸಮಾಡಿದರು. ಕೂಡಲಿ ಕ್ಷೇತ್ರಕ್ಕೆ "ದಕ್ಷಿಣ ವಾರಣಾಸಿ, ಮಹಾಪ್ರಯಾಗ, ಆದಿ ಹರಿಹರ" ಮುಂತಾದ ಪ್ರಸಿದ್ಧಿಗಳು ಈ ಪೂರ್ವಕಾಲದಿಂದಲೂ ಇದ್ದು ಅದರ ಪಾವಿತ್ರ್ಯ–ಪ್ರಕೃತಿ ಸೌಂದರ್ಯಗಳು ಇವರ ಮನಸ್ಸನ್ನಾಕರ್ಷಿಸಿರಬಹುದು. ಅಲ್ಲದೇ ಶ್ರೀ ಬಿ. ಸೂರ್ಯನಾರಾಯಣರಾವ್, B.A., M.R.A.S., M.A.S.B., F.R.H.S., etc., ರವರು ಶ್ರೀ ಕೂಡ್ಲೀ ಕ್ಷೇತ್ರದಲ್ಲಿ ನೆಲೆ ನಿಂತಿರುವ ಶ್ರೀ ಶಾರದಾಂಬನವರ ವಿಶಿಷ್ಟ ಸಾನ್ನಿಧ್ಯವನ್ನು ಕುರಿತು ತಮ್ಮ "ಶಿವಗಂಗಾಮಠದ ಇತಿಹಾಸ (Shivaganga Mutt and its History)"ದ 57ನೇ ಪುಟದಲ್ಲಿ ಬರೆದಿರುವದೇನಂದರೆ "It has already been seen that the great Advaita reformer Sankaracharya established four Mutts in the four cardinal directions in India, and Sringeri became important, both on account of his personal presidency and also for a tradition which has to be symbolically interpreted. After his intellectual success over Mandana Misra and his incarnate spouse Saraswathi, it has been shown how the latter was about to go away to Brahmaloka in her divine form, when Sankara bound his Vanadurga Mantra and beseeched her to got with him to Sringeri where he wanted to establish a Mutt and install her statue. She agreed to send her grace with him on some condition and Sankara proceeded to the South.

When he came to Kudali (Kannada to join) about 9 miles from Shimoga, where the confluence of the Thunga and the Bhadra takes place, he seems to have forgotten to comply with the terms on the strict observance of which Sarada promised to bestow her grace on the Sringeri Mutt. On contemplation Sankara

saw the Goddess was inclined to stop at this holy junction of the two rivers Thunga and Bhadra. Sankara repeated his prayers and Sarada observed that during the ten days of the Navaratri, she would grace Sringeri with her complete glory and during the rest of the year a portion of it will be with her statue there.

(ಅದ್ವೈತ ಮತಸುಧಾರಕರಾದ ಶ್ರೀ ಶಂಕರಾಚಾರ್ಯರು ಭಾರತದ ಮುಖ್ಯವಾದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮಠಗಳನ್ನು ಸ್ಥಾಪಿಸಿದರೆಂಬುದು ಈ ಹಿಂದೆಯೇ ವಿದಿತವಾಗಿದೆ. ಅವುಗಳಲ್ಲಿ ಅವರೇ ಸ್ವತಃ ಅಲ್ಲಿ ನಿಂತಿದ್ದುದರಿಂದಲೂ, ಮತ್ತು ಅಲ್ಲಿಯ ಸಂಪ್ರದಾಯಕ್ಕೆ ರೂಪಕೊಡಬೇಕಾಗಿದ್ದುದರಿಂದಲೂ ಶೃಂಗೇರಿಯು ಪ್ರಮುಖಸ್ಥಾನವನ್ನು ಪಡೆಯಿತು. ಆಚಾರ್ಯರು ಮಂಡನಮಿಶ್ರ ಮತ್ತು ಸರಸ್ವತಿಯ ಅಪರಾವತಾರಳಾದ ಆತನ ಪತ್ನಿಯನ್ನು ವಾದದಲ್ಲಿ ಜಯಿಸಿದಮೇಲೆ ಸರಸ್ವತಿಯು ತನ್ನ ನಿಜರೂಪದಿಂದ ಬ್ರಹ್ಮಲೋಕಕ್ಕೆ ಹೋಗಲು ಅಪೇಕ್ಷೆಪಟ್ಟಳೆಂಬುದೂ ಉಕ್ತವಾಗಿದೆ. ಆಗ ಶ್ರೀಮದಾಚಾರ್ಯರು ವನದುರ್ಗಾಮಂತ್ರದಿಂದ ಆಕೆಯನ್ನು ಕಟ್ಟಿ ಶೃಂಗೇರಿಯಲ್ಲಿ ತಾವು ಸ್ಥಾಪಿಸಲಿರುವ ಮಠದಲ್ಲಿ ಆಕೆಯ ಮೂರ್ತಿಯನ್ನು ಪ್ರತಿಷ್ಠೆಮಾಡುವ ಉದ್ದೇಶದಿಂದ ತಮ್ಮೊಡನೆ ಬರಬೇಕೆಂದು ಪ್ರಾರ್ಥಿಸಿದರು. ಕೆಲವು ನಿರ್ಬಂಧಕ್ಕೆ ಒಳಗಾಗುವುದಾದರೆ ತನ್ನ ತೇಜಸ್ಸನ್ನು ಅವರ ಜೊತೆಯಲ್ಲಿ ಕಳುಹಿಸಿಕೊಡಲು ಆಕೆ ಒಪ್ಪಿದಳು. ಆಚಾರ್ಯರು ದಕ್ಷಿಣದ ಕಡೆ ಹೊರಟರು. ಶಿವಮೊಗ್ಗಾದಿಂದ ಒಂಭತ್ತು ಮೈಲಿ ದೂರದಲ್ಲಿ ತುಂಗಾ ಮತ್ತು ಭದ್ರೆಯರ ಸಂಗಮದಲ್ಲಿರುವ ಕೂಡ್ಲಿಗೆ ಬಂದಾಗ ಯಾವ ನಿಯಮಗಳಿಗೆ ಒಳಗಾದರೆ ಮಾತ್ರ ತನ್ನ ತೇಜಸ್ಸನ್ನು ಕಳಿಸುವುದಾಗಿ ಶಾರದೆಯು ವಚನವಿತ್ತಿದ್ದಳೋ ಅವುಗಳನ್ನು ಪಾಲಿಸಲು ಆಚಾರ್ಯರು ಮರೆತಂತೆ ಕಾಣುತ್ತದೆ. ಧ್ಯಾನಮಗ್ನರಾದಮೇಲೆ ದೇವಿಯು ಈ ಪವಿತ್ರವಾದ ತುಂಗಭದ್ರಾ ಸಂಗಮಸ್ಥಳದಲ್ಲಿ ನಿಲ್ಲಲು ಇಚ್ಛಿಸುತ್ತಾಳೆಂದು ಅವರಿಗೆ ತಿಳಿಯಿತು. ಆಚಾರ್ಯರು ಸ್ತೋತ್ರ ಮಾಡಿದ್ದರಿಂದ ದೇವಿಯು ನವರಾತ್ರಿಯ ಹತ್ತು ದಿನಗಳಲ್ಲಿ ಮಾತ್ರ ಶೃಂಗೇರಿಯಲ್ಲಿ ಪೂರ್ಣಕಲಾವಿಶಿಷ್ಟಳಾಗಿ ಇರುವುದಾಗಿಯೂ ಇತರ ದಿನಗಳಲ್ಲಿ ಆ ಪ್ರತಿಮೆಯಲ್ಲಿ ಒಂದಂಶದಿಂದ ಸನ್ನಿಹಿತಳಾಗಿರುವುದಾಗಿಯೂ ಅನುಗ್ರಹಿಸಿದಳು.)

ಕೆಳದಿ ಮತ್ತು ಸಂತೇಬೆನ್ನೂರು ನಾಯಕರು ಮಧ್ಯಸ್ಥರಾಗಿದ್ದು ಶೃಂಗೇರೀ ಮಹಾಜನಗಳು ಹಾಗು ರಾಮಚಂದ್ರಭಾರತಿಗಳು ಮತ್ತು ಶ್ರೀ ನರಸಿಂಹಭಾರತಿಗಳ ಮಧ್ಯೆ ಒಂದು ಸಂಧಿ ಮಾಡಿಸಿ ಒಂದು ನಿಬಂಧನೆ ಮಾಡಿದರು. ಇದೇ ಅಂಶವನ್ನೇ ಮೇಲಿನ ಎರಡು ಪತ್ರಗಳೂ ಪ್ರತಿಪಾದಿಸುವವು.

ಅನಂತರ ಕಾಲೀನ ಮೂವತ್ತು ನಲವತ್ತು ವರ್ಷಗಳ ಅವಧಿಯಲ್ಲಿ ಶೃಂಗೇರೀ ಮಠವು ಅವಸಾನಸ್ಥಿತಿಗೆ ಬಂದಿತು. ಶಾ. ಶ. ೧೫೪೩ನೇ (A·D. 1621) ದುರ್ಮತಿ ಸಂವತ್ಸರದ ವೈಶಾಖ ಶುದ್ಧ ದಶಮಿಯಂದು ಶ್ರೀಮತ್ಕೆಳದಿಯ ಸದಾಶಿವನಾಯಕರ ಪೌತ್ರ ವೆಂಕಟಪ್ಪನಾಯಕರು ಶೃಂಗೇರಿಯ ಪುನಃ ಪ್ರತಿಷ್ಠೆ ಮಾಡಿದರು. ಈ ವಿಷಯವು ಎಫಿಗ್ರಾಫಿಕಾ ಕರ್ಣಾಟಕ 6ನೇ ವಾಲ್ಯೂಮಿನ ಶೃಂಗೇರೀ ಜಹಗೀರಿನ 5ನೇ ಶಾಸನದಿಂದ ಗೊತ್ತಾಗುತ್ತದೆ. ಈ ಸಂದರ್ಭವನ್ನು ಎಲ್. ಇ. ರೈಸ್‌ರವರು ಈ ರೀತಿ ಬರೆಯುತ್ತಾರೆ:—

"On gratitude for Vidyaranya's services Harihara established the matha at Sringeri (1346) and he and his brothers richly endowed it. He also at the same time founded the agraharas of Sringeri and Vidyaranya pura which adjoin one another. During the ascendency of Vijayanagar Empire the religions establishment of Sringeri continued to flourish under the royal patronage. But when that rule was overthrown by the victory of the confederacy musalman powers in 1565, and the Vijayanagara kings were driven to settle in more distant place to the east, the influence of the most weakened. In fact the establishment seems to have been tired and the lands which formed its endowments were appropriated by any one

who could seize them. This state of things was eventually remedied by Keladi kings who had come into power in the North-West of Mysore under the protection of Sadasiva Raya the last king who had Vijayanagar for his capital. In 1621 Venkatappa Nayaka re-established Sringeri.

(ವಿದ್ಯಾರಣ್ಯರು ಮಾಡಿದ ಸಹಾಯಕ್ಕೆ ಪ್ರತಿಯಾಗಿ ಹರಿಹರನು ಕ್ರಿ. ಶ. 1386ರಲ್ಲಿ ಶೃಂಗೇರಿಯಲ್ಲಿ ಒಂದು ಮಠವನ್ನು ಸ್ಥಾಪಿಸಿದನು. ಅನಂತಕ್ಕೋಸ್ಕರ ಅವನೂ, ಅವನ ಸಹೋದರರೂ ಬಹಳವಾಗಿ ದಾನ ಮಾಡಿದ್ದಾರೆ. ಅದೇ ಕಾಲದಲ್ಲಿ ಹರಿಹರನು ಶೃಂಗೇರಿ ಮತ್ತು ವಿದ್ಯಾರಣ್ಯಪುರ ಎಂಬ ಎರಡು ಅಗ್ರಹಾರಗಳನ್ನು ನಿರ್ಮಿಸಿದ್ದಾನೆ. ಅವು ಒಂದರ ಪಕ್ಕದಲ್ಲೊಂದಿವೆ. ವಿಜಯನಗರದ ಸಾಮ್ರಾಜ್ಯದ ಅಧಿಪತಿಗಳು ಉನ್ನತಸ್ಥಿತಿಯಲ್ಲಿದ್ದಾಗ ಶೃಂಗೇರಿಯಲ್ಲಿನ ಧಾರ್ಮಿಕ ವ್ಯವಸ್ಥೆಗಳು ರಾಜಮನೆತನದವರ ಪೋಷಣೆಯಿಂದ ಬಹಳ ಏಳಿಗೆಗೆ ಬರಲಾರಂಭಿಸಿದವು. ವಿಜಯನಗರದ ಸಾಮ್ರಾಜ್ಯವು 1565 ರಲ್ಲಿ ಮಹಮ್ಮದೀಯರಿಂದ ಸೋಲಿಸಲ್ಪಟ್ಟ ಮೇಲೆ ಆ ರಾಜರು ಇನ್ನೂ ಪೂರ್ವಕ್ಕೆ ಹೋಗಿ ಅಲ್ಲಿ ತಮ್ಮ ನಿವಾಸವನ್ನು ಮಾಡಿದರು. ಆ ಕಾರಣದಿಂದ ಮಠದ ಏಳಿಗೆ ಕಮ್ಮಿಯಾಗುತ್ತ ಬಂದಿತು. ಆಗ ಮಠದ ಆಸ್ತಿ-ಪಾಸ್ತಿಗಳು ಯಾರಿಗೆ ಸಿಕ್ಕಿದ್ದು ಅವರು ತೆಗೆದುಕೊಂಡು ಅನುಭವಿಸುತ್ತಬಂದರು. ಕೆಳದಿ ರಾಜರು ಅಧಿಕಾರಕ್ಕೆ ಬಂದ ಮೇಲೆ ಸದಾಶಿವರಾಯರ ಪರಿಪಾಲನೆಯಲ್ಲಿ ಮತ್ತೆ ಮಠವು ಅಭಿವೃದ್ಧಿಹೊಂದಿತು. ಕ್ರಿ. ಶ. 1621 ರಲ್ಲಿ ಕೆಳದಿ ವೆಂಕಟಪ್ಪನಾಯಕರು ಶೃಂಗೇರಿಯಲ್ಲಿ ಪುನಃ ಮಠವನ್ನು ಸ್ಥಾಪನೆಮಾಡಿದರು.)

ಶೃಂಗೇರಿಮಠದ ಮೂರನೆಯ ಪತ್ರವು ಈ ಎರಡು ಪತ್ರಗಳನಂತರ ಬಹಳ ಕಾಲದ ಮೇಲೆ ಎಂದರೆ ಸುಮಾರು ಒಂದುನೂರು ವರ್ಷಗಳ ಅನಂತರ ಬರೆಯಲ್ಪಟ್ಟಿದೆ. ಈ ಪತ್ರಕ್ಕೆ ಕಾಲನಿರ್ದೇಶವಿರುವುದಿಲ್ಲ. ಶೃಂಗೇರೀ ನರಸಿಂಹ ಭಾರತೀಯತೀಂದ್ರರು ಶೃಂಗೇರೀ ಶಂಕರಭಾರತೀಯತೀಂದ್ರರನ್ನು ಕುರಿತು ಪರಸ್ಪರ ನಾರಾಯಣ ಸ್ಮರಣಪೂರ್ವಕ ಈ ಪತ್ರದೂತನನ್ನು ಕಳಿಸಿದ್ದಾರೆ, ಎಂದು ಪತ್ರವು ಉಪಕ್ರಮವಾಗುತ್ತೆ. ಪತ್ರದ ಮೇಲುಭಾಗ ದಲ್ಲಿ "ಶಾರದಾಂಬಾದಿ ದೇವತೋಪಾಸನೆಗಾಗಿ ಶ್ರೀ ಮಠದಲ್ಲಿದ್ದೇವೆ" ಎಂದು ಸಂಸ್ಕೃತ ಭಾಷೆಯಲ್ಲಿ ಬರೆದಿದ್ದಾರೆ. ಪತ್ರದ ಲಿಪಿ ಮತ್ತು ಭಾಷೆ ಸಂಸ್ಕೃತ. ಪತ್ರದಲ್ಲಿ "ಭಾಗಾನಗರದ ದಿವಾನರಾದ ಮಾದಣ ಪಂಡಿತರ ಕಡೆ ಮೋತಕೂರಿ ಮಹದೇವಪ್ಪ ಎಂಬುವರು ಬರೆದ ವಿಜ್ಞಾಪನೆ ಪತ್ರಿಕೆಯಿಂದಲೂ ಕೊಂಡಿಭಟ್ಟನ ಮುಖವಚನ ದಿಂದಲೂ ಅಲ್ಲಿಯ ಎಲ್ಲ ವಿಚಾರ ತಿಳಿಯಿತು. ಭಾಗ್ಯನಗರ ದೇಶದಲ್ಲಿ ಶಂಖೇಶ್ವರಸ್ವಾಮಿಗಳು ಕೂಡಲಿ ಮಠದ ಶ್ರೀಗಳವರಿಂದ ಸನ್ಯಾಸ ತೆಗೆದುಕೊಂಡಿದ್ದೇನೆಂದು ಹೇಳುತ್ತಾರೆ. ಇವರ ಪೌರ್ವಾಪರ್ಯ ವಿಚಾರಿಸಿದ್ದರಲ್ಲಿ ಋಗ್ವೇದಿ ಗಳು, ಗೃಹಸ್ಥರು, ಗೋಸಾಯಿ ಸಂಪ್ರದಾಯಸ್ಥರು ಇವರು ಆಚಾರ್ಯ ಸಂಪ್ರದಾಯಕ್ಕೆ ಅರ್ಹರಲ್ಲ. ಇವರ ನಿಗ್ರಹ ಆಗುವಂತೆ ಕೊಂಡಿಭಟ್ಟನಿಗೆ ಪತ್ರವನ್ನು ಕೊಡಬೇಕು" ಎಂದು ಮುಂತಾಗಿ ವಿವರಿಸಲ್ಪಟ್ಟಿದೆ. ಭಾಗಾನಗರ ಗೋಲ್ಕೊಂಡ (ಸೀಮೆಗೆ ಬಸವಾಪಟ್ಟಣವು 1686 ರಲ್ಲಿ ಸೇರಿತ್ತೆಂದು ಎಪಿಗ್ರಾಫಿಕಾ ಕರ್ಣಾಟಕ ಏಳನೇ ವಾಲ್ಯೂಮಿನ ಹೊನ್ನಾಳಿ ತಾಲ್ಲೋಕಿನ 104ನೆಯ ಶಾಸನದಿಂದ ತಿಳಿಯಬರುವುದು. ಆದುದರಿಂದ ಮೋತ್ಕೂರಿ ಮಹಾದೇವಪ್ಪನ ಪತ್ರ (ಸಂಖ್ಯೆ ೧೬೫)ದಲ್ಲಿ ಬಸವಾಪಟ್ಟಣದ ಉಲ್ಲೇಖವಿರುವುದರಿಂದ ಇದಕ್ಕೆ ಶಾ.ಶ. 1607, ಕ್ರಿ.ಶ. 1686ನೆ ಸಂವತ್ಸರ ಹಾಕಿದೆ. ಸಂಖ್ಯೆ ೫೯ ರ ಸಂತೇಬೆನ್ನೂರು ಸೀತಾರಾಮಪ್ಪನಾಯಕನು ರಾಜೇಶ್ರೀ ಮಹದಾಜಿ (ಮಾದಣ) ಪಂಡಿತರಿಗೆ ಬರೆದ ಪತ್ರವೂ ಇದೇ ಕಾಲದ್ದು.

## B. ಮೈಸೂರಿನಲ್ಲಿರುವ ಬ್ರಹ್ಮತಂತ್ರ ಪರಕಾಲಮಠ

ಈ ಮಠದ ಅನೇಕ ಪತ್ರಗಳಲ್ಲಿ ಮೂರನ್ನು ಮಾತ್ರ ಮುದ್ರಿಸಿದೆ (ಸಂ. ೧೧. ೧೨. ೧೩) ಪರಕಾಲಸ್ವಾಮಿಗಳು ಶಾ.ಶ. ೧೬೭೦ನೇ ಪ್ಲವಂಗ ಸಂವತ್ಸರ ಜ್ಯೇಷ್ಠ ಮಾಸದಲ್ಲಿ ತುಂಗಭದ್ರಾ ಸಂಗಮಸ್ನಾನಕ್ಕಾಗಿ ಕೂಡಲ ಕ್ಷೇತ್ರಕ್ಕೆ ಬಂದಿದ್ದರು. ಆಗ್ಗೆ ಕೂಡಲಿ ಶೃಂಗೇರಿ ಶ್ರೀ ಶಂಕರ ಭಾರತಿಸ್ವಾಮಿಗಳವರು ವಿಜಾಪುರಪ್ರಾಂತದ ಕೃಷ್ಣಾತೀರದಲ್ಲಿ ಸಂಚಾರಮಾಡುತ್ತಿದ್ದರು. ಕೂಡಲಿ ಶೃಂಗೇರಿ ಮಠದ ಪರಿವಾರದವರು ಕೂಡಲ ಶೃಂಗೇರಿಮಠದ ಮುಂದುಗಡೆ ಹಾಯ್ದು ಪರಕಾಲ ಸ್ವಾಮಿಗಳು ಅವರ ಮಠದ ಮರ್ಯಾದೆಗಳೊಡನೆ ನದೀಸ್ನಾನಕ್ಕೆ ದಯಮಾಡಿಸಲು ಏರ್ಪಾಟು

ಮಾಡಿ ಪರಕಾಲ ಸ್ವಾಮಿಗಳನ್ನು ಸುಹೃದ್ಭಾವದಿಂದ ಸತ್ಕರಿಸಿ ಬೀಳ್ಕೊಟ್ಟರು. ಈ ಅರ್ಥವನ್ನು ಉಲ್ಲೇಖಿಸಿ ಸಂತೋಷ ದಿಂದ ಪರಕಾಲಸ್ವಾಮಿಗಳವರ ಮಠದ ಕಾರ್ಯಕರ್ತ ತಾಡಮರಿ ರಂಗಾಚಾರ್ಯರು ಮೊದಲನೆಯ ಪತ್ರವನ್ನು ಕೂಡಲಿ ಶೃಂಗೇರಿಮಠದ ಸರ್ವಾಧಿಕಾರಿ ಲಿಂಗಾಶಾಸ್ತ್ರಿಗಳಿಗೆ ಬರೆದಿದ್ದಾರೆ. ಎರಡನೆಯ ಪತ್ರದಲ್ಲಿ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳು ತಮ್ಮ ಶಿಷ್ಯರಾಗಿ ತಿರುಪತಿ, ತಿರುನಾರಾಯಣಪುರ, ಮೈಸೂರು, ಶ್ರೀರಂಗಪಟ್ಟಣ, ಮಾಗಡಿ ಮುಂತಾದ ಸ್ಥಳಗಳಲ್ಲಿರುವ ಶ್ರೀವೈಷ್ಣವರಿಗೆ ಶ್ರೀಮುಖದಿಂದ ಇದೇ ವಿಚಾರ ತಿಳಿಸಿ ಕೂಡಲಿ ಶೃಂಗೇರಿ ಜಗದ್ಗುರು ಗಳು ನಿಮ್ಮ ನಿಮ್ಮ ಗ್ರಾಮಗಳಲ್ಲಿ ಬಂದಾಗ ನೀವೂ ಅದೇ ರೀತಿ ಸತ್ಕರಿಸಬೇಕೆಂದು ಆಜ್ಞಾಪಿಸಿದ್ದಾರೆ. ಇದು ಉಭಯಮಠಗಳ ಸೌಹಾರ್ದಸೂಚಕವಾಗಿರುತ್ತದೆ.

## C. ಸಂಕೇಶ್ವರ ಮಠ

ಸಂಕೇಶ್ವರಮಠವು ಬೊಂಬಾಯಿ ಪ್ರಾಂತ್ಯದ ಬೆಳಗಾಂ ಜಿಲ್ಲೆಯಲ್ಲಿರುವ ಸಂಕೇಶ್ವರ ಗ್ರಾಮದಲ್ಲಿದೆ. ಇದಕ್ಕೆ ಸಂಬಂಧಪಟ್ಟ ನಾಲ್ಕು ಪತ್ರಗಳು ಮುದ್ರಿತವಾಗಿವೆ. (ಕ್ರಿ. ಶ. 1618, ಶಾ. ಶ. ೧೫೪೦) ಮೊದಲನೆಯ ಪತ್ರದಲ್ಲಿ ಸಂಕೇಶ್ವರ ಮಠಸ್ಥಾಪನೆಯಾದ ಸಂದರ್ಭವು ವಿವರಿಸಲ್ಪಟ್ಟಿದೆ. ಮಹಾರಾಷ್ಟ್ರ ಪ್ರಾಂತ್ಯದಲ್ಲಿ ಆಚಾರ ವಿಚಾರಗಳನ್ನು ಪರಿಶೀಲಿಸಲು, ಕೂಡಲಿ ಶೃಂಗೇರಿಮಠದ ಶ್ರೀಗಳವರ ಪ್ರತಿನಿಧಿಯಾಗಿ ಈ ಮಠದ ಶ್ರೀಗಳವರು ಇದ್ದು ವರ್ಷಕ್ಕೆ ಒಂದುಸಾವಿರ ಪಾದಶಾಹಿ ಹೊನ್ನುಗಳನ್ನು ಕೂಡಲಿ ಶೃಂಗೇರಿ ಮಠಕ್ಕೆ ಅವರು ಕಾಣಿಕೆ ಕೊಡಬೇಕೆಂದು ವಿಧಾಯಕ ವಾಗಿದೆ. ಎರಡನೆಯ ಪತ್ರದಲ್ಲಿ ಕಾಲ ನಮೂದಿಸಿಲ್ಲ. ಮಾಘ ಶುದ್ಧ ತ್ರಯೋದಶಿ ಎಂದು ಮಾತ್ರ ಇದೆ. ಬಹುಶಃ ಈ ಪತ್ರವು ಮೊದಲನೇ ಪತ್ರದ ಸಮೀಪಕಾಲದಲ್ಲಿಯೇ ಬರೆದುದಾಗಿರಬೇಕು "ತಿಮ್ಮಣ್ಣಭಟ್ಟರ ಜೊತೆಗೆ ಪಾದಶಾಹಿ ಹೊನ್ನು ಐದುನೂರಹನ್ನೊಂದು ಕಳುಹಿಸಿಕೊಟ್ಟಿದೆ" ಎಂದು ಬರೆದಿದೆ.

ಮೂರನೇ ಪತ್ರಕ್ಕೂ ಕಾಲನಿರ್ದೇಶವಿಲ್ಲ. ಇದರಲ್ಲಿ ಭಾಗಾನಗರದ ಸಂಚಾರವಿಚಾರವಿರುವುದರಿಂದಲೂ ಶೃಂಗೇರಿ ಮಠದ ಮೂರನೇ ಪತ್ರದಲ್ಲಿ ಆ ಶ್ರೀಗಳವರು ಆಕ್ಷೇಪಿಸಿರುವ ವಿಚಾರವು ಇಲ್ಲಿಗೆ ಸಮನ್ವಯವಾಗುವುದ ರಿಂದಲೂ ಆ ಪತ್ರದ ಕಾಲವನ್ನೇ ಇದಕ್ಕೂ ನಿರ್ದೇಶಮಾಡಿದೆ. ಹಾಗೆಯೇ ಸೀರಿಯಲ್ ನಂ. 16ನೇ ಪತ್ರವಾದ ಮೋತ್ಕೂರಿ ಮಹದೇವಪ್ಪನವರ ಪತ್ರವು ಇದೇ ಕಾಲದ ಘಟನೆಯನ್ನೇ ವಿವರಿಸುತ್ತದೆ. ಸಂಕೇಶ್ವರ ಮಠದವರ ಪತ್ರದಲ್ಲಿ 150 ಹೊನ್ನು ಮಠಕ್ಕೆ ಕಳುಹಿಸಿರುವ ವಿಚಾರವೂ ಇದೆ. ಇದರ ಮುಂದಿನ ಪತ್ರವು ಕ್ರಿ.ಶ. 1743 ಶಾ.ಶ. ೧೬೬೫ ರಲ್ಲಿ ಬರೆದುದಾಗಿದೆ.

## D. ಶಿವಗಂಗಾ ಮಠ

ಶಿವಗಂಗಾ ಮಠವು ಮೈಸೂರು ದೇಶದ ಬೆಂಗಳೂರು ಜಿಲ್ಲೆಯಲ್ಲಿ ತಾಲ್ಲೂಕು ಮುಖ್ಯಸ್ಥಳವಾದ ನೆಲಮಂಗಲಕ್ಕೆ ಹತ್ತಿರದಲ್ಲಿದೆ. ಈ ಮಠವು ಶ್ರೀ ಕೂಡಲೀ ಶೃಂಗೇರೀ ಮಠದ ಶ್ರೀ ಶಂಕರಭಾರತೀಸ್ವಾಮಿಗಳವರಿಂದ ಸನ್ಯಾಸ ದೀಕ್ಷೆ ಪಡೆದ ಶ್ರೀ ಗಂಗಾಧರಭಾರತೀಸ್ವಾಮಿಗಳಿಂದ ಉಪಕ್ರಮವಾಗಿ ನಡೆದುಕ್ಕೊಂಡು ಬರುತ್ತಲಿದೆ. ಈ ಮಠಕ್ಕೆ ಸಂಬಂಧ ಪಟ್ಟ ಅನೇಕ ಪತ್ರಗಳಲ್ಲಿ ಹದಿನೈದು ಪತ್ರಗಳು ಮಾತ್ರ ಮುದ್ರಿತವಾಗಿವೆ. ಮೊದಲನೇ ಮೂರು ಪತ್ರಗಳು ಗಂಗಾಧರ ಭಾರತೀಸ್ವಾಮಿಗಳು ಬರೆದವುಗಳಾಗಿವೆ. ಮೊದಲನೇ ಪತ್ರವು ಪಾದಶಾಹಿ 300 ವರಹಗಳನ್ನು ಪ್ರತಿವರ್ಷ ಕೂಡಲಿ ಶೃಂಗೇರಿ ಮಠಕ್ಕೆ ಕೊಡುತ್ತ ಕೊರಟಗೆರೆಗೆ ಆಚೆ ಇರುವ ಪ್ರದೇಶದ ಆಚಾರ ವಿಚಾರ ಪ್ರಾಯಶ್ಚಿತ್ತಗಳನ್ನು ನಡೆಸಿ ಕ್ಕೊಂಡುಬರುವಂತೆ ಆಗಿರುವ ವ್ಯವಸ್ಥೆಯನ್ನು ತಿಳಿಸುತ್ತದೆ. ಎರಡನೆಯ ಪತ್ರದಲ್ಲಿ ಆ ಪೈಕಿ 200 ವರಹಗಳನ್ನು ಕೊಟ್ಟು ಕಳುಹಿಸಿರುವ ವಿಚಾರ ವಿಜ್ಞಾಪಿಸಲ್ಪಟ್ಟಿದೆ. ಮೂರನೆಯ ಪತ್ರವು ಆ ಕಾಲದ ಕೆಲವು ಸಂದರ್ಭಗಳನ್ನು ತಿಳಿಸುತ್ತದೆ. ಮುಂದೆ ಅಭಿನವ ಗಂಗಾಧರಭಾರತಿ, ಅಭಿನವೋದ್ದಂಡ ಗಂಗಾಧರ ಭಾರತಿ, ಸಚ್ಚಿದಾನಂದ ಭಾರತಿ, ಅಭಿನವ ಸಚ್ಚಿದಾನಂದಭಾರತಿ, ಇವರುಗಳ ಒಂಭತ್ತು ಪತ್ರಗಳು ಮುದ್ರಿತವಾಗಿವೆ. ಈ ನಾಲ್ಕುಜನ ಪೀಠಾಧಿಪತಿಗಳು ಕ್ರಿ.ಶ. 1738 ರಿಂದ 1825ರವರೆಗೆ ಆಳುತ್ತಾರೆ. ಅಭಿನವ ಗಂಗಾಧರ ಭಾರತಿಗಳ ಸಂಸ್ಕೃತ ಪದ್ಯದ ಪತ್ರದಲ್ಲಿ

ಕೂಡಲಿ ಶೃಂಗೇರಿ ಮಠದ ಶ್ರೀಶಂಕರಭಾರತೀ ಸ್ವಾಮಿಗಳನ್ನು ಹೊಗಳಿರುವ ವಿಶೇಷಣಗಳು ಪ್ರಾಸಬದ್ಧ ಸುಂದರ ಪದಗಳಿಂದ ಹೆಚ್ಚಿನ ವೈಶಿಷ್ಟ್ಯವನ್ನು ತೋರಿಸತಕ್ಕವುಗಳಾಗಿವೆ. (ಪತ್ರದ ಸಂಖ್ಯೆ 21) ಅಭಿನವೋದ್ದಂಡ ಗಂಗಾಧರ ಭಾರತೀಸ್ವಾಮಿಗಳ ಪತ್ರವು (22) ಸರಳಪದ್ಯಗಳಿಂದ ವಿಷಯವನ್ನು ವಿವರಿಸಿ ಕೊನೆಯ ಶಾರ್ದೂಲ ವಿಕ್ರೀಡಿತ ವೃತ್ತದ ಪದ್ಯದಲ್ಲಿ ಶ್ರೀ ಶಂಕರ ಭಾರತೀ ಸ್ವಾಮಿಗಳನ್ನು ಚೆನ್ನಾಗಿ ಸ್ತುತಿಸಿದೆ. ಸಚ್ಚಿದಾನಂದ ಭಾರತೀ ಸ್ವಾಮಿಗಳ ಪತ್ರವು ಶ್ರೀ ಶಂಕರ ಭಾರತೀ ಸ್ವಾಮಿಗಳನ್ನು ಪದ್ಯಗಳಿಂದ ಹೆಚ್ಚಾಗಿ ಸ್ತುತಿಸಿ ಅವರ ಕರುಣೆಯನ್ನು ಅಪೇಕ್ಷಿಸಿದುದಾಗಿದೆ. ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ಕೊಟ್ಟಿರುವ ಶ್ರೇಷ್ಠವಿಶೇಷಣಗಳಲ್ಲಿ "ದ್ವಿಸಪ್ತ ಕೋಟಿ ಮಂತ್ರಾಣಾಂ ಇಯತ್ತಾ ಪಾರದೃಶ್ವನಃ" (ಹದಿನಾಲ್ಕು ಕೋಟಿ ಮಂತ್ರಗಳ ಸ್ವರೂಪ ಮತ್ತು ತತ್ವಗಳನ್ನು ಸಾಕ್ಷಾತ್ಕರಿಸಿಕೊಂಡಿರುವವರು)ಎಂಬ ವಿಶೇಷಣವು ಗಮನಾರ್ಹವಾಗಿದೆ. ಅಭಿನವ ಸಚ್ಚಿದಾನಂದ ಭಾರತೀಸ್ವಾಮಿಗಳು ಶ್ರೀ ಶಂಕರ ಭಾರತೀ ಸ್ವಾಮಿಗಳ ಶಿಷ್ಯರಾದ ನರಸಿಂಹಭಾರತೀ ಸ್ವಾಮಿಗಳವರನ್ನು ಸಂಸ್ಕೃತಪದ್ಯಮಯಪತ್ರದಿಂದ ಶಿವಗಂಗೆಗೆ ಆಹ್ವಾನಿಸಿದ್ದಾರೆ. ತಪಸ್ವಿಗಳೂ ಮಹಾ ಕವಿವರ್ಯರೂ ಆದ ಶಿವಗಂಗಾ ಮಠಾಧೀಶ್ವರರ ವಿದ್ಯಾವಿನಯ ಸಂಪನ್ನತೆಯೂ ಶ್ರೀ ಕೂಡಲೀ ಶೃಂಗೇರೀ ಮಠದ ಆಗಿನ ಶ್ರೀ ಶಂಕರಭಾರತೀ ಶ್ರೀಗಳವರ ಮಹತ್ವವೂ ಈ ಪತ್ರಗಳಿಂದ ವ್ಯಕ್ತವಾಗುವುವು.

ಅವರ ಮುಂದಿನ ಪತ್ರದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ.ಶ. 1821 ರಲ್ಲಿ ಕೂಡಲಿಗೆ ಬಂದು ಮಠಕ್ಕೂ ಮತ್ತು ಶ್ರೀಗಳವರಿಗೂ ವಿಶೇಷ ಸತ್ಕಾರಮಾಡಿದುದನ್ನುಲ್ಲೇಖಿಸುತ್ತಾರೆ ಮೈಸೂರು ಶ್ರೀಮನ್ಮಹಾರಾಜರವರ ವಂಶಾವಳಿಯ ಮೊದಲನೆಯ ಭಾಗದಿಂದಲೂ, ಶ್ರೀಮಠದ ಆಗಿನ ದಿನಚರೀ ಮತ್ತು ಲೆಖ್ಖದ ಪುಸ್ತಕ (ನಗದಿ ಊಳಿಗ) ದಿಂದಲೂ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಕೂಡ್ಲೀ ಕ್ಷೇತ್ರದಲ್ಲಿ ಶಾ. ಶ. ೧೭೪೨ನೇ ವಿಕ್ರಮಸಂವತ್ಸರದ ಮಾಘ ಬಹುಳ ನವಮಿ, ದಶಮಿ, ಏಕಾದಶೀ ಈ ಮೂರು ದಿನಗಳು ಮುಕ್ಕಾಂ ಮಾಡಿದ್ದರು. ದಶಮಿ ಮಂಗಳವಾರ ದಿವಿ ಘಳಿಗೆ ೧ಂಕ್ಕೆ ತಮ್ಮ ಬಿಡಾರದಿಂದ ಪರಿವಾರ ಸಮೇತ ಶ್ರೀ ಮಠಕ್ಕೆ ಬಂದು ಶ್ರೀ ಗುರು ಶಂಕರಭಾರತೀ ಸ್ವಾಮಿಗಳವರ ಚರಣ ಸಂದರ್ಶನ ಮಾಡಿಕೊಂಡು ಪರಮ ಸಂತೋಷಯುಕ್ತರಾಗಿ ಶ್ರೀ ಶ್ರೀಗಳವರ ಚರಣಗಳಿಗೆ ಒಂದು ಸಹಸ್ರ ರೂಪಾಯಿ ಕಾಣಿಕೆ, ಪದಕ ಸಹ ಮುತ್ತಿನಕಂಠಿ, ಶಹಲ್ಲು ಜೋಡಿ, ಆನೆ, ಕುದುರೆಗಳನ್ನು ಸಮರ್ಪಿಸಿದರು ಎಂದು ತಿಳಿಯುತ್ತದೆ. ಶ್ರೀಮನ್ಮಹಾರಾಜರ ಜೊತೆಗೆ ರೆಸಿಡೆಂಟ್ ಕೋಲ್ ಸಾಹೇಬರೂ ಇದ್ದರು.

ಮುಂದಿನ ಪತ್ರಗಳು ಶಿವಗಂಗೆ ಮಠದಲ್ಲಿ ಅಭಿನವೋದ್ದಂಡ ಗಂಗಾದರ ಭಾರತೀ, ಸಚ್ಚಿದಾನಂದಭಾರತೀ, ವಿದ್ಯಾಶಂಕರ ಭಾರತೀ ಇವರುಗಳಿಗೆ ನಡೆದ ವಿರುದ್ಧ ವ್ಯವಹಾರಗಳನ್ನು ತಿಳಿಸುತ್ತವೆ. ಕೊನೆಯ ಪತ್ರದಲ್ಲಿ ಶಿವಗಂಗಾ ವಿದ್ಯಾಶಂಕರ ಭಾರತೀ ಸ್ವಾಮಿಗಳು ಋಣಬಾಧೆ ತೀರಿಸಲಿಕ್ಕಾಗಿ ಸನ್ನದುಪತ್ರಗಳನ್ನು ಈ ಮಠದಲ್ಲಿ ಆಧಾರ ಇಟ್ಟು ಕೆಲವು ಹಣ ಪಡೆದಂತೆ ತಿಳಿಯುತ್ತದೆ. ಬಹುಶಃ ಅಲ್ಲಿಂದ ಮುಂದಕ್ಕೆ ಶಿವಗಂಗಾಮಠವು ಕೆಲವು ಕಾಲ ಬಹಳ ಕ್ಷೀಣಸ್ಥಿತಿಗೆ ಬಂದದ್ದರ ಪ್ರಯುಕ್ತ ಈ ಮಠಕ್ಕೂ ಆ ಮಠಕ್ಕೂ ಪತ್ರವ್ಯವಹಾರವು ಮುಂದುವರೆಯಲಿಲ್ಲ.

ಅತ್ಯಂತ ಪೂಜ್ಯಭಾವನೆಯಿಂದ ಶಿವಗಂಗಾ ಮಠಾಧಿಪತಿಗಳಿಂದ ಬರುತ್ತಲಿದ್ದ ಸಂಸ್ಕೃತ ಪದ್ಯಮಯ ಪತ್ರಗಳಿಗುತ್ತರರೂಪವಾಗಿ ಶ್ರೀಕೂಡಲೀಶೃಂಗೇರೀ ಮಠದಿಂದ ಆಶೀರ್ವಾದ ರೂಪವಾದ ಸಂಸ್ಕೃತ ಪದ್ಯಮಯ ಶ್ರೀಮುಖಗಳು ಬರೆಯಲ್ಪಡುತ್ತಿದ್ದವು. ಅಂಥವುಗಳಲ್ಲೊಂದನ್ನಿಲ್ಲಿ ಮಾದರಿಗಾಗಿ ಕೊಟ್ಟಿದೆ. "ಶಿವಗಂಗಾಖ್ಯ ಸುಕ್ಷೇತ್ರ ನಿವಾಸಿಷು ನಿರಂತರಂ ॥ ಶ್ರೀ ಗಂಗಾಧರ ದೇವೇಶ ದಿವ್ಯಪಾದಾಬ್ಜ ಭಕ್ತಿಷು ॥ ಸದನುಷ್ಠಾನನಿಷ್ಠೇಷು ಸ್ವಾಶ್ರಮಾಚಾರ ವೃತ್ತಿಷು। ಅಸ್ಮದತ್ಯಂತ ಸಚ್ಛಾತ್ರವರ್ಯೇಷು ವರಲಕ್ಷ್ಮಸು॥ ಶ್ರೀಮತ್ಸು ಸಚ್ಚಿದಾನಂದ ಭಾರತೀ ಖ್ಯಾತ ನಾಮಸು। ನಾರಾಯಣಸ್ಯ ರಚಿತಾ ರಮಣೀಯಾ ಸ್ಮೃತಿರ್ಮುದಾ ॥ ಆ ವಿಲಂಬಿ ಶರನ್ಮಾಘಾಸಿತ ಸ್ಯೈವ ಚತುರ್ದಶೀ। ಶೀಯರ್ಾಖ್ಯ ಪಟ್ಟಣೇ ರಮ್ಯೇ ದ್ವಿಜವೃಂದ ಸುಶೋಭಿತೇ। ವರ್ತಾಮಹೇ ನಿರಾ

ಬಾಧಂ ನಿಜಾನಂದ ವಿಭೂತಿಭಿಃ॥ ಭವನ್ನಿ ಶ್ರೇಯಸಪ್ರಾಪ್ತಿ ಪುರುಷಾರ್ಥ ಪ್ರದಾಯಿನಃ॥ ಮಂತ್ರಾಕ್ಷತಾಃ ಫಲಯುತಾಃ ಪುಟ್ಟಶಾಸ್ತ್ರಿಶಯೇ ಶುಭಾಃ। ದತ್ವಾ ಸಂಪ್ರೇಷಿತಾನೂನಮಸ್ಮಾಭಿಃ ಪರಯಾಮುದಾ। ಸ್ವೀಕರ್ತವ್ಯಾಶ್ಚ ಯುಷ್ಮಾಭಿಃ ತಪಸ್ಸಿದ್ಧ್ಯರ್ಥಮಾದರಾತ್॥"

## E. ಆವನಿ ಮಠ

ಆವನಿಮಠವು ಕೋಲಾರ ಡಿಸ್ಟ್ರಿಕ್ಟಿನಲ್ಲಿದೆ—ಕೋಲಾರದಿಂದ ಆಚೆ ಇರುವ ದೇಶದ ಆಚಾರ ವಿಚಾರ ಪ್ರಾಯಶ್ಚಿತ್ತಗಳು ಈ ಮಠಕ್ಕೆ ಸಂಬಂಧಪಟ್ಟು ಪ್ರತಿವರ್ಷ ಈ ಮಠದಿಂದ ಶ್ರೀಕೂಡಲಿ ಶೃಂಗೇರಿ ಮಠಕ್ಕೆ 500 ವರಹಗಳ ಕಾಣಿಕೆಯನ್ನು ಕೊಡುವ ನಿರ್ಣಯವನ್ನು ಮೊದಲನೇ ಪತ್ರವು ತಿಳಿಸುತ್ತದೆ. ಈ ನಿರ್ಣಯದಂತೆ 200 ವರಹಗಳನ್ನು ಕಳುಹಿಸಿಕೊಟ್ಟಿರುವ ವಿಚಾರ ಎರಡನೇ ಪತ್ರದಿಂದ ತಿಳಿಯುತ್ತದೆ. ಈ ಎರಡು ಪತ್ರಗಳ ಕಾಲ 1714–1715 A.D.

ಇದರ ಮುಂದೆ 1800ರಲ್ಲಿ ಹಿಂದಿನ ನಿಬಂಧನೆಯಂತೆ ನಡೆದುಕೊಳ್ಳುವುದಾಗಿ ವಿದ್ಯಾರಣ್ಯ ಭಾರತೀ ಸ್ವಾಮಿಗಳು ಶ್ರೀವೃದ್ಧಶಂಕರ ಭಾರತೀಸ್ವಾಮಿಗಳಿಗೆ ಶಿವಗಂಗಾಸ್ಥಳದಲ್ಲಿ ಬರೆದುಕೊಟ್ಟಿದ್ದಾರೆ.

## F. ಮುಳಬಾಗಲು ಕೃಷ್ಣಾನಂದ ಮಠ

ಈ ಮಠವು ಶಿವಮೊಗ್ಗ ಜಿಲ್ಲೆಯಲ್ಲಿ ತೀರ್ಥಹಳ್ಳಿಯ ಹತ್ತಿರ ದೂರ್ವಾಸಪುರ ಎಂಬ ಕ್ಷೇತ್ರದಲ್ಲಿದೆ. ಈ ಮಠದ ಸದಾನಂದ ತೀರ್ಥಸ್ವಾಮಿಗಳು 1798 ಮತ್ತು 1807 A.D. ಯಲ್ಲಿ ಸೀತೂರು ಮತ್ತು ರಾಣಿಬೆನ್ನೂರಲ್ಲಿ ತಮ್ಮ ಮಠಕ್ಕೆ ಇದ್ದ ಒಟ್ಟು 24 ವರಹದ ಭೂಮಿಯನ್ನು ಕೂಡಲಿ ಶೃಂಗೇರಿ ಮಠದಲ್ಲಿರುವ ಶ್ರೀ ವಿದ್ಯಾಶಂಕರ ದೇವರಿಗೆ ದಾನಮಾಡಿರುತ್ತಾರೆ.

## G. ತೀರ್ಥರಾಜಪುರ ಮಠ

ಇದು ಶಿವಮೊಗ್ಗ ಡಿಸ್ಟ್ರಿಕ್ಟು ತೀರ್ಥಹಳ್ಳಿಯಲ್ಲಿ ಇತ್ತು. ಈಚೆಗೆ ಇದರ ಪರಂಪರೆ ನಿಂತು ಹೋದುದರಿಂದ ಈ ಮಠದ ಕಟ್ಟಡ ಮತ್ತು ಆಸ್ತಿಪಾಸ್ತಿಗಳು ಶಿವಮೊಗ್ಗ ಜಿಲ್ಲೆಯ ರಾಮಚಂದ್ರಾಪುರ ಮಠಕ್ಕೆ ಸೇರಿರುವಂತೆ ಗೊತ್ತಾಗಿದೆ. ಈ ಮಠದ ಶ್ರೀಗಳವರಾದ ನರಸಿಂಹ ಭಾರತಿ ಸ್ವಾಮಿಗಳು ಕಾಶಿ, ಬ್ರಹ್ಮಾವರ್ತ, ಗ್ವಾಲಿಯರ್ ಮುಂತಾದ ಸ್ಥಳಗಳಿಗೆ ಸಂಚಾರ ಹೋಗಿ ಮುಂಬೈಗೆ ಬಂದಾಗ ಶ್ರೀಕೂಡಲಿ ಶೃಂಗೇರಿಮಠಕ್ಕೆ ತಾವು ವರ್ಷಕ್ಕೆ 40 ವರಹ ಕಾಣಿಕೆಯಾಗಿ ಒಪ್ಪಿಸುವಂತೆಯೂ ತೀರ್ಥರಾಜಪುರ ಮಠದ ಪರಂಪರೆಯವರು ಶ್ರೀಕೂಡಲಿ ಶೃಂಗೇರಿಮಠದ ಶ್ರೀಗಳವರ ಶಿಷ್ಯರೆಂದು ರಾಯಸವನ್ನು ದಯಪಾಲಿಸಬೇಕೆಂದು ಎರಡು ಪತ್ರಗಳನ್ನು ಬರೆದಿರುತ್ತಾರೆ.

## H. ಇತರೆ

ವೈಶ್ಯರ ಕುಲಗುರುಗಳಾದ ಅರುಣಾಚಲಯ್ಯನವರು (1716 A.D.) ಅವರ ಮೊಮ್ಮಕ್ಕಳು ನರಸಿಂಹಯ್ಯನವರು ಇವರಿಗೆ ಸಂಬಂಧಪಟ್ಟ 3 ಪತ್ರಗಳಿವೆ. (40, 42, 43) ಈ ಮನೆತನದವರಿಗೆ ವೈಶ್ಯಕುಲದೇಶಿಕ ಸಾರ್ವಭೌಮ ವೈಶ್ಯಕುಲನಿರ್ವಾಣ ಚತುರ ವೇದಾಂತ ತತ್ವಮಣಿ ಲೀಲಾವಿಭೂಷಣ, ಶಿಷ್ಯಕೋಟಿಮಕುಟರತ್ನಪ್ರಭಾಪುಂಜ ಮಂಡನ ಮಂಡಿತ ಪಾದ ಪದ್ಮಕ ಶ್ರೀ ಗುರುಬ್ರಹ್ಮತೇಜೋದ್ಭವ ಕುಲಭೂಷಣ ಎಂಬುದಾಗಿ ಮೂಲಪುರುಷ ಭಾಸ್ಕರಾಚಾರ್ಯರಿಂದ ಬಿರುದುಗಳಿವೆ. ಅರುಣಾಚಲಯ್ಯನವರು ಧಾರವಾಡ ಮತ್ತು ಮೈಸೂರು ದೇಶಗಳಿಗೆ ಸೇರಿರುವ 34 ಗ್ರಾಮಗಳ ನೂಟ ಇಬ್ಬಂಡು ನಗರ ವೈಶ್ಯರಲ್ಲಿ ವಿವಾಹ ಒಂದಕ್ಕೆ ಒಂದು ಧರಣ ಪ್ರಕಾರ ಶ್ರೀ ಕೂಡಲಿ ಶೃಂಗೇರಿಮಠಕ್ಕೆ ಕಾಣಿಕೆ ಕೊಡುವಂತೆ ದಾನಪತ್ರ ಬರೆದಿರುತ್ತಾರೆ. ಇವರ ಮೊಮ್ಮಕ್ಕಳಾದ ನರಸಿಂಹಯ್ಯನವರು ತಮ್ಮ ಪಿತಾಮಹರು 1738 (A.D.) ರಲ್ಲಿ ಕೊಟ್ಟ ಒಂದು ಧರಣದ ಜೊತೆಗೆ ಇನ್ನೊಂದು ಧರಣ ಕೊಡುವಂತೆ ದಾನಪತ್ರ ಬರೆದಿರುತ್ತಾರೆ.

ತ್ರ್ಯಂಬಕ ಪಂಡಿತರ ಮೊಮ್ಮಕ್ಕಳು ರಾಯಜಿ ಪಂಡಿತರ ಮಕ್ಕಳು ಸದಾಶಿವ ಪಂಡಿತರು, ಹೊಳವನಹಳ್ಳಿ ಮುಮ್ಮಡಿ ರಣಭೈರೇಗೌಡರು ಅವರಿಗೆ ಕೊಟ್ಟಿದ್ದ ಹೊಳವನಹಳ್ಳಿ ಸೀಮೆ ಕಾಸೀಂಪುರದ ಹೋಬಳಿ, ಹುಸೇನಿಪುರ ಪ್ರತಿನಾಮ ವೆಂಕಟಾಪುರ ಗ್ರಾಮವನ್ನು ಕೂಡಲಿ ಶೃಂಗೇರಿಮಠದ ಶ್ರೀ ನರಸಿಂಹಭಾರತೀಸ್ವಾಮಿಗಳಿಗೆ (1700 A.D.) ದಾನ ಕೊಟ್ಟಿದ್ದಾರೆ.

ಬಳ್ಳಾರಿ ಡಿಸ್ಟ್ರಿಕ್ಟ್ ಹೊಸಪೇಟೆಗೆ 5 ಮೈಲಿ ದೂರದಲ್ಲಿರುವ ಗಾರೀಪುರ ಬ್ರಹ್ಮಚಾರಿಪೀಠಕ್ಕೆ ಮೂಲರಾದ ಆನೆಗೊಂದಿ ಆಶ್ರಮ ಚಿಂತಾಮಣಯ್ಯನವರು ಅವರ ಆಶ್ರಮಕ್ಕೆ ನಡೆಯುವ ಭೂಸ್ವಾಸ್ಥ್ಯದಲ್ಲಿ ಹಾವನೂರು ಸೀಮೆ ಯೊಳಗಿನ ಹಿರೇಬಿದರೆ ಜಮೀನನ್ನು ಶ್ರೀಕೂಡಲಿ ಶೃಂಗೇರಿಮಠದ ಶ್ರೀವೃದ್ಧಶಂಕರಭಾರತೀಸ್ವಾಮಿಗಳಿಗೆ ದಾನ ಮಾಡಿದ್ದಾರೆ.

ಪ್ರಖ್ಯಾತರಾದ ಮುರಗೋಡು ಚಿದಂಬರ ದೀಕ್ಷಿತರು ಬರೆದ ಸಂಸ್ಕೃತ ಪದ್ಯಮಯವಾದ ಪತ್ರದಲ್ಲಿ (1807 A.D.) ಮಲಪ್ರಭಾ ನದೀದಡದಲ್ಲಿ ಗೊಂಣಾಗರ ಎಂಬ ಸ್ಥಳದಲ್ಲಿ ತಾವು ನಡೆಸುವ ಜ್ಯೋತಿಷ್ಟೋಮ ಯಾಗಕ್ಕೆ ಶ್ರೀ ಶ್ರೀಗಳವರನ್ನು ಆಹ್ವಾನಿಸಿ ದಯಮಾಡಿಸಿ ತಮ್ಮನ್ನುದ್ಧರಿಸಬೇಕೆಂದು ಪ್ರಾರ್ಥಿಸಿರುತ್ತಾರೆ.

ಸಿರಸಿ ಹತ್ತಿರ ಇರುವ ಸ್ವರ್ಣವಲ್ಲೀ ಮಠದ ಗಂಗಾಧರೇಂದ್ರ ಸರಸ್ವತೀ ಶ್ರೀಗಳವರು ಸೋದ ಸೊಪಸೀಮೆ ಯಲ್ಲಿರುವ ತಮ್ಮ ಶಿಷ್ಯರುಗಳಿಗೆ ಕೂಡಲಿ ಶೃಂಗೇರೀ ಮಠದವರು ಬಹಿಷ್ಕಾರ ಕೊಟ್ಟಿರುವ ಕೂಡ್ಲಿಗ್ರಾಮದ ಎಂಟು ಮನೆಯವರು ನಿಮ್ಮ ಪ್ರಾಂತ್ಯ ಬಂದರೆ ಅವರ ಸಂಸರ್ಗ ಮಾಡಕೂಡದೆಂದು ತಿಳಿಸಿದ್ದಾರೆ. ಈ ಸ್ವರ್ಣವಲ್ಲೀಪೀಠದ ಈಗಿನ ಸ್ವಾಮಿಗಳವರಾದ ಸರ್ವಜ್ಞೇಂದ್ರ ಸರಸ್ವತೀಸ್ವಾಮಿಗಳು ಮುಕ್ತರಾದ ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಗುರುಗಳವರ ಕಾಲದಲ್ಲಿ ನಾಲ್ಕು ವರ್ಷಗಳ ಕಾಲ ಶ್ರೀ ಮಠದಲ್ಲಿದ್ದು ವಿದ್ಯಾವ್ಯಾಸಂಗ ಮಾಡಿದರು. ಈ ವಿಷಯವು ಈ ಸಂದರ್ಭದಲ್ಲಿ ಉಲ್ಲೇಖಾರ್ಹವಾಗಿದೆ.

---

# ಮೂರನೆಯ ಭಾಗ

## ಪಾಳೆಯಗಾರರ ಕಾಲ

### A. ಸಂತೆಬೆನ್ನೂರು ಪಾಳೆಯಗಾರರು

ಸಂತೆಬೆನ್ನೂರು ಶಿವಮೊಗ್ಗ ಡಿಸ್ಟ್ರಿಕ್ಟಿನ ಚೆನ್ನಗಿರಿ ತಾಲ್ಲೂಕಿನಲ್ಲಿದೆ. ಇದಕ್ಕೆ ಸಮೀಪದಲ್ಲಿರುವ ರಾಣಿ ಬೆನ್ನೂರು, ಮಲೆಬೆನ್ನೂರು ಇವುಗಳ ವ್ಯಾವರ್ತನೆಗಾಗಿಯೂ ಇಲ್ಲಿ ಒಂದು ದೊಡ್ಡ ಸಂತೆ ಸೇರುತ್ತಿದ್ದುದರಿಂದಲೂ ಈ ಊರಿಗೆ ಈ ಹೆಸರು ಬಂದಿದೆ. ಇಲ್ಲಿನ ಪಾಳೆಯಗಾರರು ಬಸವಾಪಟ್ಟಣದ ಸೀಮೆಗೆ ಒಡೆಯರು. ಪೂವಲಾನ್ವಯ (ವಂಶ)ದವರು. ರಾಮಚಂದ್ರದೇವರಪಾದಪದ್ಮಾರಾಧಕರು. ಹನುಮಂತದೇವರ ನಿಜಭಕ್ತರು ವಾಲ್ಮೀಕಿ ಗೋತ್ರದವರು. ಇವರ ಮೂಲಪುರುಷ ಧೂಮರಾಜನು ವಿಜಯನಗರದಿಂದ ಬೇಟೆಗಾಗಿ ಬಸವಾಪಟ್ಟಣಕ್ಕೆ ಬಂದನು. ಅಲ್ಲಿಯ ಬೇಡನ ಮಗಳನ್ನು ಮದುವೆಯಾಗಿ ದುಮ್ಮಿ ಬೆಟ್ಟದಲ್ಲಿ ನೆಲಸಿದನು. ವಿವಾಹಕ್ಕೆ ಮೊದಲೇ ಕೊಟ್ಟ ವಾಗ್ದಾನ ದಂತೆ ಆ ಬೇಡರ ಮಗಳಲ್ಲಿ ಜನಿಸಿದ ಕೆಂಗಣ್ಣನಾಯಕ (ಸೀತಾ) ರಾಮಪ್ಪನಾಯಕರು ಇವನ ಉತ್ತರಾಧಿಕಾರಿಗಳು. ಇವರು ಆನಂದಪುರದಿಂದ ಮಾಯಕೊಂಡದವರೆವಿಗೂ, ಹರಿಹರದಿಂದ ತರೀಕೆರೆವರೆವಿಗೂ ರಾಜ್ಯವನ್ನು ವಿಸ್ತರಿಸಿ ಆಳಿ ದರು. ಮುಂದೆ ವೀರಹನುಮಪ್ಪನಾಯಕ, ಇಮ್ಮಡಿ ಹನುಮಪ್ಪನಾಯಕ ಮತ್ತು ಹುಚ್ಚಹನುಮಪ್ಪನಾಯಕ ಇವರುಗಳು ರಾಜ್ಯಭಾರಮಾಡಿದರು. A.D. 1637 ರಲ್ಲಿ ಬಿಜಾಪುರದ ಸೈನ್ಯಾಧಿಕಾರಿ ರಣದುಲ್ಲಾಖಾನನು ಬಸವಾಪಟ್ಟಣ

ವನ್ನು ಜಯಿಸಿದಮೇಲೆ ಇವರು ತರೀಕೆರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. (Rice Gazetteer Vol. II, page 447).

ಶ್ರೀ ಮಠದ ಒಂದು ಹಳೇ ಕಡತದಲ್ಲಿ ಅನೇಕ ರಾಜರುಗಳ ವಂಶಗಳನ್ನು ಬರೆಯುತ್ತಾ ತರೀಕೆರೆ ಅರಸುಗಳು, ಪೂಲವಂಶ ಎಂಬ ಶೀರ್ಷಿಕೆಯಲ್ಲಿ ಈ ವಂಶವನ್ನು ಉಲ್ಲೇಖಿಸುತ್ತಾರೆ. "ರೋಮಕೋಟಿ ಹನುಮಪ್ಪನಾಯಕ, ಹುಚ್ಚಹನುಮಪ್ಪನಾಯಕ, ಭಿಲ್ಲಪ್ಪನಾಯಕ, ಕೆಂಗಪ್ಪನಾಯಕ, ಹನುಮಪ್ಪನಾಯಕ, ಚಿಕ್ಕಣ್ಣನಾಯಕ, ಕೆಂಚಣ್ಣನಾಯಕ, ಬಾಲಹನುಮನಾಯಕ ಇವರು ಎಂಟು ಜನ ಅಣ್ಣತಮ್ಮಂದಿರು. 5ನೇ ಹನುಮಪ್ಪ ನಾಯಕನಿಗೆ ಗಂಗಪ್ಪನೆಂಬ ಮಗ. ಈ ವಂಭತ್ತು ಜನಗಳು ರಾಜಭೀತಿಯಿಂದ ಗೋಪ ಮಂದಿರದಲ್ಲಿ ಅಡಗಿದ್ದರು. ಒಂದು ಸಂದರ್ಭದಲ್ಲಿ ಕೆಂಗಣ್ಣನಾಯಕನು ಬೇಟೆಯಾಡಿ ದಣಿದು ಅರಣ್ಯದಲ್ಲಿ ಮಲಗಿದ್ದನು. ಅಲ್ಲಿದ್ದ ವೃಷಭೇಶ್ವರ ದೇವರು ಸ್ವಪ್ನದಲ್ಲಿ ಕಾಣಿಸಿಕೊಂಡು ತನ್ನ ಹೆಸರಿನಲ್ಲಿ ಪಟ್ಟಣ ನಿರ್ಮಾಣಮಾಡಲು ಆಜ್ಞೆಯಿತ್ತನು. ಆಗ ಬಸವಾ ಪಟ್ಟಣ ನಿರ್ಮಾಣಮಾಡಿದರು. ಆಮೇಲೆ ಬಹುರಾಜ್ಯ ಕಟ್ಟಿದರು. ಕೆಂಚಪ್ಪನಾಯಕನಿಗೆ ಇಮ್ಮಡಿ, ಮುಮ್ಮಡಿ, ಎಂದು ಇಬ್ಬರು ಮಕ್ಕಳು. ಇಮ್ಮಡಿಗೆ ರಾಮ, ಕೃಷ್ಣ, ಲಕ್ಷ್ಮಣ, ನಿಚ್ಚಮದವಣಿಗ, ಹನುಮಪ್ಪ ಎಂದು ಐದು ಮಕ್ಕಳು. ಮಗಸರ್ಜ ಹನುಮಪ್ಪನಾಯಕ, ಮಗವೀರ ಹನುಮಪ್ಪನಾಯಕ, ಮಗಸೀತ ಹನುಮಪ್ಪನಾಯಕ."

1558ರಲ್ಲಿ ಇಮ್ಮಡಿ ಸೀತಾರಾಮಪ್ಪನಾಯಕರ ಪುತ್ರರಾದ ಹನುಮಪ್ಪನಾಯಕರು ಶ್ರೀವಿದ್ಯಾರಣ್ಯ ಭಾರತಿ ಸ್ವಾಮಿಗಳಿಗೆ ಅವರ ಹಿರಿಯರು ಕೂಡಲಿ ಕ್ಷೇತ್ರದಲ್ಲಿ ಕಟ್ಟಿಸಿಕೊಟ್ಟ ಕೂಡಲಿ ಶೃಂಗೇರಿ ಮಠದ ಧರ್ಮಕ್ಕೆ ಹರಕೆರೆ ಹೋಬಳಿ ಪಂಚಗ್ರಾಮಗಳನ್ನು ದಾನಮಾಡುತ್ತಾರೆ. ಈ ಗ್ರಾಮಗಳು ಶಿವಮೊಗ್ಗೆಯಲ್ಲಿದ್ದ ತಿರುಮಲ ದೀಕ್ಷಿತನಿಗೆ ರಾಯದತ್ತವಾಗಿ ನಡೆದುಬರುತ್ತಿದ್ದುವು. ಈ ತಿರುಮಲ ದೀಕ್ಷಿತನು ಶ್ರೀ ವಿದ್ಯಾರಣ್ಯಭಾರತಿಸ್ವಾಮಿಗಳ ಸಂಗಡ ಪ್ರಸಂಗಮಾಡಿ ಕಕ್ಷಿನಿಂತನು. ಗುರುಗಳ ಸಂಗಡ ಸಮಕಕ್ಷಿಯಾಗಿ ಪ್ರಸಂಗಿಸಿದ ದೋಷ ಬಂತು ಎಂದು ಹನುಮಪ್ಪನಾಯಕರಿಗೆ ಕಂಡಿತು. ಈ ಪಂಚಗ್ರಾಮಗಳನ್ನು ತಿರುಮಲದೀಕ್ಷಿತನಿಂದ ಹಿಂದಕ್ಕೆ ತೆಗೆದುಕೊಂಡು ಶ್ರೀ ವಿದ್ಯಾರಣ್ಯಭಾರತಿಸ್ವಾಮಿಗಳಿಗೆ ಸಮರ್ಪಿಸಿದರು. ಈ ದಾನಪತ್ರದ ಮೇಲೆ ಪುತ್ರಸರಜ ಹನುಮಪ್ಪನಾಯಕರು ಎಂಬ ದೇವರನಾಗರಿಲಿಪಿಯಲ್ಲಿ ಅಷ್ಟಕೋಣಾಕೃತಿಮುದ್ರೆ ಇರುತ್ತೆ. A.D. 1568ರಲ್ಲಿ ಹನುಮಪ್ಪನಾಯಕರ ಮಕ್ಕಳು ಬಿಲ್ಲಪ್ಪ, ಕೆಂಗಪ್ಪನಾಯಕರುಗಳು ಮಲ್ಲೂರು ಸೀಮೆಯನ್ನು ದಾನಮಾಡಿರುತ್ತಾರೆಂದು ತಿಳಿಯುತ್ತದೆ.

ಈ ಮುಂದೆ 1637ರಲ್ಲಿ ಬಿಜಾಪುರದ ರಣದುಲ್ಲಾಖಾನನಿಗೆ ಸೋತ ಈ ಪಾಳೇಗಾರರು ಬಸವಾಪಟ್ಟಣ ಸೀಮೆಯಿಂದ ತರೀಕೆರೆಗೆ ರಾಜಧಾನಿಯನ್ನು ಬದಲಾಯಿಸಿಕೊಳ್ಳುತ್ತಾರೆ. ತರೀಕೆರೆಯ ಸ್ಥಳದ ಚುನಾವಣೆಗೆ ಆ ಸ್ಥಳದಲ್ಲಿ ಮೊಲಗಳು ನಾಯಿಗಳನ್ನು ಸೋಲಿಸಿದವೆಂಬ ಸರ್ವಸಾಧಾರಣವಾದ ಕಥೆ ಇದೆ. ಇಲ್ಲಿಂದ ಮುಂದಿನ ದಾನಪತ್ರಿಗಳು ತರೀಕೆರೆಯಲ್ಲಿ ಮುಂದುವರೆದ ಪರಂಪರೆಗೆ ಸೇರಿವೆ.

ಮುಂದೆ 1648, 1657, 1658, ಇಸವಿಗಳಲ್ಲಿ ಇಮ್ಮಡಿ ಹನುಮಪ್ಪನಾಯಕರ ಪೌತ್ರರಾದ ನಿಜಮದ ವಣಿಗ ಹನುಮಪ್ಪನಾಯಕರ ಪುತ್ರರಾದ ಸರ್ಜ ಹನುಮಪ್ಪನಾಯಕರು ಎರಡನೆಯ ವಿದ್ಯಾರಣ್ಯಭಾರತಿ ಸ್ವಾಮಿಗಳ ವರಿಗೆ ಶೆಟ್ಟಿಹಳ್ಳಿ, ಸನ್ಯಾಸಿಕೊಪ್ಪ, ಮಳಲಕೊಪ್ಪ, ದಂದೂರು, ಜಾವಳ್ಳಿ, ಹಂಗರಹಾಳು ಗ್ರಾಮಗಳನ್ನು ದಾನ ಮಾಡುತ್ತಾರೆ. ಜಾವಳ್ಳಿ ಗ್ರಾಮ ದಾನಮಾಡುವಾಗ ಅವರು ಕೂಡಲಿ ತುಂಗಭದ್ರ ಸಂಗಮ ಸ್ನಾನಕ್ಕೆ ಬಂದದ್ದನ್ನು ಉಲ್ಲೇಖಿಸುತ್ತಾರೆ. ಹಂಗರುಹಾಳು ಗ್ರಾಮ ದಾನಮಾಡುವಾಗ ಅವರ ರಾಜ್ಯವು ಬಿದನೂರು ರಾಜ್ಯದ ರಾಮಚಂದ್ರಪುರದ ಪರ್ಯಂತ ವಿಸ್ತರಿಸಲ್ಪಟ್ಟುದನ್ನು ತಿಳಿಸುತ್ತಾರೆ. ಈ ಎಲ್ಲ ದಾನಪತ್ರಗಳಲ್ಲೂ "ನಮ್ಮ ಹಿರಿಯರು ಕೂಡಲಿ ಕ್ಷೇತ್ರದಲ್ಲಿ ಕಟ್ಟಿಸಿಕೊಟ್ಟ ಕೂಡಲಿ ಶೃಂಗೇರಿ ಮಠದ ಧರ್ಮಕ್ಕೆ"ಎಂದು ನಿರ್ದೇಶಿಸುತ್ತಾರೆ. ಮೇಲಿನ ಮತ್ತು ಕೊನೆಯ ಸೀಲುಗಳು ಹಿಂದೆ ಹೇಳಿದ ರೀತಿಯಲ್ಲಿ ಇವೆ. 1668 ರಲ್ಲಿ ಕೂಡಲಿ ನರಸಿಂಹಭಾರತಿ ಸ್ವಾಮಿಗಳವರು ದೂರ ದೇಶಸಂಚಾರ ಹೋಗಿದ್ದಾಗ ಕೂಡಲಿ ಶೃಂಗೇರಿ ಮಠಕ್ಕೆ ಸೇರಿದ ಹರಕೆರೆ ಪಂಚಗ್ರಾಮಗಳು, ದಂದೂರು, ಲಂಗ್ಲಾಪುರ, ದೇಮಪುರ ಗ್ರಾಮಗಳು ಶ್ರೀಮಠಕ್ಕೆ ನಡೆಯದೆ ತಡೆಯಲ್ಪಟ್ಟದ್ದರಿಂದ ಶ್ರೀಗಳವರ ಶ್ರೀಮುಖ

ನೋಡಿ ಹಿಂದಿನ ಪ್ರಮಾಣಗಳನ್ನು ನೋಡಿ ಆ ಗ್ರಾಮಗಳನ್ನು ಮಠಕ್ಕೆ ಮುಂದುವರಿಸುವಂತೆ ಸಂತೆಬೆನ್ನೂರು ಹನುಮಪ್ಪನಾಯಕರು ಏರ್ಪಾಡು ಮಾಡುತ್ತಾರೆ.

1678ರಲ್ಲಿ ಅಮ್ಮನವರ ಸೇವೆಗೆ ಕಾತೂರುಸೀಮೆಯೊಳಗಣ ಚಿಕ್ಕಾತೂರ ಸ್ಥಳದ ದೇವಾಪುರ ಗ್ರಾಮದಲ್ಲಿ ನಡೆದು ಬರುತ್ತಿದ್ದ 30 ವರಹಗಳಿಗೆ 20 ವರಹಗಳನ್ನು ಹೆಚ್ಚಿಸಿ 50 ವರಹ ಮಾಡುತ್ತಾರೆ.

1679ರಲ್ಲಿ ಹಿಂದಿನ ಗುರುಗಳು ಮಾಡಿದಂತೆ ಅಗ್ರಹಾರ ಮಾಡಲು ದೇಮಪುರ ಗ್ರಾಮವನ್ನು ಶೀತಾ ರಾಮಪ್ಪನಾಯಕರು ಶ್ರೀ ಶಂಕರ ಭಾರತಿ ಸ್ವಾಮಿಗಳಿಗೆ ಕೊಡುತ್ತಾರೆ.

1682ರಲ್ಲಿ ಸದರಿ ಸೀತಾರಾಮಪ್ಪನಾಯಕರು ಕೂಡಲಿ ಶೃಂಗೇರಿ ಶ್ರೀವಿದ್ಯಾರಣ್ಯಭಾರತೀಸ್ವಾಮಿಗಳವರಿಗೆ ನಡೆಯುತ್ತಿದ್ದ ದಂಡೂರು ಗ್ರಾಮವು ಅವರ ಮುಕ್ತಿ ಅನಂತರ ಶೃಂಗೇರಿ ಮಠಕ್ಕೆ ಸೇರಿದ್ದುದನ್ನು ಕೂಡಲಿಶೃಂಗೇರಿ ಶಂಕರಭಾರತೀಸ್ವಾಮಿಗಳವರಿಗೆ ಹಿಂತಿರುಗಿಸುತ್ತಾರೆ.

ಸುಮಾರು 1685 ರಲ್ಲಿ ಬಸವಾಪಟ್ಟಣವು ಗೋಲ್ಕೊಂಡದ ಬಾದಶಹರಿಗೆ ಸೇರಿತು. ಆಗ್ಗೆ ದಂಡೂರು ಗ್ರಾಮವನ್ನು ಅವರು ಮೊದಲು ಕೂಡಲಿ ಶೃಂಗೇರಿ ಮಠಕ್ಕೆ ನಡೆಸಿದರು. ಆಮೇಲೆ ಶೃಂಗೇರಿ ಕ್ಷೇತ್ರದಲ್ಲಿರುವ ಮಠದಿಂದ ಕೊಟ್ಟ ತಿಳುವಳಿಕೆಯಂತೆ ಆ ಗ್ರಾಮವು ಕೂಡಲಿ ಮಠದ ಕೈ ತಪ್ಪಿತು. ಪುನಃ ಇವರಿಗೇ ನಡೆಸಬೇಕೆಂದು ಸೀತಾರಾಮಪ್ಪನಾಯಕರು ಗೋಲ್ಕಂಡದ ದಿವಾನ ಮಹದಾಜಿ (ಮಾದನ್ನ) ಪಂಡಿತರಿಗೆ ಬರೆಯುತ್ತಾರೆ. ಈ ಪತ್ರದಲ್ಲಿ ನಾಯಕರ ವಂಶಕ್ಕೆ ಹಿಂದೆ ಸೇರಿದ್ದ ಬಸವಾಪಟ್ಟಣದ ಸೀಮೆಯನ್ನು ತಿರುಗಿ ತನಗೆ ಸಲ್ಲಿಸಬಹುದೆಂದು ನಿರೀಕ್ಷಿಸುತ್ತಾರೆ.

1687 ರಲ್ಲಿ ದೇಮಪುರ ಗ್ರಾಮದಿಂದ ನಾಯಕರಿಗೆ ಸಲ್ಲುವ ಆರೇರಪಟ್ಟಿ, ಮೊಗಲರಪಟ್ಟಿ, ವರ್ತನೆ, ವರಾಡ ಮುಂತಾದ್ದನ್ನು ಸಂತೇಬೆನ್ನೂರು ಹನುಮಪ್ಪನಾಯಕರು ರದ್ದುಮಾಡುತ್ತಾರೆ.

ಅನಂತರ ಬಹಳಕಾಲದ ಮೇಲೆ 1814 ರಲ್ಲಿ ಸಂತೇಬೆನ್ನೂರು ಸರ್ಜ ಇಮ್ಮಡಿ ಹನುಮಪ್ಪನಾಯಕರ ಪೌತ್ರರಾದ ಸರ್ಜ ಕೃಷ್ಣಪ್ಪನಾಯಕರ ಪುತ್ರರಾದ ಸರ್ಜ ರಂಗಪ್ಪನಾಯಕರು ಶ್ರೀನರಸಿಂಹಭಾರತಿಸ್ವಾಮಿಗಳವರಿಗೆ ತರೀಕೆರೆ ಕಸಬೆ ದೊಡ್ಡಕೆರೆ ಹಿಂದಿನ ದೊಡ್ಡ ತೋಟವನ್ನು ದಾನಮಾಡುತ್ತಾರೆ.

ತರೀಕೆರೆ ಪಾಳೆಯಗಾರರು ಕೂಡಲಿಯಲ್ಲಿರುವ ಶೃಂಗೇರೀ ಮಠಕ್ಕೇನೆ ಶಿಷ್ಯರಾಗಿದ್ದು ಅದನ್ನೇ ಸರ್ವಭಾವ ದಿಂದಲೂ ಗೌರವಿಸುತ್ತಿದ್ದುದರ ಫಲವಾಗಿ ಶೃಂಗೇರಿಯಲ್ಲಿರುವ ಸ್ವಾಮಿಗಳವರಿಗೆ ಪಾಳೆಯಗಾರರ ಮೇಲೆ ಹೆಚ್ಚಾದ ವೈಮನಸ್ಯವಿತ್ತು. ಇದನ್ನು ಗುರುವಂಶಕಾವ್ಯದ "ಪುರಾಧಿಪತಿನಾ ಪುರಾ ಪ್ರಚಿತ ವೈಮನಸ್ಯೋಪ್ಯಯಂ ತದಾಪ್ರಣ ಯಮಪ್ಯರರ್ಯಕುರುತೈತದರ್ಥಂ ಸ್ವಯಮ್" (ಸರ್ಗ ೧೪ ಶ್ಲೋ ೬೦) ಎಂಬ ಶ್ಲೋಕವು ವ್ಯಕ್ತಪಡಿಸುತ್ತದೆ.

## B. ಹರತಿ ನಿಡುಗಲ್ಲು ಪಾಳೆಯಗಾರರು

ಹರತಿ, ನಿಡುಗಲ್ಲು ಪಾಳೇಗಾರರ ಮೂಲಪುರುಷನು ವಿಜಾಪುರ ಪ್ರಾಂತದವನು. ಇವನು ಕ್ಷತ್ರಿಯ. ಸೂರ್ಯ ದೇವನಿಂದ ತಿಮ್ಮರಾಜಪುತ್ರಿಯಲ್ಲಿ ಜನಿಸಿದನೆಂದು ಪ್ರತೀತಿ. ತಾಯಿ ಮತ್ತು ಮಾತಾಮಹರಿಂದ ತ್ಯಜಿಸಲ್ಪಟ್ಟ ಇವನು ಕವಾಡಿಗನಿಂದ ಪೋಷಿಸಲ್ಪಟ್ಟನು. ಪ್ರಾಥನಾದ ಮೇಲೆ ಕೃಷ್ಣದೇವರಾಯನಲ್ಲಿ ಸೇರಿದನು. ಅಲ್ಲಿ ಹುಲಿಗಳ ಕುಸ್ತಿ ನಡೆಯಿತು. ಗುಂಪಿನಿಂದ ತಪ್ಪಿಸಿಕೊಂಡ ಹುಲಿಯೊಂದು ದನಕರುಗಳ ನಡುವೆ ನುಗ್ಗಲು ಇವನು ತನ್ನ ಕೊಡಲಿಯಿಂದ ಅದನ್ನು ಕೊಂದನು. ಇನ್ನೊಂದು ಸಂದರ್ಭದಲ್ಲಿ ಪ್ರಸಿದ್ಧನಾದ ಜಟ್ಟಿಯನ್ನು ಸೋಲಿಸಿ ಕೊಂದನು. ಇವನ ಶೌರ್ಯ ಸಂತುಷ್ಟನಾದ ಕೃಷ್ಣದೇವರಾಯನಿಂದ ತಿಪ್ಪಣ್ಣನಾಯಕ ಎಂಬ ಹೆಸರೂ ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗದ ವನರಾಜ್ಯವೂ ಇವನಿಗೆ ಕೊಡಲ್ಪಟ್ಟಿತು. ಮಾಚಿಸಮುದ್ರ, ಗೋಸಿಕೆರೆ, ಚಳ್ಳಕೆರೆ ಪ್ರಾಂತ್ಯಗಳು ಇವನ ರಾಜ್ಯವಾದವು. ದೊಡ್ಡೇರಿ, ಹರತಿ ಮುಂತಾದ ಊರುಗಳನ್ನು ತನ್ನ ಪೂರ್ವಿಕರ ನೆನಪಿಗಾಗಿ ಕಟ್ಟಿಸಿದನು. ಚಿತ್ರದುರ್ಗದಿಂದ

ಪಾವುಗಡ, ಮೊಳಕಾಲ್ಮುರುವಿನಿಂದ ಸಿರಾವರೆಗೆ ಇವನ ರಾಜ್ಯವಿಸ್ತಾರವಿದ್ದಿತು. ಇವನು ಕ್ಷತ್ರಿಯನಾದುದರಿಂದ ಆತ್ರೇಯಗೋತ್ರ, ಆಪಸ್ತಂಭ ಸೂತ್ರ, ಯಜುಶ್ಶಾಖೆಗೆ ಸಂಬಂಧಿಸಿದ್ದನು. ಶ್ರೀಮನ್ಮಹಾಮಂಡಲೇಶ್ವರ ಎಂಬ ಬಿರುದನ್ನು ಧರಿಸಿದ್ದನು. 1564ರಲ್ಲಿ ಹರತೀ ಸರ್ಜ ಕೃಷ್ಣಪ್ಪರಾಜರ ಪೌತ್ರ ರಂಗಪ್ಪರಾಜರ ಪುತ್ರ ಸೀರೇದ ರಂಗಪ್ಪ ರಾಜನು ರಾಯದುರ್ಗ ವೆಂತೆಯವಳಗಣ ಸಿರೆದಸೀಮೆಗೆ ಸಲ್ಲುವ ಬರನೂರು ಕೆಳಗಣ ಗಗ್ರ ಹೊಸಹಳ್ಳಿ ಗ್ರಾಮವನ್ನು ಶ್ರೀಶಂಕರ ಭಾರತೀ ಸ್ವಾಮಿಗಳವರಿಗೆ ದಾನಮಾಡುತ್ತಾನೆ.

ಮುಂದೆ ಬಹಳಕಾಲದ ಮೇಲೆ 1676ರಲ್ಲಿ ಹರತಿ ಸಮ್ಮೇಟ ಸರ್ಜೆರಂಗಪ್ಪರಾಜರ ಪೌತ್ರ ಕೃಷ್ಣಪ್ಪರಾಜರ ಪುತ್ರ ರಾಯಪ್ಪರಾಜನು ಮಾಯಗೊಂಡನಹಳ್ಳಿ ಗ್ರಾಮವನ್ನು ದಾನಮಾಡುತ್ತಾನೆ.

1701ರಲ್ಲಿ ಕೃಷ್ಣಪ್ಪರಾಜರ ಪೌತ್ರ ರಾಯಪ್ಪರಾಜರ ಪುತ್ರ ರಾಯಪ್ಪರಾಜನು ಲಚ್ಚಮ್ಮಯ್ಯನವರ ಹಳ್ಳಿ ಗ್ರಾಮವನ್ನು ದಾನಮಾಡುತ್ತಾನೆ. 1712ರಲ್ಲಿ ಅದೇ ರಾಜನು ರಂಗನ ಹಳ್ಳಿ ಎಂಬ ಗ್ರಾಮ ದಾನಮಾಡುತ್ತಾನೆ. 1739ರಲ್ಲಿ ಹರತಿ ಸರಜ ರಾಯಪ್ಪರಾಜನು ಲಚ್ಚಮ್ಮನಹಳ್ಳಿ ಗ್ರಾಮದ ಭೂಮಿಯನ್ನು ಪಕ್ಕದ ಗ್ರಾಮದವರು ಆಕ್ರಮಿಸುತ್ತಿದ್ದುದನ್ನು ಪರಿಹರಿಸುತ್ತಾನೆ.

1775ರಲ್ಲಿ ಹರತಿ ರಾಮಣ್ಣರಾಜರ ಪೌತ್ರ ವೀರರಾಯಪ್ಪರಾಜರ ಪುತ್ರ ರಂಗಪ್ಪರಾಜನು ಮೊದಲು ಕೊಟ್ಟಿದ್ದ ಸಾದರಹಳ್ಳಿ ಗ್ರಾಮಕ್ಕೆ ಬದಲಾಗಿ ಅಗಳಿ ಸ್ಥಳದ ಉಪಗ್ರಾಮ ತುರೆ ಸಾಲನಾಗನಹಳ್ಳಿ ಎಂಬ ಗ್ರಾಮ ವನ್ನು ದಾನಮಾಡಿ ದಾನಪತ್ರವನ್ನು, ಅಗಳಿ ಗ್ರಾಮದ ಗೌಡ, ಶ್ಯಾನುಭೋಗರಿಗೆ ನಿರೂಪವನ್ನೂ ಕೊಡುತ್ತಾನೆ.

### ಕರೇಕೆರೆ ಸಂತರಗಲ್ಲು (ಸರ್ವಾಡ)

1712ರಲ್ಲಿ ನಿಡಗಲ್ಲು ಕರೇಕೆರೆ ಸಂತರಗಲ್ಲಿನ ಆತ್ರೇಯ ಗೋತ್ರೋತ್ಪನ್ನ ರಂಗಪ್ಪನಾಯಕರ ಪೌತ್ರ ವೆಂಕಟಪ್ಪ ನಾಯಕರ ಪುತ್ರ ತಿಮ್ಮಣ್ಣ ನಾಯಕರು, ಅವರು ಆಳುವ ರಾಜ್ಯದ ಚಿರತಹಳ್ಳಿ ಕೆಳಗಿನ ಕರೇಮಾಸನಹಳ್ಳಿ ಗ್ರಾಮವನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ದಾನಮಾಡುತ್ತಾರೆ.

ನಿಡಗಲ್ಲು ನಾಯಕರು ಶ್ರೀಮನ್ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವ ನಾಯಕರ ಗಂಡ, ಮರೆ ಹೊಕ್ಕವರ ಕಾಯುವ ಮಾರಾಂತರ ಗೆಲ್ಲುವ, ಮೆಚ್ಚಿಮೆಚ್ಚದವರ ಗಂಡ, ಮ್ಯಾಸನ ಶಿರಃಖಂಡನ, ಬಾದುರ ಮುಲಕಸಪ್ತಾಂಗ ಹರಣ, ಕಠಾರಿ ಚೆಲ್ವರ ಗಂಡ ಕಸ್ತೂರಿ ಕೋಲಾಹಲ, ಪರಸಿನ ಭೈರವ ಆಜ್ಞಾದಂಡ, ಪ್ರತಿಜ್ಞಾ ಪರಶುರಾಮ, ಎನುಮುಲಮಂದ, ಪ್ರಾರ್ಥಿತಮಲ್ಲ, ನಿಜಭುಜ ಪ್ರತಾಪೋದ್ಧಾರಿತರಣ, ಉಭಯದಳ ಪೂಜ್ಯ, ಲಂಗರಿಪುನೃಪಕದಳೀವನ ಮತ್ತಮಾತಂಗ, ಅರಿರಾಯ ವೇಶ್ಯಾಭುಜಂಗ, ಶಂಖಚಕ್ರಮಕರ ವೃಷಭಧ್ವಜ ಬಿರು ದಾಂಕ, ಭಾರಿ ನಿಗಳಾಂಕ ಅರಿದಳ ವಿಭಾಡ, ಕಾಳಾಂಜನಗಿರಿ ಪುರವರಾಧೀಶ್ವರ ಎಂದು ಬಿರುದುಗಳನ್ನು ಧರಿಸುತ್ತಿದ್ದರು.

ಈ ವಂಶದ ಮುಮ್ಮಡಿ ಹೊಟ್ಟಣ್ಣ ನಾಯಕನು ವದಗಿನಕಲ್ಲು ಹೋಬಳಿ ಜಡಗೊಂಡನ ಹಳ್ಳಿ ಗ್ರಾಮವನ್ನು ದಾನ ಮಾಡುತ್ತಾನೆ.

1743ರಲ್ಲಿ ಇದೇ ಗ್ರಾಮಕ್ಕೆ ವಾಮನಮುದ್ರೆ ಕಲ್ಲು ನೆಡಿಸುತ್ತಾನೆ.

1775ರಲ್ಲಿ ಹರತಿ ನಿಡಗಲ್ಲು ಮುಮ್ಮಡಿ ವೀರತಿಮ್ಮಣ್ಣ ನಾಯಕನು ರಂಗಸಮುದ್ರದಲ್ಲಿ ಮೊದಲು ಕೊಟ್ಟ ತೋಟದ ಗುತ್ತಿಗೆ ಮಠಕ್ಕೆ ಸಲ್ಲುವಂತೆ ಮಾಡುತ್ತಾನೆ.

### C. ಕೆಳದಿ ಪಾಳೆಯಗಾರರು

ಕೆಳದಿ ಪಾಳೆಯಗಾರರ ರಾಜಧಾನಿ ಬಿದನೂರು (ನಗರ) ಅಲ್ಲಿ ಈ ಪಾಳೆಯಗಾರರು ಶಾ. ಶ. ೧೪೨೨ ರಿಂದ ೧೬೮೫ ರವರೆಗೆ 263 ವರ್ಷಗಳ ಕಾಲ 18 ಜನರು ಆಳಿದರು. ಆರನೇ ಅರಸು ಹಿರಿಯ ವೆಂಕಟಪ್ಪ

ನಾಯಕನಿಂದ ಈ ಮಠಕ್ಕೆ ಇವರ ಪತ್ರವ್ಯವಹಾರಗಳು ಪ್ರಾರಂಭವಾಗುತ್ತವೆ. ಇವರು ವೀರಶೈವ ಮತಕ್ಕೆ ಸೇರಿದವರು. ಶ್ರೀಮದ್ದೆಡನ ಮುರಾರಿ, ಕೋಟಿಕೋಲಾಹಲ, ವಿಶುದ್ಧ ವೈದೀಕಾ ದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಶಿವಗುರು ಭಕ್ತಿ ಪರಾಯಣ ಮುಂತಾದ ಬಿರುದುಗಳನ್ನು ಧರಿಸುತ್ತಿದ್ದರು.

ಶಾ. ಶ. ೧೫೪೦ ಕ್ರಿ. 1618ರಲ್ಲಿ ಕೆಳದಿ ವೆಂಕಟಪ್ಪನಾಯಕನು ಅಂಕೋಲೆ, ಸೂಪ, ಸೋಂದೆ ಮುಂತಾದ ತಾಲೂಕಗಳ ಮಠಮುದ್ರೆ ಆಚಾರ ವಿಚಾರ, ಅಗ್ರತಾಂಬೂಲ, ದೀಪಾರಾಧನೆ ಮುಂತಾದ್ದು ಕೂಡಲಿ ಶೃಂಗೇರಿ ಮಠಕ್ಕೆ ಹಿಂದಿನಂತೆ ಮುಂದೆಯೂ ನಡೆಯಬೇಕೆಂದೂ ಶೃಂಗೇರಿಯವರು ತೊಂದರೆ ಕೊಡಕೂಡದೆಂದೂ ನಿರೂಪ ಕೊಡುತ್ತಾನೆ.

ಅಲ್ಲಿಂದ ಮುಂದೆ ಐವತ್ತು ವರ್ಷಗಳ ಮೇಲೆ ಎಂದರೆ ಕ್ರಿ. ಶ. 1668ರಲ್ಲಿ ಕೆಳದಿ ಸೋಮಶೇಖರ ನಾಯಕನು ಕೂಡಲಿ ನರಸಿಂಹ ಭಾರತೀ ಸ್ವಾಮಿಗಳಿಗೆ ಕೂಡಲಿಯ ಹೊಸಮಠ, ಹಳೇಮಠಗಳನ್ನು ಸ್ವಾಧೀನಪಡಿಸಿಕೊಟ್ಟು ಅನ್ಯಾಯದಿಂದ ಶೃಂಗೇರೀ ಮಠದ ಸಚ್ಚಿದಾನಂದ ಭಾರತಿಗಳಿಗೆ ಸೇರಿಹೋಗಿದ್ದ ಕೂಡಲಿಶೃಂಗೇರಿಮಠದ ಮಾಚೇನ ಹಳ್ಳಿ ಗೋಪಗೊಂಡನಹಳ್ಳಿ, ಕೆರೇಹಳ್ಳಿ ಗಾವಟೂರು ಮುಂತಾದ ಗ್ರಾಮಗಳನ್ನು ಹಿಂದಿರುಗಿಸಿ ಸಮರ್ಪಿಸುತ್ತಾನೆ.

ಈ ಸಂದರ್ಭದಲ್ಲಿ ನಡೆದ ಘಟನೆ ಏನೆಂದರೆ ಕೂಡಲಿ ಮಠದಲ್ಲಿ ಶ್ರೀವಿದ್ಯಾರಣ್ಯ ಭಾರತೀಸ್ವಾಮಿಗಳು ವೃದ್ಧ ರಾಗಿದ್ದು ವಾಸಮಾಡಿಕೊಂಡಿದ್ದರು. ಅವರ ಶಿಷ್ಯರಾದ ಶ್ರೀನರಸಿಂಹ ಭಾರತೀ ಸ್ವಾಮಿಗಳು ಸಂಚಾರಾರ್ಥವಾಗಿ ಬಹುದೂರ ಹೋಗಿದ್ದರು. ಆಗ ಕೂಡಲಿಯಲ್ಲಿ ಶ್ರೀವಿದ್ಯಾರಣ್ಯ ಭಾರತೀಸ್ವಾಮಿಗಳು ಕ್ರಿ. ಶ. 1661ರಲ್ಲಿ ಮುಕ್ತ ರಾದರು. ಈ ಸಂಧಿಯನ್ನು ಸಾಧಿಸಿ ಶೃಂಗೇರಿ ಸಚ್ಚಿದಾನಂದ ಭಾರತೀ ಸ್ವಾಮಿಗಳು ಕೆಳದಿ ಶಿವಪ್ಪನಾಯಕರಿಗೆ ಶ್ರೀಮುಖ ಬರೆದು ಕೂಡಲಿ ಮಠವು ತಮಗೇ ಸೇರಿಹೋಗಿದೆ. ಅದರ ಆಸ್ತಿಪಾಸ್ತಿಗಳನ್ನು ತಮ್ಮ ಸ್ವಾಧೀನಪಡಿಸ ಬೇಕೆಂದು ಕೇಳಿದರು. ನಾಯಕನು ಅದರಂತೆ ನರಸನೆಂಬುವನಿಗೆ ನಿರೂಪ ಕಳುಹಿಸಿದನು. ಸಚ್ಚಿದಾನಂದ ಭಾರತೀ ಸ್ವಾಮಿಗಳು ಕೂಡಲಿಗೆ ಬಂದು ಮಠದಲ್ಲಿದ್ದ ವಿಶಿಷ್ಟ ಪದಾರ್ಥಗಳನ್ನು ಗ್ರಾಮ ಭೂಮಿಗಳನ್ನು ತಮ್ಮ ಸ್ವಾಧೀನ ಮಾಡಿಕೊಂಡರು*. ಈ ವಿಚಾರವನ್ನು ಶ್ರೀಮಠದ ಹಳೆಯ ಕಡತದಲ್ಲಿ "ಶಾಲಿವಾಹನ ಶಕವರುಷ ೧೫೮೫ ಸಾವಿರದ ಐದುನೂರಯಂಭತ್ತೈದನೆಯ ಕ್ರೋಧಿ ಸಂವತ್ಸರದ ಮಾರ್ಗಶಿರ ಶುದ್ಧ ೭ ದಿವಸ ನಮ್ಮ ಮಠದಲ್ಲು ಯಿದ್ದಂಥ ಚಂದ್ರ ಮೌಳೀಶ್ವರ ರತ್ನಗರ್ಭ ವಿನಾಯಕ ಯಿದಲ್ಲದೆ ಯಿರಡು ಅಂಕಣ ದೇವತಾರ್ಚನೆಯು ಮೂರು ಅಂಕಣ ಪುಸ್ತಕ ಮುತ್ತಿನ ಗದಿಗೆ ಮುತ್ತಿನ ಕುಲಾಯಿ ವಜ್ರವೈಢೂರ್ಯ ಹವಳ ಮುತ್ತು ಅಶ್ವ ರಥ ಪದಾತಿ ಅನೇಕ ಸಹಸ್ರ ವರಹಗಳನ್ನು ತೆಗೆದುಕೊಂಡು, ಹೋಗುವ ಸಮಯದಲ್ಲಿ ಸೀಮೊಗೆ ಕೋಠೇ ಠಾಣದಾರ ನರಸಂಣಗವುಡನು ಯಿಾಪದಾರ್ಥಗಳನ್ನೆಲ್ಲಾ ಕಂಡು ಯಿವರು ಬಲವಂತದಿಂದ ಲೂಟಿಸಿಕೊಂಡು ಹೋಗಥಾರೆಯೆಂದು ತಿಳಿದು ಪದಾರ್ಥಗಳನ್ನೆಲ್ಲಾ ಕೋಟೆಗೆ ಹಾಕಿಸಿಕೊಂಡನು. ಆಮೇಲೆ ಯೀ ಬಗ್ಯೆ ಶ್ರಿಂಗೇರಿಯವರು ಬಿದುರೂರಿಗೆ ಹೋಗಿ ಬಗಲ ವೆಚ್ಚಾಮಾಡಿ ಕೋಟೆಗೆ ವಾಲೀ ತಂದು ಪದಾರ್ಥಗಳನ್ನೆಲ್ಲಾ ತೆಗೆದುಕೊಂಡು ಹೋದರು. ಆಮೇಲೆ ನಮ್ಮ ಬಗ್ಯೆ ಬ್ರಾಹ್ಮಣನ ಬಿದುರೂರಿಗೆ ಕಳುಹಿಸಿದಲ್ಲಿ ಅರಸುಗಳ ಬೆಟ್ಟೀ ಆಗಲಾಗಿ ಅರಸುಗಳು ನಮ್ಮ ಬಗ್ಯೆ ಬ್ರಾಹ್ಮಣಗೆ ಉಡುಗೊರೆಯನ್ನು ಕೊಟ್ಟು ಸಮಾಧಾನಮಾಡಿ ಆ ಪದಾರ್ಥಗಳನ್ನು ಕೊಡಿಸಥೇವೆಯೆಂದು ಯಿಟ್ಟುಕೊಂಡ್ಡು ಯಿದ್ದಲ್ಲಿ ಶ್ರಿಂಗೇರಿಯವರು ಬಗಲವೆಚ್ಚಾಮಾಡಿ ಕೊಡದಹಾಗೆ ಮಾಡಿದರು. ಆ ಮೇಲೆ ಸೋಮಶೇಖರನಾಯಕರು ಕೆಲವು ಗ್ರಾಮ ಭೂಮಿ ಸ್ವಾಸ್ಥೆಯನ್ನು ಬಿಡಿಸಿಕೊಟ್ಟರು" ಎಂದು ಬರೆದಿಡಲಾಗಿದೆ.

ಕೂಡಲೀ ಶೃಂಗೇರೀ ಮಠದ ಸ್ಥಾಪನೆಯ ಸಂದರ್ಭವನ್ನು ವಿಪರೀತವಾಗಿ ತಿಳಿಸುತ್ತಾ ಶೃಂಗೇರಿ ಮಠದ ಗುರುವಂಶ ಕಾವ್ಯದಲ್ಲಿಯೂ ಈ ಸಂದರ್ಭವನ್ನುಲ್ಲೇಖಿಸಲಾಗಿದೆ.

---

* ಶ್ರಿಂಗೇರಿ ಶ್ರೀ ಮಠೀಯ ಪ್ರಾಕ್ತನ ಲೇಖಮಾಲಾ ಸಂಗ್ರಹದ ಪುಟ 32 ನಂ. 15ನೇ ಶ್ರೀಮತ್ಕೆಳದಿ ಶಿವಪ್ಪ ನಾಯಕರು ನರಸಗೆ ಬರೆದ ನಿರೂಪವನ್ನು ನೋಡಿ.

ರಾಮಚಂದ್ರಾಖ್ಯ ಮೌನ್ಯುತ್ತಮ ಛಾತ್ರ
ಸನ್ನಾರಸಿಂಹಾಖ್ಯಯೋಗೀಶಶಿಷ್ಯೋಪರಃ ।
ದೂರಮುತ್ಸಾರಿತಃ ಸದ್ಗುರು ದ್ರೋಹತಃ
ಸಂಗಮಕ್ಷೇತ್ರಮಧ್ಯಾಸ್ತ ರಾಜೇರಿತಃ ॥೧॥

ಯಾತಿ ಲೋಕಾಂತರಂ ತತ್ರ ತಸ್ಮಿನ್ಯತೌ
ಸರ್ವಮೇತನ್ಮಠದ್ರವ್ಯಭೂಮ್ಯಾದಿಕಂ ।
ಸಚ್ಚಿದಾನಂದ ಮೌನೀಶ್ವರಾಯತ್ತಮೇ
ವಾಕರೋದ್ಭೂಪತಿರ್ಯುಕ್ತಕೃತ್ಸಂತತಂ ॥೨॥

ಅಭ್ಯುಪೇತ್ಯೈಷ ತದ್ಭಾಷಿತಂ ಭೂಪತೇಃ
ಸಾಧಯನ್ ಸಂಗಮಕ್ಷೇತ್ರಮಾಗಾನ್ ಮುನಿಃ ।
ಆತ್ಮನಿಘ್ನೀಕೃತೇ ತನ್ಮಠೇ ಯತ್ಸ್ಥಿತಂ
ಸರ್ವಮಪ್ಯಾದದೇ ವೃತ್ತಿವಿತ್ತಾದಿ ತತ್ ॥೩॥

ಕಿಂಚಸಾಹಸ್ರ ಲಿಂಗಾಂಚಿತಕ್ಷೇತ್ರ ಗೋ
ಕಾರಯಚ್ಚಾರು ದೇವಾಲಯಂ ಲೀಲಯಾ ।
ಸಂಪ್ರತಿಷ್ಠಾಂ ದ್ರುತಂ ಪೂರ್ಣಭಕ್ತಿರ್ವ್ಯಧಾತ್
ತತ್ರರಾಮೇಶ್ವರಾಖ್ಯಾನಲಿಂಗಸ್ಯ ಸಃ ॥೪॥

ಕಿಂಚ ತತ್ರತ್ಯ ಸಾಲಾಧಿಪೇನಾದೃತಃ
ಸರ್ವಶಿಷ್ಯಾಂಚಿತಃ ಸ್ವಾಂಪುರೀಮಾಯಯೌ ।
ತಾಪಸ್ಯೈಃ ಸರ್ವಮಪ್ರಾಪ್ಯ ಮಪ್ಯಾಪ್ಯತೇ
ಕಿಂ ವಿಚಿತ್ರಂ ಸ್ವಕಂ ಸ್ವೈವಶೇ ಭೂದಿತಿ ॥೫॥

ರಾಮಚಂದ್ರ ಮೌನಿ (ಭಾರತಿ) ಗಳ ಉತ್ತಮ ಶಿಷ್ಯನಾದ ನಾರಸಿಂಹ ಯೋಗೀಶರ ಇನ್ನೊಬ್ಬ ಶಿಷ್ಯನು ಸದ್ಗುರು ದ್ರೋಹ ಕಾರಣವೆಂದು ದೂರ ಓಡಿಸಲ್ಪಟ್ಟನು. ಆ ಶಿಷ್ಯನು ರಾಜನ ಹೇಳಿಕೆಯಂತೆ ಸಂಗಮಕ್ಷೇತ್ರ (ಕೂಡ್ಲಿಕ್ಷೇತ್ರ) ದಲ್ಲಿ ನೆಲೆಸಿದನು. (೧)

ಆ ಯತಿಯು ಅಲ್ಲಿ ಲೋಕಾಂತರವನ್ನೈದಲು, ಆ ಮಠದ ಎಲ್ಲ ದ್ರವ್ಯ ಭೂಮಿ ಮುಂತಾದವುಗಳನ್ನು ಯಾವಾಗಲೂ ಯುಕ್ತಕಾರಿಯಾದ ಭೂಪತಿಯು ಸಚ್ಚಿದಾನಂದ ಮೌನೀಶ್ವರನ ಸ್ವಾಧೀನ ಮಾಡಿದನು. (೨).

ಈ ಮುನಿ (ಸಚ್ಚಿದಾನಂದ ಭಾರತಿ) ಯು ಭೂಪತಿಯ ಮಾತನ್ನಂಗೀಕರಿಸಿ ಹೊರಟು ಸಂಗಮ ಕ್ಷೇತ್ರ (ಕೂಡಲಿ)ಕ್ಕೆ ಬಂದನು. ತನ್ನ ಸ್ವಾಧೀನ ಮಾಡಿಕೊಂಡ ಆ ಮಠ (ಕೂಡಲಿ ಮಠ) ದಲ್ಲಿದ್ದ ದುಡ್ಡು, ಭೂಮಿ, ಮೊದಲಾದುದೇನಿತ್ತೋ ಅದೆಲ್ಲವನ್ನೂ ತಾನು ತೆಗೆದುಕೊಂಡನು. (೩)

ಅನಂತರ ಸಹಸ್ರಲಿಂಗ ಕ್ಷೇತ್ರಕ್ಕೆ ಬಂದು ಸಂತೋಷದಿಂದ ಮನೋಹರವಾದ ದೇವಾಲಯವನ್ನು ಕಟ್ಟಿಸಿ, ಪೂರ್ಣಭಕ್ತಿಯಿಂದ ಅಲ್ಲಿ ರಾಮೇಶ್ವರನೆಂಬ ಲಿಂಗವನ್ನು ಪ್ರತಿಷ್ಠೆ ಮಾಡಿದನು.

ಅಲ್ಲಿಯ ದುರ್ಗದ ಅಧಿಪತಿಯಿಂದ ಸತ್ಕಾರಗೊಂಡವನಾಗಿ ಎಲ್ಲ ಶಿಷ್ಯರಿಂದೊಡಗೂಡಿ ತನ್ನ ಪಟ್ಟಣಕ್ಕೆ (ಶೃಂಗೇರಿಗೆ) ಹೋದನು. ತಪಸ್ವಿಗಳು ಅಪ್ರಾಪ್ಯವೆಲ್ಲವನ್ನೂ ಸಹ ಹೊಂದುವರೆಂದಿರುವಾಗ ತನ್ನದೇ ತನ್ನ ವಶವಾಯಿತೆಂಬುದರಲ್ಲಿ ಆಶ್ಚರ್ಯವೇನು ?

ಈ ಹಿಂದೆ ಬರೆದಂತೆ ಶ್ರೀನರಸಿಂಹಭಾರತೀಸ್ವಾಮಿಗಳು ದೇಶಸಂಚಾರದಿಂದ ಹಿಂತಿರುಗಿದ ಮೇಲೆ ಕೆಳದಿ ಸೋಮಶೇಖರ ನಾಯಕರಿಗೂ ಸಂತೇಬೆನ್ನೂರು ಹನುಮಪ್ಪನಾಯಕರಿಗೂ ಈ ವಿಚಾರ ತಿಳಿಸಿ ಸೋಮಶೇಖರನಾಯಕರಿಂದ

ಮಾಚೇನ ಹಳ್ಳಿ, ಕರೇಹಳ್ಳಿ, ಗಾವಟೂರು ಗ್ರಾಮಗಳನ್ನು ಹನುಮಪ್ಪನಾಯಕರಿಂದ ಹರಕೆರೆ ಪಂಚ ಗ್ರಾಮಗಳನ್ನು ಪುನಃ ಪಡೆಯುತ್ತಾರೆ. ಮುಂದೆ ಸೋಮಶೇಖರ ನಾಯಕರ ಅನಂತರ ರಾಜ್ಯಭಾರ ಮಾಡಿದ ಅವರ ಪತ್ನಿ ಚನ್ನಮ್ಮಾಜಿಯವರು ಉಡುಗರೆಗಳನ್ನು ಕಳುಹಿಸುತ್ತಾರೆ. ಅನಂತರ ಬಂದ ಶ್ರೀ ಶಂಕರ ಭಾರತೀಸ್ವಾಮಿಗಳವರಿಗೆ ಚನ್ನಮ್ಮಾಜಿಯವರು ಮಠ ಕಟ್ಟಿಸುವುದಕ್ಕೆ ಹೊಳೇ ಹೊನ್ನೂರು ವನಗಾವಲಿನಿಂದ ಮರಗಳನ್ನು ಕೊಡಿಸುತ್ತಾರೆ. ಅವರ ಕುಮಾರ ಬಸವಪ್ಪನಾಯಕನ ವಿವಾಹಾಂಗ ಉಡುಗರೆಯನ್ನು ಕಳುಹಿಸುತ್ತಾರೆ. ಕ್ರಿ.ಶ. 1682ರಲ್ಲಿ ಕೆಳದಿ ಚೆನ್ನಮ್ಮಾಜಿಯವರು ಹೊಳೆ ಹೊನ್ನೂರು ಸೀಮೆಯ ಅಗರದ ಹಳ್ಳಿ ಪಂಚಗ್ರಾಮಗಳಿಗೆ ದೇವತ ಉತಾರ ಪುರವರ್ಗ ಉಂಬಳಿ ಉತಾರ ಒಂಭತ್ತು ಚಿಲ್ಲರೆ ವರಹಗಳನ್ನು ಕಳೆದು ೯೦ ಗದ್ಯಾಣದ ಭೂಮಿಯನ್ನು ಹಿಂದೆ ನಡೆಯುತ್ತಿದ್ದಂತೆ ಮುಂದೆ ನಡೆಸಲು ಚನ್ನವೀರ ಒಡೆಯರಿಗೆ ಅಪ್ಪಣೆ ಕೊಡುತ್ತಾರೆ. ಕ್ರಿ.ಶ. 1683ರಲ್ಲಿ ಕೆಳದಿ ಚೆನ್ನಮ್ಮಾಜಿಯವರು ಶ್ರೀಮಠಕ್ಕೆ ಮಲ್ಲೂರು ಸೀಮೆಯನ್ನು 3,688 ವರಹಕ್ಕೆ ದೇವತಾಉತಾರ, ಕೊಲ್ಲೂರು ಮೂಕಾಂಬಿಕೆ, ಕೆಂಜಗಾಪುರದ ವೀರಭದ್ರ ದೇವರು, ಬ್ರಹ್ಮಾದಾಯ, ಭಟಮಾನ್ಯ ಮುಂತಾದವುಗಳಿಗಾಗಿ 900 ವರಹಗಳನ್ನು ತೆಗೆದು ಶುದ್ಧನಿಂತ ಶಿಸ್ತು. ಗದ್ಯಾಣ 2,788ರ ಭೂಮಿಯನ್ನು ಹಿಂದೆ ತರೀಕೆರೆ ಹನುಮಪ್ಪನಾಯಕರು ಬರೆಸಿಕೊಟ್ಟ ದಾನ ಪಟ್ಟಿಯನ್ನೂ ಹಿಂದಿನ ಕೆಳದಿ ರಾಜರುಗಳ ನಿರೂಪವನ್ನೂ ನೋಡಿ ಮುಂದೆಯೂ ಮಠಕ್ಕೆ ನಡೆಸುವಂತೆ ನಿರೂಪ ಕೊಡುತ್ತಾರೆ. ಕ್ರಿ. 1685ರಲ್ಲಿ ಶ್ಯಾಮಾಜಿ ನಾಯಕರು ಬೆಂಕೀಪುರದ ಸೀಮೆ ಬಾರಂದೂರು ಗ್ರಾಮವನ್ನು ಕೂಡಲಿ ಮಠಕ್ಕೆ ಕೊಡಬೇಕೆಂದಿದ್ದುದಕ್ಕೆ ಅರಮನೆ ಕಾಣಿಕೆ ತೆಗೆದುಕೊಂಡು ನಿರೂಪ ಕೊಡುತ್ತಾರೆ. ಅಲ್ಲಿಂದ ಮುಂದೆ 1717ರಲ್ಲಿ ಎರಡನೆಯ ಸೋಮಶೇಖರನಾಯಕರ ಆಳ್ವಿಕೆಯೊಳಗೆ ಅವರ ಮಾವಂದಿರೂ ಮುಖ್ಯಾಧಿಕಾರಿಯೂ ಆದ ನಿರ್ವಾಣಯ್ಯನವರು ಹತ್ತು ನಿರೂಪಗಳಿಂದ ವಿವಿಧ ಸ್ಥಳಗಳಲ್ಲಿ ಮಠಕ್ಕೆ ನಡೆಯುವ ದೀಪಾರಾಧನೆ ಕಾಣಿಕೆ ಮುಂತಾದುವುಗಳಿಗೂ ಮಠದವರು ನಡೆಸುವ ಆಚಾರ ವಿಚಾರಗಳಿಗೂ ಶೃಂಗೇರಿ ಮಠದವರು ತೊಂದರೆ ಕೊಡದಂತೆ ನಿರೂಪ ಕೊಡುತ್ತಾರೆ.

ಕ್ರಿ. 1743ರಲ್ಲಿ ಕೆಳದಿ ಬಸಪ್ಪನಾಯಕರು ಶೃಂಗೇರಿ ಕೂಡಲಿ ಮಠಗಳು ವಿಂಗಡವಾದ ಕಥೆಯನ್ನು ವಿವರಿಸಿ ಕೂಡಲಿ ಸ್ವಾಮಿಗಳವರು ದೇಶಸಂಚಾರ ಮಾಡಬೇಕೆಂದೂ ಶೃಂಗೇರಿಯವರು ಸ್ಥಳದಲ್ಲಿ ಶಾರದಾ ಪೂಜೆ ಮಾಡಿಕೊಂಡು ಇರಬೇಕೆಂದೂ ಆಗಿರುವ ಕಟ್ಟುಪಾಡು ತಿಳಿಸುತ್ತಾರೆ. ಸಂಚಾರ ಕ್ರಮದಿಂದ ಆಗ ರಾಮಚಂದ್ರಪುರದಲ್ಲಿರುವ ಕೂಡಲಿ ಸ್ವಾಮಿಗಳಿಗೆ ಕೇಳಿದ ಸಾಮಾನು ಕೊಡಿಸಿದಲ್ಲಿ ಲೆಖ್ಖವಾದ್ದು ಸರಕಾರದಿಂದ ಕೊಡುತ್ತೆ ಎಂದು ಹರಕಾರ ವೆಂಕಣ್ಣನಿಗೆ ನಿರೂಪ ಕೊಡುತ್ತಾರೆ. ಈ ನಿರೂಪವು 1848ರಲ್ಲಿ ಹುಜೂರು ಅದಾಲತ್ ಕೋರ್ಟಿಗೆ ಹಾಜರ್ಮಾಡಲ್ಪಟ್ಟಿತು. ಶಿವಗಂಗ ಮಠದವರು ಇದರ ನಕಲೊಂದನ್ನು ಹಾಜರ ಪಡಿಸಿದಾಗ ಮೈಸೂರು ಸರಕಾರದವರು ಕ್ರಿ. 1889 ಜುಲೈ 3663 ನೇ ಪ್ರೊಸೀಡಿಂಗ್ಸ್‌ನಲ್ಲಿ ಹೀಗೆ ವಿಮರ್ಶಿಸಿ ಹೇಳುತ್ತಾರೆ.

B is a copy of the order issued by Keladi Basavappa Naik to Venkanna dated 5th Karthika Sudda of Rudhirodgari year. In this mention is made of a Swamy of the Sringeri Mutt who went on a Pilgrimage and did not return for many years On his return he found that another Swamy had been elected for Sringeri. He therefore stationed himself at Kudli and complained to the then Keladi Chief who decided that the election at Sringeri was malicious, that the Swamy who had returned to Kudli from Pilgrimage should have Spiritual Jurisdiction and that the one elected at Sringeri as his successor should perform the Puja of Sarada and other cermonials at the mutt at Sringeri. Keladi Basavappa Naik recognises this arrangement in the document in Question, but it is not expressly stated when and in whose reign that arrangement took place. From the context of B, it may however be inferred that it

took place in the reign of one Basavappa Naik's Predecessors. From the inscriptions which have been examined the following geneology of the Keladi chiefs is deducible:

| | | | |
|---|---|---|---|
| Sivappa Naik | A. D. 1648-S. S. | 1571 | Sarvadhari |
| | A. D. 1653-S. S. | 1576 | Vijaya |
| Somasekara Naik | A. D. 1667-S. S. | 1590 | Plavanga |
| | A. D. 1671-S. S. | 1594 | Virodhikritu |
| Basavappa Naik | A. D. 1713-S. S. | 1636 | Vijaya |
| Somasekara Naik | A. D. 1722-S. S. | 1645 | Subhakrithu |

The years given above are those in which kings were alive as proved by inscriptions. The Rudhirodgari year which is the date of the document "B" must therefore be A.D. 1683—S.S. 1606. Between A and B there was thus an interval of 27 years. A larger interval is not possible, for if we take the Rudhirodgari of the next proceeding cycle, the interval would be 87 years, which would take us to A.D. 1596.—S S. 1519 as the date of A, that is to say 36 years after the foundation of the Keladi Raj.

From the documents A and B and the information regarding succession of Gurus at Sringeri, the following facts may be gathered :—

1st. Abhinava Narasimha Bharathi of Sringeri (A. D. 1599 to 1622) returning from a Pilgrimage found a successor elected in his absence at Sringeri.

2ndly The successor so elected Sachidananda Bharathi (A. D. 1622 to 1663) was allowed to remain at Sringeri while Abhinava Narasimha Bharathi remained at Kudli, and exercised Spiritual jurisdiction over the country during the remainder of his life time.

3rdly Abhinava Narasimha Bharathi's successors at Kudli named Shankara Bharathi in A. D. 1656 to 57, made a Partition of spiritual jurisdiction among his five disciples and.

4thly Sankara Bharathi at Kudli and Sachidananda Bharathi of Sringeri were his disciples of the same Abhinava Narasimha Bharathi (A. D. 1622).

[ಆಜ್ಞೆಯು ನಕಲಾದ B ಪತ್ರವು ಕೆಳದಿ ಬಸಪ್ಪನಾಯಕರಿಂದ ವೆಂಕಣ್ಣನವರಿಗೆ ಐದು ಕಾರ್ತೀಕ ಶುದ್ಧ ರುಧಿರೋದ್ಗಾರಿ ವರ್ಷದಲ್ಲಿ ಬರೆದದ್ದು. ಇದರಲ್ಲಿ ಶೃಂಗೇರಿ ಮಠದ ಒಬ್ಬ ಸ್ವಾಮಿಗಳು ಯಾತ್ರಾರ್ಥಿಯಾಗಿ ಹೊರಟು ಬಹಳ ವರ್ಷಗಳವರೆಗೆ ಹಿಂದಿರುಗಿ ಬರಲಿಲ್ಲ. ಅವರು ಹಿಂದಿರುಗಿದ ನಂತರ, ಶೃಂಗೇರಿ ಪೀಠಕ್ಕೆ ಮತ್ತೊಬ್ಬ ಸ್ವಾಮಿಗಳು ಚುನಾಯಿಸಲ್ಪಟ್ಟಿರುವುದನ್ನು ತಿಳಿದು, ಕೂಡಲಿಯಲ್ಲಿಯೇ ನಿಂತು, ಕೆಳದಿ ರಾಜರುಗಳಿಗೆ ಫಿರ್ಯಾದು ಮಾಡಿದರು. ಆಗ ಕೆಳದಿ ರಾಜರು ಶೃಂಗೇರಿಯಲ್ಲಿ ಮತ್ತೊಬ್ಬ ಸ್ವಾಮಿಗಳ ನಿಯಾಮಕವು ದುರುದ್ದೇಶ ಪೂರಿತವೆಂದೂ, ಕೂಡಲಿಯಲ್ಲಿ ನಿಂತಿರುವ ಸ್ವಾಮಿಗಳೇ ಮಠಾಧಿಪತಿಗಳೆಂದೂ, ಶೃಂಗೇರಿಯಲ್ಲಿ ನಿಯಮಿಸಲ್ಪಟ್ಟಿರುವ ಸ್ವಾಮಿಗಳು ಶಾರದಾಪೂಜೆ, ಇನ್ನಿತರ ಪೂಜೆಗಳನ್ನು ನಡೆಸಬೇಕೆಂದೂ ಏರ್ಪಾಟುಮಾಡಿದರು. ಕೆಳದಿ ಬಸಪ್ಪನಾಯಕರು ಈ ಏರ್ಪಾಟನ್ನು ಮೇಲೆ ಹೇಳಿರುವಂಥ ಪತ್ರದಲ್ಲಿ ಒಪ್ಪಿಕೊಂಡಿದ್ದಾರೆ. ಆದರೆ ಈ ಪತ್ರದಲ್ಲಿ ಈ ಏರ್ಪಾಟು, ಯಾವಾಗ, ಯಾರಕಾಲದಲ್ಲಾಯಿತು ಎಂದು ವಿಶದಪಡಿಸಿಲ್ಲ. ಆದರೆ ಈ ಪತ್ರದ ಸಾರಾಂಶದಿಂದ ಈ ಒಡಂಬಡಿಕೆಯು ಬಸಪ್ಪನಾಯಕರ ಹಿಂದಿನವರ ಕಾಲದಲ್ಲಿಯೇ ಆಗಿರಬೇಕೆಂದು ತಿಳಿದು ಬರುತ್ತದೆ. ಶಾಸನಗಳನ್ನು ಪರೀಕ್ಷಿಸಿದ ಮೇಲೆ ಕೆಳದಿ ವಂಶಸ್ಥರ ವಂಶಾವಳಿ ವಿವರಣೆ :

ಶಿವಪ್ಪನಾಯಕ—A.D. 1648—1653 (1571-1576)
ಸೋಮಶೇಖರ ನಾಯಕ—A.D. 1667-1671
ಬಸಪ್ಪನಾಯಕ—A.D. 1713
ಸೋಮಶೇಖರ ನಾಯಕ— A.D. 1722

ಮೇಲ್ಕಂಡ ವರ್ಷಗಳಲ್ಲಿ ಆಯಾ ರಾಜರ ಜೀವಿತದ ಕಾಲವು ಯಾವಯಾವ ಕಾಲದಲ್ಲೆಂಬುದು ತಿಳಿದುಬರುತ್ತದೆ.

B ಪತ್ರದಲ್ಲಿ ಗುರ್ತಿಸಿರುವ ರುಧಿರೋದ್ಗಾರಿ ವರ್ಷವು A.D. 1683 ಶಾ. ಶ. ೧೬೦೭ ಆಗಿರಬೇಕು. ಏಕೆಂದರೆ A ಪತ್ರಕ್ಕೂ B ಪತ್ರಕ್ಕೂ ಮಧ್ಯೆ 27 ವರ್ಷ ಅಂತರವಿದೆ. ಇದಕ್ಕೆ ಮುಂಚಿನ ರುಧಿರೋದ್ಗಾರಿ ವರ್ಷವನ್ನು ತೆಗೆದುಕೊಂಡರೆ 87 ವರ್ಷಗಳು ಹಿಂದಕ್ಕೆ ಹೋಗುವುದು. ಅದು A.D. 1594 ಆಗುವುದು ಅಂದರೆ ಕೆಳದಿ ರಾಜರ ರಾಜ್ಯಸ್ಥಾಪನೆಯಾದ 36 ವರ್ಷಗಳಾಗುವುದು.

A ಮತ್ತು B ಪತ್ರಗಳಿಂದಲೂ ಶೃಂಗೇರಿ ಗುರು ವಂಶಾವಳಿಯಿಂದಲೂ ಈ ಕೆಳಗಿನ ವಿಷಯಗಳನ್ನು ಶೇಖರಿಸಬಹುದು:—

(1) ಶೃಂಗೇರಿ ಪೀಠದ ಸ್ವಾಮಿಗಳಾದ ಅಭಿನವ ನೃಸಿಂಹ ಭಾರತಿಯವರು (1599–1622) ಸಂಚಾರದ ನಂತರ ಹಿಂದಿರುಗಿದಾಗ ಶೃಂಗೇರಿಯಲ್ಲಿ ಮತ್ತೊಬ್ಬ ಸ್ವಾಮಿಗಳ ನಿಯಾಮಕವಾಗಿರುವುದನ್ನು ತಿಳಿದರು.

(2) ಆಗ ಚುನಾಯಿಸಲ್ಪಟ್ಟ ಸಚ್ಚಿದಾನಂದ ಭಾರತಿಗಳು (1622–1663 A.D.) ಶೃಂಗೇರಿಯಲ್ಲಿರುತ್ತಲೂ ಅಭಿನವ ನರಸಿಂಹಭಾರತಿಗಳು ಕೂಡಲಿಯಲ್ಲಿದ್ದು ಮಠಾಧಿಕಾರವನ್ನು ಚಲಾಯಿಸುತ್ತಲೂ ತಮ್ಮ ಜೀವನದ ಉಳಿದ ಭಾಗವನ್ನು ಕಳೆದರು.

(3) ಅಭಿನವ ನರಸಿಂಹಭಾರತಿಯವರ ಸ್ಥಾನಾಪನ್ನ ಶಿಷ್ಯರಾದ ಶಂಕರ ಭಾರತಿಗಳು ಕೂಡಲಿಯಲ್ಲಿದ್ದು (1656–57 A.D.) ಅವರ ಮಠಾಧಿಕಾರವನ್ನು ತಮ್ಮ ಐದು ಜನ ಶಿಷ್ಯರುಗಳಿಗೆ ವಿಭಾಗಿಸಿ ಕೊಟ್ಟರು.

(4) ಕೂಡಲೀ ಶ್ರೀ ಶಂಕರ ಭಾರತಿಗಳೂ, ಶೃಂಗೇರಿಯ ಸಚ್ಚಿದಾನಂದ ಭಾರತಿಗಳೂ ಇಬ್ಬರೂ ಕೂಡ ಅಭಿನವ ನರಸಿಂಹ ಭಾರತಿಗಳ ಶಿಷ್ಯರು.]

1748 ರಲ್ಲಿ ಸಬ್ನೀಸ್ ಕೃಷ್ಣಯ್ಯನು ಹೇಳಿಕೊಂಡಂತೆ ಕನಸಿನಕಟ್ಟೆಯಲ್ಲಿ ಚಂದ್ರಮೌಳೀಶ್ವರ ದೇವತಾ ವೆಚ್ಚಕ್ಕೆ ನಡೆಯುತ್ತಿದ್ದ 48 ವರಹದ ಭೂಮಿಯು ಹಿಂದಿನ ಕ್ರೋಧಿ ಸಂವತ್ಸರದಲ್ಲಿ ಅರಮನೆಗೆ ಸೇರಿದ್ದನ್ನು ಸಬ್ನೀಸ್ ಕೃಷ್ಣಯ್ಯನಿಂದ 300 ವರಹ ಕಾಣಿಕೆ ತೆಗೆದುಕೊಂಡು ಹಿಂದಕ್ಕೆ ಕೊಡಿಸುತ್ತಾರೆ.

## D. ಚಿತ್ರದುರ್ಗದ ಪಾಳೆಯಗಾರರು

ಚಿತ್ರದುರ್ಗವು ಈಗ ಮೈಸೂರು ದೇಶದ ಒಂದು ಜಿಲ್ಲಾ ಮುಖ್ಯಸ್ಥಳವಾಗಿದೆ. ಇದು ಅನಾದಿಕಾಲದಿಂದಲೂ ರಾಜಧಾನಿಯಾಗುತ್ತಲೇ ಬಂದಿದ್ದ ಪ್ರಸಿದ್ಧ ಸ್ಥಳ. A.D. 1567 ರಿಂದ 1778 ರ ವರೆಗೆ ಒಟ್ಟು ಎರಡುನೂರ ಹನ್ನೊಂದು ವರ್ಷಗಳ ಕಾಲ ಮತ್ತಿ ಮತ್ತು ಬಿಳಚೋಡು ಎಂಬ ಎರಡು ಸಂತತಿಯ ಹತ್ತು ಜನ ಪಾಳೆಯಗಾರರು ಇಲ್ಲಿ ಆಳುತ್ತಾರೆ. ಇವರು ಬೇಡರ (ವ್ಯಾಧ) ಜಾತಿಗೆ ಸೇರಿದವರು. ವಾಲ್ಮೀಕಿ ಗೋತ್ರದವರು. ಶ್ರೀಮನ್ಮಹಾನಾಯಕಾಚಾರ್ಯ ಎಂಬ ಬಿರುದನ್ನು ಧರಿಸಿದ್ದರು. ಇವರು ಕೂಡಲಿ ಶೃಂಗೇರಿ ಮಠದ ಗುರುಗಳಲ್ಲಿ ತುಂಬಾ ಭಕ್ತಿಯನ್ನಿಟ್ಟುಕೊಂಡು ಶಿಷ್ಯಭಾವದಿಂದ ನಡೆದುಕೊಳ್ಳುತ್ತಿದ್ದರು.

ಮತ್ತಿವಂಶದ ಐದನೆ ರಾಜನಾದ ಕಸ್ತೂರಿ ಚಿಕ್ಕಣ್ಣನಾಯಕನು ಶಾ. ಶ. 1597 ನೇ ರಾಕ್ಷಸ ಸಂವತ್ಸರದಿಂದ 1608 ನೇ ಅಕ್ಷಯ ಸಂವತ್ಸರದವರೆಗೆ ಆಳುತ್ತಾನೆ. ಇವನು ಸುಮಾರು ಶಾ. ಶ. 1600 ರಲ್ಲಿ ಶ್ರೀ ಶಂಕರ ಭಾರತಿ ಸ್ವಾಮಿಗಳವರಿಗೆ ಬಾಗೂರು ಸೀಮೆಯೊಳಗಿನ ಮಾರಬಗಟ್ಟೆ ಎಂಬ ಗ್ರಾಮವನ್ನು ದಾನಮಾಡುತ್ತಾನೆ.

ಎರಡನೆ ಬಿಳಚೋಡು ಸಂತತಿಯ ಮೊದಲನೇ ಅರಸನಾದ ಭರಮಪ್ಪನಾಯಕನು ಶಾ. ಶ. 1611ನೇ ಶುಕ್ಲ ಸಂವತ್ಸರದಿಂದ ಶ. 1642ನೇ ಪ್ಲವಂಗ ಸಂವತ್ಸರದವರೆಗೆ 32 ವರ್ಷಕಾಲ ರಾಜ್ಯ

ವಾಳುತ್ತಾನೆ. ಇವನು 1611ನೇ ಶುಕ್ಲಸಂವತ್ಸರದ ಮಾಘ ಶುದ್ಧ ಸಪ್ತಮಿಯಲ್ಲಿ ಭರಮಣ್ಣನಾಯಕನ ದುರ್ಗದ ಸೀಮೆ ಜಾಜೂರು ಹೋಬಳಿಯೊಳಗಿನ ಹನುಮನಹಳ್ಳಿ ಎಂಬ ಗ್ರಾಮವನ್ನು ದಾನಮಾಡುತ್ತಾನೆ. ಬಿಳಿಚೋಡು ಸಂತತಿ ಎರಡನೇ ಅರಸನಾದೆ ಹಿರಿ ಮದಕರಿನಾಯಕನು ಶ. 1642 ರಿಂದ 1670 ನೇ ವಿಭವ ಸಂವತ್ಸರದ ವರೆಗೆ 18 ವರ್ಷ ರಾಜ್ಯವಾಳುತ್ತಾನೆ. ಈ ಮದಕರಿನಾಯಕನು ಅಸಾಧಾರಣ ಪರಾಕ್ರಮಶಾಲಿಯೂ ದೈವಭಕ್ತನೂ ಆಗಿದ್ದನು. ಇವನು ಪ್ರತಿ ಸೋಮವಾರ ಹಗಲು ಉಪವಾಸ ಮಾಡಿ ಪ್ರದೋಷಕಾಲದಲ್ಲಿ ಚಂದ್ರಮೌಳೀಶ್ವರ ಪೂಜೆಯನ್ನು ಮಾಡುತ್ತಿದ್ದನು. ಇವನ ಪಟ್ಟಾಭಿಷೇಕಕ್ಕೆ ಇವನ ಸಮಾನ ಕಾಲೀನರಾದ ಮೈಸೂರಿನ ಮೊದಲನೆ ಕೃಷ್ಣರಾಜ ಒಡೆಯರು ಉಡುಗರೆಗಳನ್ನು ಕಳುಹಿಸಿ ಸನ್ಮಾನಿಸುತ್ತಾರೆ. ಇವನು ಶ್ರೀ ಶಂಕರಭಾರತೀಸ್ವಾಮಿಗಳವರಲ್ಲಿ ಬಹಳ ಭಕ್ತಿಯನ್ನಿಟ್ಟುಕೊಂಡು ಆರಾಧಿಸುತ್ತಿದ್ದನು. ಶ. 1651 ನೇ ಸೌಮ್ಯ ಸಂವತ್ಸರದಲ್ಲಿ ಅವರು ಚಿತ್ರದುರ್ಗಕ್ಕೆ ಬರುವುದಕ್ಕೆ ರಹದಾರಿ ಕಳುಹಿಸಿ ಬರಮಾಡಿಕೊಂಡು ಬಾಗೂರು ಸೀಮೆಯ ಮಾರಬಗಟ್ಟೆಗ್ರಾಮವನ್ನು ದಾನಮಾಡುತ್ತಾನೆ. ಈ ಗ್ರಾಮವು ಹಿಂದೆ ಇವರ ದೊಡ್ಡಪ್ಪ ಚಿಕ್ಕಣ್ಣನಾಯಕರ ವಿದ್ಯಮಾನದಲ್ಲಿ ಕೊಟ್ಟಿದ್ದು ಮಧ್ಯೆ ಅಭ್ಯಂತರವಾಗಿತ್ತು. ಇದನ್ನು ತನ್ನ ತಂದೆ ಪುಣ್ಯದಿವಸದಲ್ಲಿ ಕೊಡುತ್ತಾನೆ. ಮತ್ತು ಈ ಗ್ರಾಮದ ವಿಚಾರದಲ್ಲಿ ನಿರೂಪವನ್ನು ಕೊಡುತ್ತಾನೆ. ಶಾ. 1668 ರಲ್ಲಿ ಗಟಪರ್ತಿಯಲ್ಲಿ ಸುಂಕದ ರುಸುಮಿನಲ್ಲಿ ಹೇರು ಒಂದಕ್ಕೆ ವೀಸದ ಪ್ರಕಾರ ಶ್ರೀಮಠಕ್ಕೆ ಕೊಡುವಂತೆ ತಾಕೀತು ಮಾಡುತ್ತಾನೆ. ಇದರ ನಿರೂಪಗಳಿಗೆಲ್ಲಕ್ಕೂ ಮೇಲುಗಡೆಯಲ್ಲಿ 'ರಾ ಕರ್ತರೈಯ್ಯನವರು' ಎಂದು ಪಾಳೆಯಗಾರರನ್ನು ನಿರ್ದೇಶಿಸುತ್ತಾರೆ. ಶ. 1668 ರಲ್ಲಿ ಮಲೇಬೆನ್ನೂರು ಸೀಮೆ ಮೂಗನಗೊಂದಿ ಗ್ರಾಮದ ದೇಸಾಯಿಕೆ, ಸರದೇಸಾಯಿಕೆ, ನಾಡತಳವಾರಿಕೆ ಮುಂತಾದ ವರ್ತನೆ ಹೊಲಗಳನ್ನು ಮಠಕ್ಕೆ ನಡೆಯುವಂತೆ ಏರ್ಪಡಿಸುತ್ತಾನೆ.

ಕಡೇ ಮದಕರಿನಾಯಕನು ಶಾ. ಶ. 1676ನೇ ಭಾವಸಂವತ್ಸರದಿಂದ 1700 ವಿಳಂಬಿ ಸಂವತ್ಸರದವರೆಗೆ 24 ವರ್ಷ ರಾಜ್ಯಭಾರ ಮಾಡುತ್ತಾನೆ. ಶಾ. ಶ. 1676 ನೇ ಭಾವಸಂವತ್ಸರದ ಕಾರ್ತೀಕ ಬಹುಳ ದ್ವಿತೀಯ ಸ್ಥಿರವಾರ ಈ ಮದಕರಿನಾಯಕನ ವಿವಾಹ ಮಹೋತ್ಸವದ ಅತಿಶಯದಲ್ಲಿ ಗುಂಟನೂರು ಮಲ್ಲಪ್ಪನ ಭಾವಿ ತೋಟದ ಭೂಮಿಗಳನ್ನು ದಾನಮಾಡುತ್ತಾನೆ. ಈ ವಿವಾಹವು ತರೀಕೆರೆ ನಾಯಕರ ಮಗಳಾದ ಲಕ್ಕಾಂಬೆಗೂ ಮದಕರಿನಾಯಕರಿಗೂ ನಡೆದಂತೆ ತಿಳಿಯುತ್ತದೆ. ಈ ಉಭಯ ಮನೆತನಗಳು ಶ್ರೀಮಠಕ್ಕೆ ಅತ್ಯಂತ ಅಭಿಮಾನಾಸ್ಪದವಾಗಿದ್ದವು. ಆಮೇಲೆ ಈ ಮದಕರಿನಾಯಕನು ಕೆಲವು ವಿಜ್ಞಾಪನ ಪತ್ರಿಕೆಗಳಲ್ಲಿ ತನ್ನ ಭಕ್ತ್ಯತಿಶಯವನ್ನು ತೋರಿಸಿರುತ್ತಾನೆ. ತನ್ನ ತಮ್ಮ ಪರಶುರಾಮಪ್ಪನ ವಿವಾಹ ಪ್ರಯುಕ್ತ ಉಡುಗರೆ ಕಳುಹಿಸುತ್ತಾನೆ. ಈ ನಾಯಕನು ಹೊಳಲುಕೋಟೆಯನ್ನು ಸ್ವಾಧೀನಪಡಿಸಿಕೊಂಡ ಸಂದರ್ಭದಲ್ಲಿ ಶ್ರೀಗಳವರು ಅಭಿನಂದಿಸಿದ್ದಕ್ಕೆ ಏನೊಂದು ಆಗುವ ಶ್ರೇಯಸ್ಸು ತಮ್ಮ ಆಶೀರ್ವಾದಾನುಗ್ರಹದಿಂದಲ್ಲದೆ ಇತರವಲ್ಲ ಎಂದು ತಿಳಿಸುತ್ತಾನೆ. ಶ್ರೀಗಳವರು ಮೈಲಾರ ಗ್ರಾಮವನ್ನು ಹಿಂದಿನಂತೆ ಮಠಕ್ಕೆ ನಡೆಸಬೇಕೆಂದು ತಿಳಿಸಲು ಹೊಳಲು ಯಾರದು ಮೈಲಾರ ಯಾರದು ಸಕಲವೂ ತಮ್ಮದೇನೆ ಇದ್ದೀತು ಎಂದು ವಿಜ್ಞಾಪಿಸಿ ಮೈಲಾರಗ್ರಾಮಕ್ಕೆ ನಿರೂಪಕೊಡುತ್ತಾನೆ. ಶ್ರೀ ಶಂಕರಭಾರತೀಸ್ವಾಮಿಗಳವರು 1766 A.D. ಯಲ್ಲಿ ಚಿತ್ರದುರ್ಗ ಸ್ಥಳದಲ್ಲಿ ಬ್ರಹ್ಮೀಭೂತರಾಗಲು ಅವರ ಸಮಾಧಿಗೆ ಏರ್ಪಾಡುಮಾಡಿ ಅವರ ಶಿಷ್ಯರಾದ ನರಸಿಂಹಭಾರತೀಸ್ವಾಮಿಗಳು ಆರಾಧನೆ ತೀರಿಸಿಕ್ಕೊಂಡು ಸಂಚಾರ ಹೊರಡಲು ಯೋಗ್ಯ ವ್ಯವಸ್ಥೆ ಮಾಡುತ್ತಾನೆ. ಮುಂದಿನ ಶ್ರೀ ವೃದ್ಧ ಶಂಕರಭಾರತಿಸ್ವಾಮಿಗಳಲ್ಲಿ ಒಂದೇ ರೀತಿಯಾದ ಭಕ್ತಿಯಿಂದ ವರ್ತಿಸುತ್ತಾನೆ.

### E. ಹರಪನಹಳ್ಳಿ ಪಾಳೆಯಗಾರರು

ಹರಪನಹಳ್ಳಿಯು ಬಳ್ಳಾರಿ ಜಿಲ್ಲೆಯಲ್ಲಿ ತಾಲ್ಲೂಕು ಮುಖ್ಯಸ್ಥಳವಾಗಿದೆ. ಹರಪನಹಳ್ಳಿಗೆ ಉತ್ತರದಲ್ಲಿ ನಾಲ್ಕು ಮೈಲಿ ದೂರದಲ್ಲಿರುವ ಬಾಗುಲಿಯು ಹೊಯ್ಸಳರ ಇಮ್ಮಡಿ ವೀರಬಲ್ಲಾಳರಾಯನಿಗೆ ಉಪರಾಜಧಾನಿಯಾಗಿತ್ತು. ಹರಪನಹಳ್ಳಿಯ ಪಾಳೆಯಗಾರರು ತಮ್ಮನ್ನು ಬಾಗುಲಿಯವರೆಂದೇ ಕರೆದುಕೊಳ್ಳುತ್ತಾರೆ. ಇವರಿಗೆ ಒಟ್ಟು 460

ಹಳ್ಳಿಗಳು ಸೇರಿದ್ದು 8 ಲಕ್ಷ ರೂಪಾಯಿಗಳ ಆದಾಯವಿತ್ತು. ವಿಜಾಪುರದ ಬಾದಶಹರಿಗೆ ಅಧೀನರಾಗಿ ಕಪ್ಪ ಕೊಡುತ್ತಿದ್ದರು. ಹರಪನಹಳ್ಳಿಯ ಪಾಳೆಯಗಾರರ ಮೂಲಪುರುಷ ದಾದಯ್ಯನೆಂಬುವನು. ಇವರು ಪ್ರಾರಂಭದಲ್ಲಿ ಬೇಡಜಾತಿಯವರಾಗಿದ್ದು ಕೊನೆಗೆ ವೀರಶೈವ ಮತವನ್ನು ಸ್ವೀಕರಿಸುತ್ತಾರೆ. ಇವರಲ್ಲಿ 7 ನೇಯವನಾದ ಮುಮ್ಮಡಿ ಬಸವಪ್ಪನಾಯಕನು ತುಂಗಭದ್ರಾ ತೀರದ ಬಸವಾಪುರ ಗ್ರಾಮವನ್ನು **A.D.** 1701-1702ರಲ್ಲಿ ಬಾಗುಲಿ ಮತ್ತು ಕೆಸರಹಳ್ಳಿ ಗ್ರಾಮಗಳಲ್ಲಿ ಗದ್ದೆಗಳನ್ನು ಶ್ರೀ ನರಸಿಂಹಭಾರತೀಸ್ವಾಮಿಗಳವರಿಗೆ ದಾನಮಾಡುತ್ತಾನೆ. 1772ರಲ್ಲಿ ಸೋಮಶೇಖರ ನಾಯಕರ ಬಸವಪ್ಪನಾಯಕನು ನರಸಿಂಹಭಾರತೀ ಸ್ವಾಮಿಗಳಿಗೆ ಕುರುವತ್ತಿ ಸಮೀಪದ ಸೋಮಲಾಪುರ ಗ್ರಾಮವನ್ನು ದಾನಮಾಡುತ್ತಾನೆ. 1783ರಲ್ಲಿ ಸೋಮಶೇಖರ ನಾಯಕರ ಬಸವಪ್ಪ ನಾಯಕನು ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ಹೊಸೂರಿಂದ 100 (ನೂರು) ವರಹ ವರ್ಷಾಶನ ದಾನ ಕೊಡುತ್ತಾನೆ.

## F. ಕನಕಗಿರಿ ಪಾಳೆಯಗಾರರು

ಕನಕಗಿರಿಯ ಕನಕಪ್ಪ ಉಡಶಿ ನಾಯಕನು 1735ರಲ್ಲಿ ಶ್ರೀ ಶಂಕರಭಾರತೀಸ್ವಾಮಿಗಳವರಮಠದಧರ್ಮಕ್ಕೆ ಅವರ ಸೀಮೆ ಒಳಗಿನ ಅವರ ನಗರಕ್ಕೆ ಸಲ್ಲುವ ತೊಂಡೇಹಾಳು ಗ್ರಾಮವನ್ನು ದಾನಮಾಡುತ್ತಾನೆ.

ಮುಂದೆ 1769ರಲ್ಲಿ ಅವರ ಕುಮಾರ ರಂಗನಾಯಕನು ತಮ್ಮ ತಂದೆಯು ಕೊಟ್ಟ ತೊಂಡೇಹಾಳು ಗ್ರಾಮವು ಪರಾಧೀನವಾದುದನ್ನು ತಿಳಿದು ಅದರ ಬದಲಿಗೆ ತಲೆಕಾನುಹಾಳುಸಮ್ಮತು ಜೂಲುದೊಡ್ಡಿ ಗ್ರಾಮವನ್ನು ದಾನ ಮಾಡುತ್ತಾನೆ.

## G. ಬುಕ್ಕಾಪಟ್ಣದ ಪಾಳೆಯಗಾರರು

ಬುಕ್ಕಪಟ್ಟಣವು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿದೆ. ಇಲ್ಲಿಯ ಪಾಳೆಯಗಾರರಿಗೆ ಅನಂತಪುರ (ಹಂಡೇ), ಬುಕ್ಕರಾಯಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಸೀಮೆಯು ವಿಜಾಪುರದ ಬಾದಶಹರ ಪೆನುಗೊಂಡೆಯ ಪ್ರತಿನಿಧಿಯಿಂದ ವಜೀರಿಕೆಗೆ ಕೊಡಲ್ಪಟ್ಟಿತ್ತು. ಈ ಪಾಳೆಯಗಾರರು ಶ್ರೀಮನ್ ಮಹಾರಾಜಾಧಿರಾಜ, ಖಂಡೇಯಶವಂತ ಪರದಳ ವಿಭಾಡ, ಅರಿರಾಯಮಾನಮರ್ದನ ಎಂಬ ಬಿರುದುಗಳನ್ನು ಧರಿಸುತ್ತಿದ್ದರು.

ಇಲ್ಲಿಯ ಪಾಳೆಯಗಾರನಾದ ಹಂಡೇ ಪ್ರಸನ್ನಶಿದ್ದಪ್ಪನಾಯ್ಕರ ಪ್ರಪೌತ್ರನಾದ, ಪ್ರಸನ್ನಪ್ಪನಾಯ್ಕರ ಪೌತ್ರನಾದ ರಾಮಪ್ಪನಾಯ್ಕರ ಪುತ್ರನಾದ ರಾಜೇಶ್ರೀ ಹಂಡೇ ಪವಾಡಪ್ಪನಾಯ್ಕನು ಕ್ರಿ.ಶ. 1667, ಶಾ.ಶ. ೧೫೮೯ರಲ್ಲಿ ಅಲ್ಲಾಪುರವೆಂಬ ಗ್ರಾಮವನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ದಾನಮಾಡಿದ್ದನ್ನು ಮೊದಲನೆಯ ದಾನಶಾಸನ ಲೇಖನವು ತಿಳಿಸುತ್ತದೆ.

ಅನಂತರ ಎಂಭತ್ತು ವರ್ಷಗಳಮೇಲೆ ಆ ಪವಾಡಪ್ಪನಾಯ್ಕನ ಪ್ರಪೌತ್ರನಾದ, ಪ್ರಸನ್ನ ಸಿದ್ದಪ್ಪನಾಯ್ಕನ ಪೌತ್ರನಾದ, ಪ್ರಸನ್ನಪ್ಪನಾಯ್ಕನ ಪುತ್ರನಾದ ರಾಜಶ್ರೀ ಹಂಡೇ ರಾಮಪ್ಪನಾಯ್ಕನು ಕ್ರಿ.ಶ. 1746, ಶಾ.ಶ. ೧೬೬೮ ರಲ್ಲಿ ಗುಂಟಹಳ್ಳಿ ಎಂಬ ಗ್ರಾಮವನ್ನು ಮೇಲೆ ಬರೆದ ಶ್ರೀ ಶಂಕರಭಾರತಿಗಳವರ ಪ್ರಶಿಷ್ಯರಾದ ಶ್ರೀ ಶಂಕರಭಾರತಿಗಳಿಗೆ ದಾನಮಾಡಿದ್ದನ್ನು ಎರಡನೆಯ ದಾನಶಾಸನ ಲೇಖನವು ವಿವರಿಸುತ್ತದೆ.

ಇವರ ಮೂರನೆಯ ಪತ್ರವು ಮೇಲ್ಕಂಡ ಗುಂಟಹಳ್ಳಿಯ ದಾನದಬಗ್ಗೆ ಅಧಿಕಾರಿಗಳಿಗೆ ಕೊಟ್ಟ ನಿರೂಪವಾಗಿದೆ.

## H. ಸೋದೇ ಪಾಳೆಯಗಾರರು

ಸೋದೆಯು ಉತ್ತರ ಕನ್ನಡ ಡಿಸ್ಟ್ರಿಕ್ಟಿಗೆ ಸೇರಿ ತಾಲ್ಲೂಕು ಮುಖ್ಯಸ್ಥಳವಾದ ಶಿರಸಿಗೆ ಏಳು ಮೈಲಿಯಲ್ಲಿದೆ ಇಲ್ಲಿದ್ದ ಪಾಳೆಯಗಾರರು ಲಿಂಗಾಯಿತ ಮತಾನುಯಾಯಿಗಳು. 1668ನೇ ಕ್ರಿ.ಶ. ದಲ್ಲಿ ಸೋದೆ ರಾಮಚಂದ್ರ ನಾಯಕನು ಶ್ರೀ ನರಸಿಂಹಭಾರತೀಸ್ವಾಮಿಗಳಿಗೆ ಸುರಗಾರು ಎಂಬ ಗ್ರಾಮವನ್ನು ದಾನಮಾಡುತ್ತಾನೆ. ಕ್ರಿ.ಶ. 1781

ರಲ್ಲಿ ಸೋದೆ ಸಂಸ್ಥಾನದ ದಳವಾಯಿ ವೀರಭದ್ರಯ್ಯನು ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ಬನವಾಸಿ ಮಧುಕೇಶ್ವರ ದೇವಸ್ಥಾನದಿಂದ ಹದಿನೈದು ವರಹವನ್ನು ಬಕ್ಕಳ ದೇವಸ್ಥಾನದಿಂದ ಇಪ್ಪತ್ತೊಂದು ವರಹವನ್ನು ವರ್ಷಾಶನವಾಗಿ ಶ್ರೀಮಠಕ್ಕೆ ಕೊಡುವಂತೆ ಸನ್ನದು ಕೊಟ್ಟು ಆಯಾಯ ದೇವರುಗಳ ಅಭಯಹಸ್ತ ನಿರೂಪಗಳನ್ನು ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ಕೊಡಿಸುತ್ತಾನೆ. ಕ್ರಿ.ಶ. 1782ರಲ್ಲಿ ಸೋದೆ ಸಂಸ್ಥಾನದ ದಳವಾಯಿ ವೀರಭದ್ರಯ್ಯನು ಶ್ರೀಗಳವರಿಂದ ಆಶೀರ್ವದಿಸಿದ ಉಡುಗರೆಯನ್ನು ಸ್ವೀಕರಿಸಿ ಶುಭಪ್ರಸ್ತುತ ಸಂಬಂಧ ಶಾಲು, ಧೋತ್ರ ಮುಂತಾದ್ದು ಶ್ರೀಗಳವರಿಗೆ ಕೊಟ್ಟು ಕಳುಹಿಸುತ್ತಾನೆ.

## I. ಬಿಜ್ಜಾವರ ಪಾಳೆಯಗಾರರು

ತುಮಕೂರು ಡಿಸ್ಟ್ರಿಕ್ಟಿನಲ್ಲಿರುವ ಮಧುಗಿರಿ ಪಾಳೆಯಗಾರರಿಗೇನೆ ಬಿಜ್ಜಾವರದ ಪಾಳೆಯಗಾರರೆಂದು ಹೆಸರು. ಕ್ರಿ.ಶ. 1696ರಲ್ಲಿ ಬಿಜ್ಜಾವರದ ಪಾಳೆಯಗಾರರ ಚಿಕ್ಕಗೌಡನು ಮಿಡಗೇಶಿ ಸ್ಥಳಕ್ಕೆ ಸಲ್ಲುವ ಗುಂಡುಮಲೆ ಹೋಬಳಿಯೊಳಗಿನ ರಾಜಾಪುರ (ತಿರುಮಲ ದೇವರಹಳ್ಳಿ) ಎಂಬ ಗ್ರಾಮವನ್ನು ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ದಾನ ಮಾಡುತ್ತಾನೆ.

## J. ರಾಯದುರ್ಗ ಪಾಳೆಯಗಾರರು

ರಾಯದುರ್ಗದ ಪಾಳೆಯಗಾರನಾದ ಪೆದ್ದಕೋನೇಟಿ ನಾಯಕನು ವಿಜಯನಗರದ (ಚಂದ್ರಗಿರಿ) ರಾಜನ ಮಗಳನ್ನು ಮದುವೆಯಾಗಿದ್ದನು. ಇವನಿಗೆ ಚಂದ್ರಗಿರಿ ರಾಜನು ದಳವಾಯಿ ಎಂಬ ಬಿರುದನ್ನು ಕೊಟ್ಟು ಪೆನಗೊಂಡೆ ಪ್ರಾಂತದ ಅಧಿಕಾರಿಯಾಗಿ ನಿಯಮಿಸಿದನು. ವಿಜಾಪುರದ ರಾಜನು ಪೆನಗೊಂಡೆಯನ್ನು ಗೆದ್ದುಕೊಳ್ಳಲು ಕುಂದುರ್ಪಿ ದುರ್ಗದ ಯಜಮಾನಿಕೆಯು ಪೆದ್ದಕೋನೇಟಿ ನಾಯಕನಿಗೆ ವಹಿಸಲ್ಪಟ್ಟಿತು. ಪೆದ್ದಕೋನೇಟಿ ನಾಯಕನು ರಾಯದುರ್ಗವನ್ನು ಸ್ವಾಧೀನಮಾಡಿಕೊಂಡನು. ಪೆದ್ದಕೋನೇಟಿನಾಯಕನ ಮರಿಮಗನು ದಳವಾಯಿ ವೆಂಕಟಪತಿನಾಯಕನ ಪೌತ್ರ, ತಿಮ್ಮಪ್ಪನಾಯಕನ ಪುತ್ರ ವೆಂಕಟಪತಿನಾಯಕನು ಕ್ರಿ.ಶ. 1739ರಲ್ಲಿ ಶ್ರೀಶಂಕರಭಾರತೀಸ್ವಾಮಿಗಳವರಿಗೆ ರಾಯದುರ್ಗ ಸೀಮೆಗೆ ಸೇರಿದ ಕಡದರಕುಂಟೆ ಎಂಬ ಗ್ರಾಮವನ್ನು ದಾನ ಮಾಡುತ್ತಾನೆ.

## K. ಬಹರಿ ಪಾಳೆಯಗಾರರು

ಬಹಿರಿಯು ಆಂಧ್ರಪ್ರದೇಶದ ಗದ್ವಾಲಕ್ಕೆ ಸಮೀಪದಲ್ಲಿದೆ. ಅಲ್ಲಿಯ ಪಾಳೆಯಗಾರನಾದ ಸಿಡ್ನಾಯಕರ ಕುಮಾರ ಪಾಮನಾಯ್ಕನು ಶ್ರೀ ಶಂಕರಭಾರತೀ ಶ್ರೀಗಳಿಗೆ ಬಿನ್ನವತ್ತಳೆ ಬರೆದು ಅದರೊಂದಿಗೆ ಚಂದ್ರಮದೇವರಿಗೆ ತಂತುವ ಸಮರ್ಪಿಸುವ ರೀತಿಯಲ್ಲಿ ಹಚ್ಚಡವನ್ನು ಕಳುಹಿಸಿದ್ದೇನೆಂದು ವಿಜ್ಞಾಪಿಸುತ್ತಾನೆ.

ಶಂಭುವು ಬಿಳಿ ಎಕ್ಕೆ ಹೂವಿನಿಂದಲೂ, ಚಂದ್ರಮನು ನೂತನವಸ್ತ್ರದ ಎಳೆಯಿಂದಲೂ, ವಿಷ್ಣುವು ಸ್ಮರಣದಿಂದಲೂ, ಸಾಧುಸಜ್ಜನರು ಕೈಜೋಡಿಸುವುದರಿಂದಲೂ ಪ್ರಸನ್ನರಾಗುತ್ತಾರೆಂದು ತಿಳಿಸುವ "ಶಂಭುಃ ಶ್ವೇತಾರ್ಕ ಪುಷ್ಪೇಣ ಚಂದ್ರಮಾ ವಸ್ತ್ರತಂತುನಾ। ಅಚ್ಯುತಃ ಸ್ಮೃತಿಮಾತ್ರೇಣ ಸಾಧವಃ ಕರಸಂಪುಟೈಃ॥ ಎಂಬ ಶ್ಲೋಕವು ನಾಯಕನ ಬರವಣಿಗೆಗೆ ಆಧಾರವಾಗಿದೆ.

ಅದೇ ಬಹಿರೀ ಸಂಸ್ಥಾನಕ್ಕೆ ಸಂಬಂಧಪಟ್ಟ ವೆಂಕಪ್ಪಾ ಫರ್ಜದ ರಾಜೇ ಪಡಿನಾಯಕನು ಚೌಡೇಶ್ವರೀಹಾಳ ಗ್ರಾಮದಲ್ಲಿರುವ ಸರನಾಡಗೌಡಿಕೆಯ ಜಮೀನನ್ನು ದಾನಕೊಟ್ಟ ವಿಷಯವು ಎರಡನೆಯ ಪತ್ರದಿಂದ ತಿಳಿಯುತ್ತದೆ.

ಮೂರನೆಯ ಪತ್ರವು ಮೇಲ್ಕಂಡ ದಾನದ ವಿಚಾರಕ್ಕೆ ಅಧಿಕಾರಿಗಳಿಗೆ ಕೊಟ್ಟ ನಿರೂಪವಾಗಿದೆ.

ನಾಲ್ಕನೆಯ ಪತ್ರವು ಈಶ್ವರಮ್ಮ ಬಹಿರೀ ಇವರು ಶ್ರೀ ಮಠಕ್ಕೆ ವರ್ಷಾಶನವಾಗಿ ಒಂದು ನೂರು ರೂಪಾಯಿಗಳನ್ನು ಕೊಟ್ಟಿರುವುದನ್ನು ತಿಳಿಸುತ್ತದೆ.

## L. ಆನೇಗೊಂದಿ ಪಾಳೆಯಗಾರರು

ವಿಜಯನಗರ ಸಾಮ್ರಾಜ್ಯದ ಪತನಾನಂತರ ಹಾಳು ಹಂಪೆಯ ಹತ್ತಿರವೇ ಇರುವ ಆನೆಗೊಂದಿಯಲ್ಲಿ ನೆಲೆಸಿದ ಆ ರಾಜಮನೆತನಕ್ಕೆ ಸೇರಿದವರಾದ ಶ್ರೀ ವೀರ ವೆಂಕಟಪತಿರಾಯ ದೇವ ಮಹಾರಾಯರು ಕ್ರಿ.ಶ. 1757 ರಲ್ಲಿ ಕಾಮಲಾಪುರದ ಮಜರೆ "ಸಣ್ಣಕ್ಕಿ ಓಬಳಾಪುರ" ಗ್ರಾಮವನ್ನು ಶ್ರೀ ಶಂಕರಭಾರತೀ ಶ್ರೀಗಳಿಗೆ ದಾನ ಮಾಡುತ್ತಾರೆ.

ನಂತರದ ಅರವತ್ತು ವರ್ಷಗಳಮೇಲೆ ಶ್ರೀ ವೀರ ವೆಂಕಟತಿರುಮಲರಾಯ ದೇವ ಮಹಾರಾಯರು ಶ್ರೀ ನರಸಿಂಹಭಾರತೀ ಸ್ವಾಮಿಗಳನ್ನಾಹ್ವಾನಿಸುತ್ತಾರೆ.

## M. ಗುಡೇಕೋಟೆ (ಉಜ್ಜನೀ) ಪಾಳೆಯಗಾರರು

ಗುಡೇಕೋಟೆ (ಉಜ್ಜನೀ) ಪಾಳೆಯಗಾರರು ಹರಪನಹಳ್ಳಿ ತಾಲ್ಲೂಕಿನಲ್ಲಿರುವ ಗುಡೇಕೋಟೆಯನ್ನು ತಮ್ಮ ಮುಖ್ಯ ಸ್ಥಳವಾಗಿ ಮಾಡಿಕೊಂಡು ಇದ್ದರು. ಶ್ರೀಮನ್ಮಹಾನಾಯಕಾಚಾರ್ಯ ಇಮ್ಮಡಿ ಗಡಿಯಂಕಭೀಮ ಎಂಬ ಬಿರುದನ್ನು ಧರಿಸಿದ್ದರು. ಅವರ ವಂಶಜನಾದ ಯಿಮ್ಮಡಿ ನಾಯಕರ ಪೌತ್ರ ಯಿಮ್ಮಡಿ ಬೊಮ್ಮಣ್ಣ ನಾಯಕರ ಪುತ್ರ ಮುಮ್ಮಡಿ ಬೊಮ್ಮಣ್ಣನಾಯಕನು, ಅವರ ಪಟ್ಟದ ಗ್ರಾಮ ಹುರಳೀಹಾಳ ಕಸಬೆ ಒಳಗಣ ಕೊಂಬೇಹಳ್ಳಿ ಗ್ರಾಮವನ್ನು ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ಕ್ರಿ. ಶ. 1750, ಶಾ. ಶ. ೧೬೭೨ ರಲ್ಲಿ ದಾನ ಮಾಡಿರುತ್ತಾರೆ.

## N. ಗುಮ್ಮನಾಯಕನ ಪಾಳೆಯಗಾರರು.

ಆಂಧ್ರ ಪ್ರದೇಶದ ಅನಂತಪುರಜಿಲ್ಲೆಯಲ್ಲಿದ್ದ ಈ ಪಾಳೆಯಗಾರರ ಮನೆತನದ ಮಂಗಿನಾಯಿನಿ ಕದಿರಪ್ಪನಾಯಿನಿ ನಾರಸುಂಹಪ್ಪನಾಯಿನಿವಾರು ವಿಜಾಪುರದ ಬಾದಶಹರು ಶ್ರೀ ಮಠಕ್ಕೆ ಕೊಟ್ಟಿದ್ದ ಊತಕೂರು ಸಮ್ಮತಿನ ಜೂಲುಕುಂಟೆ ಗ್ರಾಮದೊಳಗೆ ಈ ಪಾಳೆಯಗಾರರಿಗೆ ಸೇರಿದ ಜಮೀನನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಕ್ರಿ. ಶ. 1756, ಶಾ. ಶ. ೧೬೭೮ ರಲ್ಲಿ ದಾನ ಕೊಟ್ಟಿರುತ್ತಾರೆ.

ಅದೇ ಪಾಳೆಯಗಾರರ ಮನೆತನದ ಪೆದ್ದಪಾಳ್ಯಂ ರಂಗಪ್ಪನಾಯಿನಿಕುಮಾರ ಕದುರಪ್ಪನಾಯನಿವಾರು, ಅವರ ನಾಯಕತ್ವಕ್ಕೆ ಸೇರಿದ ಕತ್ತಲಾಪುರದ ಸ್ಥಳದ ಜಮೀನನ್ನು ಶ್ರೀ ಶಂಕರಭಾರತೀಸ್ವಾಮಿಗಳಿಗೆ ಕ್ರಿ. ಶ. 1806, ಶಾ. ಶ. ೧೭೨೮ ರಲ್ಲಿ ದಾನ ಮಾಡಿರುತ್ತಾರೆ.

## O. ಬೆಳಗಾವತಿ ಪಾಳೆಯಗಾರರು

ಬೆಳಗಾವತಿಯು (ಬೆಳಗುತ್ತಿ) ಶಿವಮೊಗ್ಗ ಜಿಲ್ಲೆಯಲ್ಲಿದೆ. ಇಲ್ಲಿಯ ಪಾಳೆಯಗಾರರು ಶ್ರೀಮದ್ರಾಜಾಧಿರಾಜ, ರಾಜಪರಮೇಶ್ವರ, ವೀರಪ್ರತಾಪ ಮುಂತಾದ ಬಿರುದುಗಳನ್ನು ಧರಿಸುತ್ತಿದ್ದರು.

ಅವರಲ್ಲಿ ಭೋಳೀಅಚ್ಯುತರಾಜರ ಪೌತ್ರ, ವೆಂಕಟರಾಜರಪುತ್ರ ತಿಮ್ಮರಾಜ ಬೆಳಗಾವತಿಯವರು ಅವರ ರಾಜ್ಯದೊಳಗೆ ಕೆಳಗುತ್ತಿ ಹೋಬಳಿಗೆ ವಳಿತವಾದ ತೀರ್ಥರಾಮಪುರದ ಗ್ರಾಮದಲ್ಲಿ ಜಮೀನನ್ನು ಶ್ರೀ ನರಸಿಂಹಭಾರತೀ ಸ್ವಾಮಿಗಳವರಿಗೆ ಕ್ರಿ. ಶ. 1758, ಶಾ. ಶ. ೧೬೮೦ ರಲ್ಲಿ ದಾನ ಮಾಡುತ್ತಾರೆ.

## P. ಹಾಲೇರಿ ಪಾಳೆಯಗಾರರು

ಕೊಡಗಿಗೆ ಸೇರಿದ ಹಾಲೇರಿಯಲ್ಲಿದ್ದ (ಪಾಳೆಯಗಾರರಾದ) ಶ್ರೀ ಲಿಂಗರಾಜ ಮಹಾರಾಜರು ಶ್ರೀ ನರಸಿಂಹ ಭಾರತೀಸ್ವಾಮಿಗಳವರಿಗೆ ದೇವತಾ ಸೇವೆಗೆ ಶೋಭಿತವಾದ ಒಂದು ಆನೆಯನ್ನು ದಾನಮಾಡಿರುವುದು ಇವರ ಲೇಖನದಿಂದ ತಿಳಿಯುತ್ತದೆ.

## 'Q' ಇತರೆ

ಬೆಂಣೆಗೆರೆ ಯಜಮಾನ ಜನಾರ್ದನಭಟ್ಟರ ನಾರಾಯಣಭಟ್ಟರು ರಾಯಗಾಲಿವೆ ಕೆಳಗೆ ಕರಕರೆ ಒಳಗೆ ಗದ್ದೆಯನ್ನು ಶ್ರೀ ವಿದ್ಯಾರಣ್ಯಭಾರತೀಸ್ವಾಮಿಗಳವರಿಗೆ ಕ್ರಿ. ಶ. 1666, ಶಾ. ಶ. ೧೫೮೭ ರಲ್ಲಿ ದಾನಮಾಡಿರುತ್ತಾರೆ.

ಕೆಳದಿ ಚನ್ನಮ್ಮಾಜಿಯವರು ಕೂಡ್ಲಿಯಲ್ಲಿ ಹೊಸದಾಗಿ ದೇವಾಸ್ಥಾನ ಕಟ್ಟಿಸಿ ಪ್ರತಿಷ್ಠೆಮಾಡಿದ ಚಂದ್ರಮೌಳೀಶ್ವರ ದೇವರ ದೇವತಾವ್ಯಚ್ಚಕ್ಕೆ ಚಿಕ್ಕಕೂಡ್ಲಿ ಗ್ರಾಮದಿಂದ ಹನ್ನೆರಡು ವರಹ ಹಣವಡ್ಡು ಬೇಳೆಯ ಗ್ರಾಮವನ್ನು ದಾನಮಾಡಿರುತ್ತಾರೆ.

ಮಲ್ಲೂರು ಸೀಮೆಯ ನಾಡಿಗ ಮುಂತಾದವರು ಮಲ್ಲೂರು ಸೀಮೆಯನ್ನು ಕೆಳದಿ ಚನ್ನಮ್ಮಾಜಿಯವರು ದಾನ ಕೊಟ್ಟಿರುವುದನ್ನು ಸಾಗುಮಾಡಿಸುವ ವಿಚಾರ ಕುರಿತು ಮುಂದಿನ ವ್ಯವಸ್ಥೆ ಬಗ್ಗೆ ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ಪತ್ರ ಬರೆದಿರುತ್ತಾರೆ.

ಕೂಡ್ಲಿಯಲ್ಲಿ ಮಠದ ಆವರಣದೊಳಗೆ ಚಂದ್ರಮೌಳೀಶ್ವರ ದೇವಸ್ಥಾನ ಕಟ್ಟಿಸಿದ ಸಬ್ನೀಸ ಕೃಷ್ಣಯ್ಯನ ಮೊಮ್ಮಗ ಕೃಷ್ಣಯ್ಯನು ದೇವತಾಸನ್ನಿಧಿಯಲ್ಲಿ ರುದ್ರಾಭಿಷೇಕ ಉಪಾಧಿಯ ಬಗ್ಗೆ ಚಿಕ್ಕಕೂಡ್ಲಿಗ್ರಾಮ ಮತ್ತು ಕನಸಿನಕಟ್ಟೆ ಗ್ರಾಮದಲ್ಲ ಶ್ರೀ ತಿಮ್ಮಶಾಸ್ತ್ರಿಗಳ ಮಗ ಶಾಮಭಟ್ಟರಿಗೆ ಜಮೀನು ದಾನ ಕೊಟ್ಟಿದ್ದರ ವಿವರ ಇದರಿಂದ ತಿಳಿಯಬರುತ್ತದೆ.

---

# ನಾಲ್ಕನೆಯ ಭಾಗ

## ಮಹಮ್ಮದೀಯ ಚಕ್ರಾಧಿಪತ್ಯಗಳು ಮತ್ತು ಸಂಸ್ಥಾನಗಳು

### A ವಿಜಾಪುರದ ಬಾದಶಹರು

ವಿಜಯನಗರ ರಾಜ್ಯಸ್ಥಾಪನೆಯಾದ ಹತ್ತಾರು ವರ್ಷಗಳ ಅಂತರದಲ್ಲಿಯೇ ಕಲಬರ್ಗಿ (ಗುಲಬುರ್ಗೆ) ಯಲ್ಲಿ ಗಂಗೂ ಎಂಬ ಬ್ರಾಹ್ಮಣನ ಆಶ್ರಯದಲ್ಲಿದ್ದ ಹಸನ್ ಎಂಬುವನು ಒಂದು ರಾಜ್ಯಸ್ಥಾಪನೆಮಾಡಿ ಅಲ್ಲಾವುದ್ದೀನ್ ಹಸ್ಸನ್ ಎಂಬ ಹೆಸರಿನಿಂದ ರಾಜ್ಯಭಾರ ನಡೆಸಿದನು. ಗಂಗೂ ಬ್ರಾಹ್ಮಣನು ಹಸನನಿಗೆ ರಾಜನಾಗುವ ಅದೃಷ್ಟವಿದೆಯೆಂದು ಹೇಳಿದ ಭವಿಷ್ಯವು ಸತ್ಯವಾದುದರಿಂದ ಆ ಕೃತಜ್ಞತೆಗಾಗಿ ರಾಜ್ಯಕ್ಕೆ "ಬಹಮನೀ" (ಬ್ರಾಹ್ಮಣ ಸಂಬಂಧಿ) ರಾಜ್ಯವೆಂದು ಹೆಸರು ಕೊಡಲ್ಪಟ್ಟಿತು.

ಅನಂತರ ಕೆಲವು ಕಾಲದಮೇಲೆ ಬಹಮನೀರಾಜ್ಯದ ಶ್ರೇಷ್ಠಮಂತ್ರಿಯಾದ ಮಹಮ್ಮದ್ ಗವಾನನನು ಕಲಬುರ್ಗಿಯ ಸುಲ್ತಾನರಲ್ಲಿ ಹದಿನಾಲ್ಕನೆಯವನಾದ ಮಹಮೂದಶಹನು ವಿಶ್ವಾಸಘಾತಕತನದಿಂದ ಕೊಲ್ಲಿಸಿದನು ಆ ಮಂತ್ರಿಯು ಸಾಯುವಾಗ ರಾಜನಿಗೆ "ನೀನು ನನ್ನನ್ನೇನೋ ಕೊಲ್ಲಿಸಿದೆ. ಆದರೆ ನನ್ನೊಡನೆಯೇ ಈ ರಾಜ್ಯದ ಅಂತ್ಯ" ಎಂದು ಭವಿಷ್ಯನುಡಿದನು. ಮಂತ್ರಿಯ ವಾಣಿಯು ಸತ್ಯವಾಯಿತು. ಅದರಂತೆ ಬಹಮನೀ ರಾಜ್ಯದ ಐದುಜನ ಶುಭೇದಾರರು ಸ್ವತಂತ್ರರಾದರು. ಅದರ ಫಲವಾಗಿ ಐದು ಮಹಮ್ಮದೀಯ ಚಕ್ರಾಧಿಪತ್ಯಗಳು ಅಸ್ತಿತ್ವಕ್ಕೆ ಬಂದವು. (೧) ವಿಜಾಪುರದ ಆದಿಲ್‌ಶಾಹಿ (೧೪೮೯–೧೬೮೯). (೨) ಅಹಮ್ಮದನಗರದ ನಿಜಾಂಶಾಹಿ (೧೪೯೬–೧೬೩೭) (೩) ಗೋವಳಕೊಂಡದ ಕುತುಬ್‌ಶಾಹಿ (೧೫೧೨–೧೬೮೭). (೪) ಬೀರಾರ (ವರ್ಹಾಡ) ದ ಉಮದ್‌ಶಾಹಿ (೧೪೮೪–೧೫೭೪) (೫) ಬೀದರಿನ ಫರೀದಶಾಹಿ (೧೪೯೨–೧೬೧೯).

ವಿಜಾಪುರ ಚಕ್ರಾಧಿಪತ್ಯದ ಮೂಲಪುರುಷನ ಹೆಸರು ಯೂಸಫ್‌ಶಹ. ಇವನು ಯೂರೋಪ್ ಖಂಡದ ಕಾನ್‌ಸ್ಟಾಂಟಿನೋಪಲಿನ ಸುಲ್ತಾನ ಮಹಮ್ಮದಶಹನ ತಮ್ಮನು. ಅಣ್ಣನೊಂದಿಗೆ ವೈಮನಸ್ಯವುಂಟಾಗಿ ಇವನು ಹಿಂದೂಸ್ಥಾನಕ್ಕೆ ಬಂದು ಬಹಮನೀ ವಂಶದ ಹದಿಮೂರನೆಯ ರಾಜನಾದ ಎರಡನೆಯ ಮುಹಮ್ಮದಶಹನ ಹತ್ತಿರ ಸೇರಿಕೊಂಡನು. ಅವನ ಪರವಾಗಿ ವಿಜಾಪುರದ ಶುಭೇದಾರನಾಗಿದ್ದು ಆ ರಾಜ್ಯದ ಪತನಾನಂತರ ಸ್ವತಂತ್ರನಾದನು. ವಿಜಾಪುರದಲ್ಲಿ ಬಾದಶಹರ ಆಡಳಿತ ನಡೆಯುತ್ತಿದ್ದ ಕಾಲದಲ್ಲಿ ಜನಸಂಖ್ಯೆ ಹದಿನೆಂಟುಲಕ್ಷವಿತ್ತೆಂದು ಚರಿತ್ರೆ ತಿಳಿಸುತ್ತದೆ.

ಈ ವಿಭಾಗದ ಮೊದಲನೆಯ ಪತ್ರ (ಅನುಕ್ರಮಾಂಕ ೧೬೦)–ಫರ್ಮಾನ್‌ದಿಂದ ವಿಜಾಪುರದ ಬಾದಶಹರಲ್ಲಿ ಆರನೆಯವನಾದ ಎರಡನೇ ಇಬ್ರಾಹಿಂ ಶಹನ ಪರವಾಗಿ ಈಗಿನ ಧಾರವಾಡ ಜಿಲ್ಲಾ ಹಾನಗಲ್ಲ ತಾಲ್ಲೂಕಿನಲ್ಲಿರುವ ಹೊನ್ನಾವರಕೊಪ್ಪ ಎಂಬ ಗ್ರಾಮವನ್ನು ಶ್ರೀನರಸಿಂಹಭಾರತೀ ಸ್ವಾಮಿಗಳವರಿಗೆ ದಾನಮಾಡಿರುವುದು ವ್ಯಕ್ತವಾಗುತ್ತದೆ. ಈ ಫರ್ಮಾನಿನಲ್ಲಿ ಕಾಲನಿರ್ದೇಶಿಸಲು **ಸಲ್ಲಸ ಅಶರೀನ ಅಲಫ** ಎಂದು ಸೂರಸನ್ನ (ಅರಬ್ಬೀ ಶಕ ವ)ನ್ನುಲ್ಲೇಖಿಸಿದ್ದಾರೆ. ಅದು ಕ್ರಿ. ಶ 1622 ಆಗುವುದು. ಈಗ ಈ ಹೊನ್ನಾವರ ಕೊಪ್ಪಕ್ಕೆ 'ಶ್ರಿಂಗೇರಿ' ಎಂದು ಸರಕಾರಿ ದಾಖಲೆಗಳಲ್ಲುಲ್ಲೇಖವಿದ್ದು ಎಲ್ಲರೂ ಅದರಂತೆ ವ್ಯವಹರಿಸುವರು.

ಸಂಖ್ಯೆ ೧೬೧ ನೆಯ ಫರ್ಮಾನು ವಿಜಾಪುರದ ಬಾದಶಹರು ತಲವಾಯಿ ಮತ್ತು ಮಾರಡಗಿಯಲ್ಲಿ ಜಮೀನು ದಾನಕೊಟ್ಟಿರುವುದನ್ನು ತಿಳಿಸುತ್ತದೆ. ಇದು ತೋರಗಲ್ ಹವಾಲ್‌ದಾರ ವಗೈರೆಯವರಿಗೆ ಕೊಟ್ಟ ನಿರೂಪವಾಗಿದೆ.

ಸಿಯಾ, ಸುನ್ನಿ ಎಂಬ ಮುಸಲ್ಮಾನರ ಎರಡು ಪಂಗಡಗಳಲ್ಲಿ ಇವರು ಸಿಯಾ ಪಂಗಡಕ್ಕೆ ಸೇರಿದುದರಿಂದ ಫರ್ಮಾನಿನ ಮೇಲಿರುವ ಮುದ್ರೆಯಲ್ಲಿ ಕೊನೆಯ ಖಲೀಫನಾದ ಅಲಿಯ ಪ್ರಾರ್ಥನೆಯಿದೆ. ಕಾಲನಿರ್ದೇಶಕ್ಕೆ ಸಬಾ ಅಶರೀನ ವ ಅಲಫ ಎಂದು ಬರೆದಿದ್ದು ಅದು ಕ್ರಿ. ಶ. 1626 ಆಗುವುದು.

೧೬೨ ನೆಯ ಫರ್ಮಾನು ವಿಜಾಪುರದ ಏಳನೆಯ ಬಾದಶಹನಾದ ಮಹಮ್ಮದ್ ಇಬ್ರಾಹಿಂ ಶಹನು ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ವಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕು (ತೊರೆ) ಹಡಗಲಿ ಎಂಬ ಗ್ರಾಮವನ್ನು ದಾನಮಾಡಿರುವ ವಿಚಾರವಾಗಿ ಸಿಕಂದರಗಡ ಉರುಫ್ ಬಾದಾಮಿ ತಾಲ್ಲೂಕ ಹವಾಲ್ದಾರರಿಗೆ ಕೊಟ್ಟ ನಿರೂಪವಾಗಿದೆ.

೧೬೩ ನೆಯ ಫರ್ಮಾನು ವಿಜಾಪುರದ ಸೇನಾಧಿಪತಿ ರಣದುಲ್ಲಾಖಾನನು ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ನಿರೂಪದಂತೆ ಶ್ರೀ ಮಠಕ್ಕೆ ಸಂತೇಬೆನ್ನೂರು ಕೆಂಗನಾಯಕರು ದಾನಮಾಡಿ ನಡೆಯುತ್ತಿದ್ದ ಲಿಂಗಲಾಪುರ ಗ್ರಾಮವನ್ನು ಪೂರ್ವದಂತೆ ಮುಂದುವರೆಸಬೇಕೆಂದು ಕಡೂರು ಪರಗಣೆಯ ಕಾರಕೂನ ಮತ್ತು ದೇಶಮುಖರಿಗೆ ಅಪ್ಪಣೆಕೊಟ್ಟದ್ದನ್ನು ತಿಳಿಸುತ್ತದೆ. ಇದರಲ್ಲಿ ಕಾಲನಿರ್ದೇಶಕ್ಕೆ ಅರ್ಬೈನ ಅಲಫ ಎಂದು ಬರೆದಿದೆ.

ಸಂಖ್ಯೆ ೧೬೪ ನೆಯ ಫರ್ಮಾನು ಅದೇ ರಣದುಲ್ಲಾಖಾನರು, ಸಂತೇಬೆನ್ನೂರು ಕೆಂಗನಾಯಕರು ಶ್ರೀ ಮಠಕ್ಕೆ ದಾನಕೊಟ್ಟಿದ್ದು ನಡೆಯುತ್ತಲಿದ್ದ ದೇವುಲಾಪುರ ಗ್ರಾಮವನ್ನು ಹಿಂದಿನಂತೆ ನಡೆಸುತ್ತ ಬರಬೇಕೆಂದು ಪತ್ತೇನಗರ ಮಾವಲೆಯ ಕಾರಕೂನ ಮತ್ತು ದೇಶಮುಖರಿಗೆ ನಿರೂಪ ಕೊಟ್ಟದ್ದನ್ನು ವಿವರಿಸುತ್ತದೆ.

ಮಹಮ್ಮದ ಇಬ್ರಾಹಿಂಶಹರು ಮಿಶ್ರೀಕೋಟೆ ಸಮ್ಮತ್ತಿಗೆ ಸೇರಿದ ಸಂತೇಹೊನ್ನಾಳಿ ಮತ್ತು ಹಿಂಡಸಗೇರಿ ಗ್ರಾಮಗಳನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ದಾನಮಾಡಿ ಆ ಸಂಬಂಧದಲ್ಲಿ ಮಿಶ್ರೀಕೋಟೆ ಸಮ್ಮತ್ತಿನ ಅಧಿಕಾರಿಗಳಿಗೆ ನಿರೂಪ ಕೊಟ್ಟಿರುವುದು ೧೬೫ ನೆಯ ಫರ್ಮಾನಿನಿಂದ ತಿಳಿಯುತ್ತದೆ. ೧೬೬ ನೆಯ ಫರ್ಮಾನು ಈ ಮಹಮ್ಮದ ಇಬ್ರಾಹಿಂ ಶಹರು ಇದೇ ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ಬಸವಾಪಟ್ಟಣದ ಸಮ್ಮತ್ತಿನ ಸೋಮನಹಳ್ಳಿ ಗ್ರಾಮವನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ.

ವಿಜಾಪುರದ ಬಾದಶಹರ ಪ್ರತಿನಿಧಿಗಳಾಗಿ ಪೆನಗೊಂಡೆಯಲ್ಲಿ ಅಧಿಕಾರ ನಡೆಸುತ್ತಿದ್ದ ಅವರ ಕುಮಾರರು ಅಬ್ದುಲ್ ಹುಸೇನ ಸಾಹೇಬ ನಯಾನರವರು ಪೆನಗೊಂಡೆ ತಾಲ್ಲೂಕು ಕಾರಕೂನರೆಡ್ಡಿ ಕುಲಕರ್ಣಿಯವರಿಗೆ ಶ್ರೀ ಮಠಕ್ಕೆ ಸರ್ವಮಾನ್ಯ ನಡೆಯುತ್ತಿದ್ದ ಉಟಕೂರು ಸಮ್ಮತ್ತಿನ ಜೂಲುಕುಂಟೆ ಗ್ರಾಮವನ್ನು ಪೂರ್ವಪ್ರಕಾರ ನಡೆಸಲು ತಿಳಿಸಿದ್ದನ್ನು ೧೬೭ ನೆಯ ಫರ್ಮಾನು ತಿಳಿಸುತ್ತದೆ. ಇದರಲ್ಲಿ ಖಮಸ ಖಮಸ್ಸೈನ ಅಲಫ ಎಂದು ಕಾಲ ನಿರ್ದೇಶ ಮಾಡಿದೆ.

ಮಹಮ್ಮದ ಇಬ್ರಾಹಿಂ ಶಹರ ಮಗನಾದ ಹೈದರಾಲಿಯು ಬನವಾಪಟ್ಟಣದ ಸೀಮೆ ಸೂಳೆಕೆರೆ ಸಮ್ಮತ್ ಕಬ್ಬಳ ಗ್ರಾಮವನ್ನು ಮತ್ತು ಮಹಮ್ಮದ ಪುರ ಸಮ್ಮತ್ ಯಂಭತ್ತನಾಳ ಗ್ರಾಮವನ್ನೂ ಶ್ರೀ ಮಠಕ್ಕೆ ದಾನ ಕೊಟ್ಟಿರುವ ವಿಚಾರವು ೧೬೮ ಮತ್ತು ೧೬೯ ನೆಯ ಫರ್ಮಾನುಗಳಿಂದ ತಿಳಿಯುವುದು. ಈ ಎರಡು ಫರ್ಮಾನುಗಳಲ್ಲಿಯೂ ಕಾಲನಿರ್ದೇಶಕ್ಕೆ ಇಹಿದೇ ಸಿತ್ತೈನ ಅಲಫ ಎಂದು ಬರೆಯಲಾಗಿದೆ.

ರಾಣೇಬೆನ್ನೂರು ತಾಲ್ಲೂಕಿನ ರಾವುತನಕಟ್ಟೆ ಗ್ರಾಮವನ್ನು ಶ್ರೀ ವಿದ್ಯಾರಣ್ಯಸ್ವಾಮಿಗಳಿಗೆ ಇನಾಮಾಗಿ ಮುಂದುವರೆಸಿರುವ ವಿಚಾರವು ೧೭೦ ನೆಯ ಫರ್ಮಾನಿನಿಂದ ತಿಳಿಯುತ್ತದೆ. ಮೇಲ್ಕಂಡ ಹೈದರಾಲಿಯು ಮಹಮ್ಮದಪುರ ಸಮ್ಮತ್ತಿನ ಎಡರಾಮಪುರದ ಜಮೀನು, ವೆತಾಜೆ ಕೈನಾರ್ ಮತ್ತು ಒಂದು ಬಾವಿಯನ್ನು ಸಹ ದಾನ ಮಾಡಿದ್ದನ್ನು ೧೭೧ ನೆಯ ಫರ್ಮಾನು ತಿಳಿಸುತ್ತದೆ.

ತರೀಕೆರೆ ಕೆಂಗನಾಯಿಕರು ಶ್ರೀ ಮಠಕ್ಕೆ ದಾನವಾಗಿತ್ತು, ವಿಜಾಪುರದ ರಣದುಲ್ಲಾಖಾನರು ಮುಂದುವರೆಸಿದ ದೇವಲಾಪುರ ಮತ್ತು ಲಿಂಗಲಾಪುರ ಗ್ರಾಮಗಳನ್ನು ನಿರಾತಂಕವಾಗಿ ನಡೆಸಲು ವಿಜಾಪುರದ ಬಾದಶಹರ ಪರವಾಗಿ ಕೊಟ್ಟ ಅಪ್ಪಣೆಯನ್ನು ೧೭೨ ಮತ್ತು ೧೭೩ ನೆಯ ಫರ್ಮಾನುಗಳು ತಿಳಿಸುತ್ತವೆ. ೧೭೪ ನೆಯ ಫರ್ಮಾನೂ ಸಹ ದೇವಲಾಪುರದ ಮುಂದುವರಿಯುವಿಕೆಗೆ ಕೊಟ್ಟ ನಿರೂಪವಾಗಿದೆ.

೧೭೫, ೧೭೬, ೧೭೭ ಮತ್ತು ೧೭೮ ನೆಯ ಫರ್ಮಾನುಗಳು ಧಾರವಾಡ ಜಿಲ್ಲಾ ಹಾನಗಲ್ಲ ತಾಲ್ಲೂಕು ಇನಾಂ ಗ್ರಾಮ ಹೊನ್ನಾವರಕೊಪ್ಪ (ಶ್ರಿಂಗೇರಿ) ಮತ್ತು ಆ ನಾಲ್ಕು ಫರ್ಮಾನುಗಳಲ್ಲುಲ್ಲೇಖಿಸಿರುವ ಗ್ರಾಮಗಳಲ್ಲಿರುವ ಬಿಡಿ ಜಮೀನುಗಳನ್ನು ಶ್ರೀ ಮಠಕ್ಕೆ ನಿರಂತರ ನಡೆಸಲು ಕೊಟ್ಟ ಭೋಗವಟೆ ಪತ್ರಗಳಾಗಿವೆ.

ಧಾರವಾಡ ಜಿಲ್ಲಾ ಹಿರೇಕೇರೂರು ತಾಲ್ಲೂಕು ಚಟ್ಟಹಳ್ಳಿ ಗ್ರಾಮವನ್ನು ಶ್ರೀ ಮಠಕ್ಕೆ ಪೂರ್ವದಂತೆ ಇನಾಮಾಗಿ ಮುಂದುವರೆಸುವಂತೆ ೧೭೯ ನೆಯ ಫರ್ಮಾನು ನಿರೂಪಿಸಿದೆ.

## B. ಗೋವಳಕೊಂಡದ ಬಾದಶಹರು

ಗೋವಳಕೊಂಡವು ಬಹಮನೀರಾಜ್ಯವು ಒಡೆದು ಐದು ವಿಭಾಗಗಳಾದ ಸಂದರ್ಭದಲ್ಲಿ ಕುತುಬಶಾಹಿ ಎಂಬ ಹೆಸರಿನಿಂದ ಕ್ರಿ. ಶ. ೧೫೧೨ ರಲ್ಲಿ ಕುಲೀಶಹನೆಂಬ ಮೊದಲನೇ ಮಹಮ್ಮದೀಯ ರಾಜನಿಂದ ಪ್ರಾರಂಭವಾಯಿತು. ಈ ರಾಜ್ಯದ ಕೊನೆಯ ಅರಸನಾದ ಅಬೂಹಸನ್‌ಶಹನು ಕ್ರಿ. ಶ. ೧೬೭೨ ರಿಂದ ೧೬೮೮ ರ ವರೆಗೆ ಆಳಿದನು. ಆ ಕಾಲದಲ್ಲಿ ಅವನಿಗೆ 'ಅಕ್ಕಣ್ಣ, ಮಾದಣ್ಣ' ಎಂಬ ಬ್ರಾಹ್ಮಣ ಪಂಡಿತರು ದಿವಾನರಾಗಿದ್ದರು. ಗೋವಳಕೊಂಡ ರಾಜ್ಯವು ಬನವಾಪಟ್ಟಣದ ರಾಜ್ಯವನ್ನೂ ಗೆದ್ದಿದ್ದಂತೆ ಸಂಖ್ಯೆ ೫೯ ನೇ ಲೇಖನದ ವಿವರಣೆಯಲ್ಲಿ ತಿಳಿಸಲಾಗಿದೆ. ಈ ಆಳ್ವಿಕೆಯಲ್ಲಿ ಶ್ರೀ ಮಠಕ್ಕೆ ಗೋವಳಕೊಂಡದ ಪ್ರಭುತ್ವದ ಪರವಾಗಿ ಬರೆಯಲ್ಪಟ್ಟ ಪತ್ರಗಳಲ್ಲಿ ಐದನ್ನು ಮುದ್ರಿಸಲಾಗಿದೆ.

ಈ ವಿಭಾಗದ ಮೊದಲನೆಯ ಫರ್ಮಾನು (ಸಂಖ್ಯೆ ೧೮೦) ಗೋವಳಕೊಂಡ ಪ್ರಭುತ್ವದಿಂದ ರೇಗಡಿಗಡ್ಡ ವೆಂಕಟಾದ್ರಿ ಕೋನೇರ ಎನ್ನುವವರಿಗೆ ಶ್ರೀ ಶಂಕರ ಭಾರತೀ ಸ್ವಾಮಿಗಳವರ ಮಠಕ್ಕೆ ಜೂಲುಕುಂಟೆ ಗ್ರಾಮವನ್ನು ವಿಜಾಪುರದ ವಜೀರರು ಸರ್ವಮಾನ್ಯವಾಗಿ ನಡೆಸಿಕೊಂಡು ಬಂದಂತೆ ಮುಂದುವರೆಸಬೇಕೆಂದು ತಿಳಿಸಿದ

ನಿರೂಪವಾಗಿದೆ. ಇದರಲ್ಲಿ 'ಸಮಾನಿನ ಅಲಫ' ಎಂದು ಕಾಲ ನಿರ್ದೇಶವಿದೆಯಾಗಿ ಅದಕ್ಕೆ ಸರಿಯಾದ ಕ್ರಿ. ಶ. 1679ನ್ನು ಬರೆಯಲಾಗಿದೆ.

೧೮೧ ನೆಯ ಲೇಖನವು ಮೇಲ್ಕಂಡವರಿಗೆ ರಾಜಾಧಿರಾಜ, ಮಹಾರಾಜ, ರಾಜತೇಜೋನಿಧಿ, ರಾಜಮಾನ್ಯ ರಾಜಕಂಠೀರವ, ರಾಜಚೂಡಾಮಣಿ ಎಂಬ ವಿಶೇಷಣಗಳನ್ನು ಕೊಟ್ಟು ಕನ್ನೆಗುಳ್ಳ ಪೇಟು ಗಾರು ಎಂಬುವರು ಅದೇ ಜೂಲುಕುಂಟೆ ಗ್ರಾಮವನ್ನು ಶ್ರೀ ಮಠಕ್ಕೆ ನಡೆಸುವಂತೆ ಕೋರಿ ಬರೆದ ವಿಜ್ಞಾಪನಾಪತ್ರವಾಗಿದೆ. ಈ ಲೇಖನದಲ್ಲಿ ಇಹಿದೇ ಸಮಾನಿನ ಅಲಫ ಎಂದು ಕಾಲ ಸೂಚಿಸಿದೆ. ಅದು ಕ್ರಿ. ಶ. 1680 ಆಗುವುದು.

೧೮೨ ನೆಯ ಲೇಖನವು ಬಸವಾಪಟ್ಟಣದ ತಹಶೀಲದಾರರಿಗೆ ಶಿವನೇ ಪರಗಣೆ ಮೌಜೆ ದಂದೂರು ಗ್ರಾಮ ವನ್ನು ಶ್ರೀ ಶಂಕರಭಾರತೀ ಸ್ವಾಮಿಗಳವರ ಮಠಕ್ಕೆ ಹಿಂದಿನ ನಡವಳಿಕೆಯನ್ನುಲ್ಲೇಖಿಸಿ ಮುಂದುವರೆಸುವಂತೆ ಕೊಟ್ಟ ಆಜ್ಞೆಯಾಗಿದೆ.

ಸಂಖ್ಯೆ ೧೮೩ ನೆಯ ಲೇಖನವು ಗೋವಳಕೊಂಡದ ದಿವಾನರಾದ ಮಾದಣ ಪಂಡಿತರ ಕಡೆಯ ಮೋತ್ಕೂರಿ ಮಹಾದೇವ ಎಂಬುವರು 'ಸಂಕೇಶ್ವರ ಸ್ವಾಮಿಗಳು ಶ್ರಿಂಗೇರೀಮಠದ ಹೆಸರು ಹೇಳಿಕೊಂಡು ಗೋವಳಕೊಂಡ ರಾಜ್ಯದಲ್ಲಿ ಸಂಚಾರ ಮಾಡುತ್ತಿರುವುದನ್ನು ನಿವಾರಿಸಲು' ಆಜ್ಞೆ ಕೊಡಬೇಕೆಂದು ಶ್ರೀ ಶಂಕರ ಭಾರತೀ ಸ್ವಾಮಿಗಳ ವರಿಗೆ ವಿಜ್ಞಾಪಿಸಿದ ಪತ್ರವಾಗಿದೆ. ಈ ಅಂಶವು ಶ್ರಿಂಗೇರೀ ನರಸಿಂಹ ಭಾರತೀ ಸ್ವಾಮಿಗಳು ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ಬರೆದಿರುವ ಪುಟ ೧೨ ರಲ್ಲಿ ಮುದ್ರಿತವಾದ ೧೦ನೇ ಸಂಖ್ಯೆಯ ಸಂಸ್ಕೃತ ಪತ್ರದಿಂದಲೂ ಮತ್ತು ಪುಟ ೧೭ – ೧೮ರಲ್ಲಿ ಮುದ್ರಿತವಾದ ೧೬ನೇ ಸಂಖ್ಯೆಯ ಸಂಕೇಶ್ವರ ಸ್ವಾಮಿಗಳವರ ಪತ್ರದಿಂದಲೂ ದೃಢೀಕೃತ ವಾಗಿದೆ. ಈ ಲೇಖನದಲ್ಲಿ ಕಾಲನಿರ್ದೇಶವಿಲ್ಲ. ಚಾರಿತ್ರಕ ದಾಖಲೆಗಳಿಂದ ಕಾಲವನ್ನು ಸೂಚಿಸಿದೆ.

ಸಂಖ್ಯೆ ೧೮೪ ನೆಯ ಲೇಖನವು ರಸೂಲಪುರ ಸಮ್ಮತ್ತಿನ ಗೌಡ ಶಾನುಭೋಗರಿಗೆ ಶ್ರೀಮಠಕ್ಕೆ ನಡೆಯು ತ್ತಿದ್ದ ತೋಟವನ್ನು ಮುಂದುವರೆಸುವಂತೆ ಗೋವಳಕೊಂಡದ ಪ್ರಭುತ್ವದಿಂದ ಬರೆದ ಫರ್ಮಾನಾಗಿದೆ.

## C. ಮೊಗಲ್ ಬಾದಶಹರು.

ದೆಹಲಿಯಲ್ಲಿ ಆಳಿದ ಮೊಗಲ್ ಚಕ್ರವರ್ತಿಗಳಲ್ಲಿ ಔರಂಗಜೇಬನು ದಕ್ಷಿಣ ದೇಶದ ಮೇಲೆ ದಂಡಯಾತ್ರೆ ಯನ್ನು ಕೈಗೊಂಡನು. ಗೋವಳಕೊಂಡ, ವಿಜಾಪುರಗಳನ್ನು ಸ್ವಾಧೀನಪಡಿಸಿಕೊಂಡು ಅಲ್ಲಿನ ಮಹಮ್ಮದೀಯ ಬಾದಶಹರನ್ನು ನಿರ್ಮೂಲಗೊಳಿಸಿ ತನ್ನ ಶುಭೇಧಾರರುಗಳನ್ನು ಅಲ್ಲಿನ ಅಧಿಕಾರಕ್ಕೆ ನಿಯಮಿಸಿದನು. ಔರಂಗಜೇಬನ ಅನಂತರ ಅವನಿಂದ ನಾಲ್ಕನೆಯವನಾದ ಫರುಕ್‌ಶಿಯರನು ದಿಲ್ಲಿಯ ಸಿಂಹಾಸನವನ್ನು ಕ್ರಿ. ಶ. 1713ರಿಂದ 1719ರವರೆಗೆ ಆಳಿದನು. ಅವನು ಸಿಂಹಾಸನವನ್ನೇರಿದ ಏಳನೆಯ ವರ್ಷದಲ್ಲಿ ಎಂದರೆ ಸುಮಾರು 1719ರಲ್ಲಿ ಹಿಪ್ಪರಗಿ ಪರಗಣೆ ಹಿರನಹಾಳು ಗ್ರಾಮವನ್ನು ಶ್ರಿಂಗೇರೀ ಶಂಕರ ಭಾರತಿಗಳವರ ಪರವಾಗಿ ಶಂಕರಾಜಿ ಮಲ್ಹಾರರಾವ್ ಎಂಬುವರು ಕೊಟ್ಟ ಅರ್ಜಿಯಂತೆ ಪೂರ್ವದಂತೆ ನಿರ್ಬಾಧವಾಗಿ ನಡೆಸಬೇಕೆಂದು ಕೊಟ್ಟಿರುವ ಆಜ್ಞೆಯು ೧೮೫ ನೆಯ ಫರ್ಮಾನಿನಿಂದ ತಿಳಿಯುತ್ತದೆ.

ಬಾದಶಹ ಫರುಕ್‌ಶಿಯರನ ಪರವಾಗಿ ಅಹಮದ್ ಎಂಬುವರು ಬಸವಾಪಟ್ಟಣದ ಸೀಮೆಯ ಹೊಳೇ ಹೊನ್ನೂರು ಪರಗಣೆಯ ಭೈರನಹಳ್ಳಿಯಲ್ಲಿ ಜಮೀನು ದಾನಕೊಟ್ಟಿರುವುದು ೧೮೬ ನೆಯ ಫರ್ಮಾನಿನಿಂದ ತಿಳಿಯುತ್ತದೆ.

ಮೊಗಲ ಬಾದಶಹರ ಆಜ್ಞೆಯಂತೆ ಅವರ ಮುದ್ರೆಯೊಂದಿಗೆ ದಿಲ್‌ದಿಲಾವರಖಾನನು ವಿಜಾಪುರ ಪ್ರಾಂತದ ಬಸವಾಪಟ್ಟಣದ ಸೀಮೆಯ ಮಲೇಬೆನ್ನೂರು ಪರಗಣೆಯ ಮೂಗಿನ ಗೊಂದಿಯಲ್ಲಿ ಜಮೀನನ್ನು ಮಠದ ದೈನಂದಿನ

ಖರ್ಚಿಗಾಗಿ ವೈಯಕ್ತಿಕ ಇನಾಂ (Personal Inam) ಆಗಿ ದಾನಕೊಟ್ಟಿರುವುದು ೧೮೭ ನೆಯ ಫರ್ಮಾನಿನಿಂದ ತಿಳಿದುಬರುತ್ತದೆ.

ಕರ್ನಾಟಕದ ಫೌಜದಾರನಾದ ದಿಲಾವರ್‌ಖಾನನು ತನ್ನ ಅಧಿಕೃತ ಮುದ್ರೆಯೊಂದಿಗೆ ಶಿರಾಗ್ರಾಮದೊಳಗೆ ಕೆರೆ ಕೆಳಗೆ ಎರಡು ಕದರ್ (ಎರಡು ದಿನ ಉಳುವಷ್ಟು) ತರೀ ಜಮೀನನ್ನು ದಾನಕೊಟ್ಟಿರುವುದು ೧೮೮ನೆಯ ಫರ್ಮಾನಿನಿಂದ ಗೊತ್ತಾಗುತ್ತದೆ.

೧೮೯ನೆಯ ಫರ್ಮಾನು, ಶಿರಾದಲ್ಲಿ ಕರ್ನಾಟಕದ ಫೌಜದಾರನಾಗಿಯೂ ಮತ್ತು ಶಿರಾದ ನವಾಬನೆಂದು ಪ್ರಸಿದ್ಧನಾಗಿಯೂ ಇದ್ದ ತಾಯರ್‌ಖಾನನು ವಿಜಾಪುರ ಪ್ರಾಂತ ಶಿರಾ ಪರಗಣೆಯ ಇಕರಾರ ಸಮ್ಮತ್ತಿನೊಳಗಿನ ಕಾಟವಾಳ ಗ್ರಾಮವನ್ನು ಜಪ್ತಿ ಬಿಡುಗಡೆಮಾಡಿ ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ಹಿಂದಿನಂತೆ ಮುಂದುವರೆಸು ವಂತೆ ಕೊಟ್ಟ ಅಪ್ಪಣೆಯನ್ನು ಹಳ್ಳಿಹಾಳ ಜಹಾಗೀರಿನ ದಿವಾನಠಾಣೆಯಿಂದ ಮಹಮ್ಮದ್ ದಿಲೇರಖಾನನು ಮೌಜೆ ಹಿಪ್ಪರಗಿಯಲ್ಲಿ ೨೬ ಹೊನ್ನು ಉತ್ಪನ್ನವುಳ್ಳ ಜಮೀನನ್ನು ಶ್ರೀ ಮಠದ ರಕ್ಷಣೆಗಾಗಿ ದಾನಕೊಟ್ಟಿರುವುದು ೧೯೦ನೆಯ ಫರ್ಮಾನಿನಿಂದ ತಿಳಿಯುತ್ತದೆ.

ಬಾದಶಹರ ಆಜ್ಞೆಯಂತೆ ಸೈಯ್ಯದ್‌ಮೂಸಾ ಎಂಬುವರು ಉಟಕೂರು ಸಮ್ಮತ್ತಿನ ಜೂಲುಕುಂಟೆ ಗ್ರಾಮ ವನ್ನು ಶ್ರೀ ಮಠಕ್ಕೆ ಮುಂದುವರೆಸಬೇಕೆಂದೂ ಯಾರೂ ಹಸ್ತಕ್ಷೇಪ ಮಾಡಬಾರದೆಂದೂ ಕೊಟ್ಟ ಆಜ್ಞೆಯು ೧೯೧ನೆಯ ಫರ್ಮಾನಿನಿಂದ ತಿಳಿಯುತ್ತದೆ.

೧೯೨ನೆಯ ಫರ್ಮಾನು ಬಾದಶಹರ ಆಜ್ಞೆಯಂತೆ ದಿಲಾವರಖಾನನು ಕರ್ನಾಟಕದ ಶುಭೆಯ ಪರಗಣೆಯ ಇಕರಾರ ಸಮ್ಮತ್ತಿನ ಕಾಟವಾಳ ಗ್ರಾಮವನ್ನು ಕೂಡ್ಲೀ ಶ್ರೀ ಶಂಕರ ಭಾರತೀಸ್ವಾಮಿಗಳವರ ಸ್ವಂತ ಖರ್ಚಿಗಾಗಿ ದಾನಕೊಟ್ಟಿರುವುದನ್ನು ಪದೇಪದೇ ಹೊಸಸನ್ನದಿನ ಅಪೇಕ್ಷೆಪಡದೆ ಮುಂದುವರೆಸಬೇಕೆಂದು ತಿಳಿಸುತ್ತದೆ.

ದಿಲಾವರಖಾನನು ಬಾದಶಹರ ಆಜ್ಞಾನುಸಾರ ತಾಯರ್ ಮಹಮ್ಮದ್‌ಖಾನನ ಫರ್ಮಾನಿನಂತೆ ದಾನ ಕೊಟ್ಟಿರುವ ಜೂಲುಕುಂಟೆ ಗ್ರಾಮವನ್ನು ಶ್ರೀ ಮಠಕ್ಕೆ ಮುಂದುವರೆಸಿಕೊಂಡು ಬರಬೇಕೆಂದು ಕೊಟ್ಟ ಆಜ್ಞೆಯು ೧೯೩ನೆಯ ಫರ್ಮಾನಿನಿಂದ ತಿಳಿಯುತ್ತದೆ.

೧೯೪ನೆಯ ಫರ್ಮಾನು ಮಹಮ್ಮದ್‌ಶಹಾ ಬಾದಶಹರ ಪರವಾಗಿ ದಿಲ್ ದಿಲಾವರಖಾನನು ಜೂಲುಕುಂಟೆ ಗ್ರಾಮದ ಮುನ್ನೂರ ನಲವತ್ತೆಕರೆ ಜಮೀನನ್ನು ಶ್ರೀ ಮಠಕ್ಕೆ ಮುಂದು ವರೆಸಿ ನಡೆಸಿಕೊಂಡು ಬರಬೇಕೆಂದು ಕೊಟ್ಟ ನಿರೂಪವನ್ನು ತಿಳಿಸುತ್ತದೆ.

ಮಹಮ್ಮದ್‌ಶಹಾ ಬಾದಶಹರ ಆಜ್ಞೆಯಂತೆ ಬಾದಶಹರ ಪರವಾಗಿ ದಿಲ್‌ದಿಲಾವರಖಾನನು ಕೂಡ್ಲೀ ಶಂಕರಾಚಾರ್ಯ ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ೪೫ ಹೊನ್ನಿನ ಕಾಟವಾಳ ಗ್ರಾಮವನ್ನು ದಾನಕೊಟ್ಟಿರುವುದು ೧೯೫ನೆಯ ಫರ್ಮಾನಿನಿಂದ ತಿಳಿಯುತ್ತದೆ.

ತಾಯರ್ ಮಹಮ್ಮದ್‌ಖಾನನು ಮಹಮ್ಮದ್‌ಶಹಾ ಬಾದಶಹರ ಪರವಾಗಿ ಕೊಟ್ಟ ಫರ್ಮಾನಿನಂತೆ ಕೂಡ್ಲೀ ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಉಟಕೂರು ಸಮ್ಮತ್ತಿನ ಜೂಲುಕುಂಟೆ ಗ್ರಾಮವನ್ನು ನಿರ್ಬಾಧವಾಗಿ ಮುಂದುವರೆಸುವಂತೆ ಅಪ್ಪಣೆಮಾಡಿರುವುದು ೧೯೬ನೆಯ ಫರ್ಮಾನಿನಿಂದ ತಿಳಿಯುತ್ತದೆ.

## D. ಸವಣೂರು ನವಾಬರು

ಸವಣೂರ ನವಾಬರು ಮೊದಲು ಮಿಯಾನ್ ವಂಶಕ್ಕೆ ಸೇರಿದ ಪಠಾಣರು. ಅವರ ವಂಶೀಕರಲ್ಲೊಬ್ಬರು ಕ್ರಿ. ಶ. ೧೩೦೮ರಲ್ಲಿ ತೈಮೂರನ ಸೇನೆಯೊಡನೆ ಇಂಡಿಯಾಕ್ಕೆ ಬಂದರೆಂದು ಹೇಳಲಾಗಿದೆ. ಆತನ ವಂಶೀಯರು ದಿಲ್ಲಿಯ

ಆಸ್ಥಾನದಲ್ಲಿ ಅಧಿಕಾರ ಪಡೆದಿದ್ದರು. ವಿಜಾಪುರದ ಮುಹಮ್ಮದ್ ಆದಿಲ್‌ಶಾಹನ (೧೬೨೬-೫೬) ಕಾಲದಲ್ಲಿ ಬಹಲ್ಲಲ್ ಖಾನ್ ಎಂಬುವನು ಆ ಬಾದಶಹನ ಹತ್ತಿರ ಕೆಲಸದಲ್ಲಿದ್ದನು. ಅಲಿಆದಿಲ್‌ಶಹನ ಕಾಲದಲ್ಲಿ ಅಬ್ದುಲ್ ರಹೀಮ್ ಎಂಬುವನು ಕೆಲಸ ಮಾಡಿದನು. ಅವನ ಮಗನಾದ ಅಬ್ದುಲ್ ಕರೀಮನು ಆದವಾನಿಯ ಜಹಗೀರದಾರನಾದ ಮಸೂದ್‌ಖಾನನ ಮಗಳನ್ನು ಮದುವೆಯಾಗಿ ಆ ಹೆಂಡತಿಯ ಕಡೆಯಿಂದ ಬಾಗಲಕೋಟೆಯನ್ನು ಸಂಪಾದಿಸಿದನು.

ಬಹಲ್ಲಲ್‌ಖಾನನಿಂದ ನಾಲ್ಕನೆಯವನಾದ ಅಬ್ದುಲ್‌ರವೂಫನು ಸವಣೂರನ್ನು ಸ್ಥಾಪಿಸಿದನು. ಇವನಿಗೆ ಮೊಗಲ್ ಚಕ್ರವರ್ತಿಗಳಿಂದ ದಿಲೇರಖಾನ್ ಬಹದ್ದೂರ್ ದಿಲೇರಜಂಗ್ ಎಂಬ ಬಿರುದು ಕೊಡಲ್ಪಟ್ಟಿತ್ತು. ಇವನ ಮುಂದಿನವರೂ ಅದನ್ನೇ ಉಪಯೋಗಿಸಿದ್ದಾರೆ. ಶ್ರಾವಣಮಾಸದಲ್ಲಿ ಶ್ರವಣ ನಕ್ಷತ್ರದಲ್ಲಿ ಆ ಊರನ್ನು ಕಟ್ಟಿದ್ದರಿಂದ ಅದಕ್ಕೆ ಶ್ರವಣೂರು (ಸವಣೂರು) ಎಂದು ಹೆಸರು ಬಂದಿತು.

ಇವರ ಫರ್ಮಾನುಗಳು ಪರ್ಷಿಯನ್ ಮತ್ತು ಮೋಡಿ ಮರಾಠಿ ಲಿಪಿಗಳಲ್ಲಿವೆ. ಈ ವಿಭಾಗದ ಮೊದಲನೆಯ (ಅ. ೧೯೭) ಫರ್ಮಾನು ಬಾಗಲಕೋಟೆ ಪರಗಣೆಯ ದೇಶಮುಖ ದೇಶಪಾಂಡೆ ಇವರಿಗೆ ಬರೆದುದಾಗಿದೆ. ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ತೋರ ಹಡಗಲಿ ಗ್ರಾಮವನ್ನು ಹಿಂದಿನಂತೆ ಇನಾಮಾಗಿ ನಡೆಸಬೇಕೆಂದು ತಿಳಿಸಿದೆ. ಇದರಲ್ಲಿ ಸೂರಸನ್ ಸಲಾಸಿನ ಮಯಾ ಅಲಫ ಎಂದು ಬರೆದಿರುವುದರಿಂದ ಅದಕ್ಕೆ ಸರಿಯಾದ ಕ್ರಿ. ಶ. 1729 ಎಂದು ನಿರ್ದೇಶಿಸಿದೆ.

೧೯೮ನೆಯ ಫರ್ಮಾನು ಚಿನ್ನಿಕಟ್ಟೆಯಲ್ಲಿ ದೊಡ್ಡಕೆರೆಯ ಕೆಳಗೆ ಜಮೀನನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಇನಾಮಾಗಿ ಕೊಟ್ಟಿರುವುದನ್ನು ತಿಳಿಸುತ್ತದೆ. ೧೯೯ನೆಯ ಫರ್ಮಾನು ಸುಂಕಾಪುರ ಗ್ರಾಮವನ್ನು ಶ್ರೀ ಮಠಕ್ಕೆ ಇನಾಂ ಕೊಟ್ಟಿರುವುದನ್ನು ತಿಳಿಸುವುದು.

೨೦೦ನೆಯ ಫರ್ಮಾನು ಶ್ರೀ ಮಠದ ಪರವಾಗಿ ಲಕ್ಷ್ಮಣಭಟ್ಟ ಎಂಬುವರ ಹೆಸರಿಗೆ ಕೊಟ್ಟ ರಹದಾರಿಯಾಗಿದೆ ಹಾವನೂರಿನಲ್ಲಿ ಮುಕ್ಕಾಂ ಮಾಡಿದ್ದ ಶ್ರೀ ಸ್ವಾಮಿಗಳವರು ಸವಣೂರು ಪ್ರಾಂತಕ್ಕೆ ದಯಮಾಡಿಸಿ ಶಿಷ್ಯವರ್ಗದಲ್ಲಿ ಪೂಜಾ ಸತ್ಕಾರಾದಿಗಳನ್ನು ಕೈಗೊಳ್ಳಲು ಕಾರ್ಯಕ್ರಮದಂತೆ ಪ್ರಾಂತದ ಸ್ಥಳಗಳಲ್ಲಿ ಇಷ್ಟಾನುಸಾರ ಸಂಚರಿಸುವುದಕೆ ಯಾರೂ ಅಡ್ಡಿಪಡಿಸಕೂಡದೆಂದು ಪ್ರಭುತ್ವದ ಕಡೆಯಿಂದ ಕೊಟ್ಟ ನಿರೂಪವಾಗಿದೆ. ಮೇಲ್ಕಂಡ ರಹದಾರಿ ಕೊಟ್ಟಿರುವುದನ್ನು ೨೦೧ನೆಯ ಫರ್ಮಾನು ತಿಳಿಸುತ್ತದೆ.

೨೦೨ನೆಯ ಫರ್ಮಾನು ಐರಣಿ ಕೋಟೆಯ ದೇಶಮುಖ ದೇಶಪಾಂಡೆಯವರಿಗೆ ಬರೆದಿದ್ದಾಗಿದೆ. ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ಮಾಕನೂರು ಗ್ರಾಮದಲ್ಲಿ ಜಮೀಂದಾರ್ ಮತ್ತು ಇನಾಂದಾರರಿಗೆ ಕೊಟ್ಟಿರುವುದು ಹೊರತಾಗಿ ಉಳಿದ ಭಾಗ ದಾನಕೊಟ್ಟಿರುವುದಾಗಿ ತಿಳಿಸುತ್ತದೆ. ೨೦೩ನೆಯ ಫರ್ಮಾನು ಜಮೀಂದಾರ ಮತ್ತು ಇನಾಂದಾರರ ಹಕ್ಕು ಹೊರತಾಗಿ ಮಂತ(ನ)ಗೀ ಗ್ರಾಮವನ್ನು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ದಾನ ಕೊಟ್ಟಿರುವ ವಿಷಯದಲ್ಲಿ ಕಾರಡಗೀ ದೇಶಮುಖ ದೇಶಪಾಂಡೆಯವರಿಗೆ ಕೊಟ್ಟ ನಿರೂಪವಾಗಿದೆ. ೨೦೪ನೆಯ ಫರ್ಮಾನು ಚಾವರಾತ ಜಮೀಂದಾರರಿಗೆ ಕೊಟ್ಟಿರುವುದು ಹೊರತಾಗಿ ಎಮ್ಮಿಗನೂರು ಗ್ರಾಮನ್ನು ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ದಾನಕೊಟ್ಟಿರುವ ಬಗ್ಗೆ ತಿಳವಳ್ಳಿ ದೇಶಮುಖ ದೇಶಪಾಂಡೆಯವರಿಗೆ ಬರೆದುದಾಗಿದೆ.

೨೦೫ ಮತ್ತು ೨೦೬ನೆಯ ಫರ್ಮಾನುಗಳು ಶ್ರೀ ಶಂಕರಭಾರತೀಸ್ವಾಮಿಗಳಿಗೆ ದಾನವಾಗಿಕೊಟ್ಟಿದ್ದ ಸುಂಕಾಪುರವು ಜಪ್ತಿಯಾದುದನ್ನು ವಾಪಸ್ಸು ಕೊಟ್ಟಿರುವುದಾಗಿ ಪರಗಣೆ ಅಧಿಕಾರಿಗಳಿಗೆ ತಿಳಿಸಿರುವ ನಿರೂಪಗಳಾಗಿವೆ.

೨೦೭ನೆಯ ಫರ್ಮಾನು ಶ್ರೀ ಶಂಕರಭಾರತೀಸ್ವಾಮಿಗಳಿಗೆ ನಸಿವೀ ಗ್ರಾಮವನ್ನು ದಾನಕೊಟ್ಟಿರುವುದಾಗಿ ರಟ್ಟೆಹಳ್ಳಿ ಪರಗಣೆ ಅಧಿಕಾರಿಗಳಿಗೆ ತಿಳಿಸಿದ ನಿರೂಪವಾಗಿದೆ. ೨೦೮ನೆಯ ಫರ್ಮಾನು ಮೇಲ್ಕಂಡ ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಶಂಕರನಹಳ್ಳಿ ಗ್ರಾಮವನ್ನು ದಾನಮಾಡಿರುವುದಾಗಿ ಆ ಭಾಗದ ಅಧಿಕಾರಿಗಳಿಗೆ ಮತ್ತು ಪ್ರಜೆಗಳಿಗೆ

ಕೊಟ್ಟ ಆಜ್ಞೆಯಾಗಿದೆ. ಶ್ರೀ ಮಠದ ಇನಾಂಗ್ರಾಮವಾದ ಸುಂಕಾಪುರದ ತೆರಿಗೆ (ಶಾಹೂಪಟ್ಟಿ ಮತ್ತು ಸಲಾಪಟ್ಟಿ) ಗಳನ್ನು ಮಾಫಿಮಾಡಿ ಸರ್ವಮಾನ್ಯ ಮಾಡಿ ಕೊಟ್ಟಿರುವುದಾಗಿ ೨೦೯ನೆಯ ಫರ್ಮಾನು ತಿಳಿಸುತ್ತದೆ.

ಸವಣೂರಿನಲ್ಲಿರುವ ಶ್ರೀ ಮಠದ ಜಾಗವನ್ನು ಸರಿಯಾಗಿ ವ್ಯವಸ್ಥೆ ಮಾಡಿಕೊಡಲು ಸುಬಾಜೀ ಖಂಡೊ ಮತ್ತು ಗಿರಿಧರರಾಯರು ಅರ್ಜಿಮಾಡಿರುವುದರಿಂದ ಅದರಂತೆ ಶ್ರೀಮಠದ ಮತ್ತು ಮನೆಯ ಜಾಗವನ್ನು ಬೇರೆಯವರು ಆಕ್ರಮಿಸದಂತೆ ಏರ್ಪಡಿಸಲು ಅಧಿಕಾರಿಗಳಿಗೆ ಕೊಟ್ಟ ನಿರೂಪವು ೨೧೦ನೆಯ ಫರ್ಮಾನಿನಿಂದ ತಿಳಿಯುತ್ತದೆ.

೨೧೧ನೆಯ ಫರ್ಮಾನು ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ಕೆಸರವಳ್ಳಿ ಗ್ರಾಮ ದಾನಕೊಟ್ಟಿರವುದಾಗಿ ಬರೆದ ದಾನಪತ್ರಿಕೆಯಾಗಿದೆ. ಇದೇ ಕೆಸರವಳ್ಳಿಗ್ರಾಮದಾನದ ವಿಷಯವನ್ನು ಕಾರಡಗಿ ಪರಗಣೆಯ ದೇಶಮುಖ ಮುಂತಾದ ಅಧಿಕಾರಿಗಳಿಗೆ ತಿಳಿಸಿದ ನಿರೂಪವು ೨೧೨ನೆಯ ಫರ್ಮಾನಾಗಿದೆ.

೨೧೩ನೆಯ ಲೇಖನವು ಶ್ರೀ ಸ್ವಾಮಿಗಳು (ಸವಣೂರು) ಪಟ್ಟಣಕ್ಕೆ ದಯಮಾಡಿಸಲು ನಾರಾಯಣದೀಕ್ಷಿತ ಮತ್ತು ದೇವಣದೀಕ್ಷಿತರ ಹೆಸರಿನಲ್ಲಿ ಕೊಟ್ಟ ರಹದಾರಿಯಾಗಿದೆ.

ಶ್ರೀ ಮಠದ ಖರ್ಚಿಗೋಸ್ಕರ ಖಂಡೇಬಾಗೂರು ಗ್ರಾಮವನ್ನು ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ದಾನ ಕೊಟ್ಟಿರುವುದನ್ನು ಮಾಲೂರು ಪರಗಣೆಯ ಅಧಿಕಾರಿಗಳಿಗೆ ತಿಳಿಸಲು ಕೊಟ್ಟ ಆಜ್ಞೆಯನ್ನು ೨೧೪ನೆಯ ಲೇಖನವು ತಿಳಿಸುತ್ತದೆ.

೨೧೫ನೆಯ ಲೇಖನವು ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಕ್ಯಾರಕೊಪ್ಪಗ್ರಾಮ ದಾನಕೊಟ್ಟಿರುವುದನು ಗುತ್ತಲಪರಗಣೆಯ ದೇಶಮುಖ ಮುಂತಾದ ಅಧಿಕಾರಿಗಳಿಗೆ ತಿಳಿಸಿದ ನಿರೂಪವಾಗಿದೆ.

ಶ್ರೀ ಶಂಕರ ಭಾರತೀಸ್ವಾಮಿಗಳವರ ಮಠಕ್ಕೆ ಹಿಂದಿನಿಂದ ನಡೆಯುತ್ತಿದ್ದ ಕೆಸರವಳ್ಳಿಗ್ರಾಮವನ್ನು ಮಾಮೂಲ ಮೇರೆ ಇನಾಮವಾಗಿ ನಡೆಸಬೇಕೆಂದು ಕಾರಡಗಿ ಪರಗಣೆಯ ದೇಶಮುಖ ಮುಂತಾದ ಅಧಿಕಾರಿಗಳಿಗೆ ನಿರೂಪಿಸಿದ್ದನ್ನು ೨೧೬ನೆಯ ಫರ್ಮಾನು ತಿಳಿಸುತ್ತದೆ.

## E. ಹೈದರಬಾದು ನಿಜಾಮು ಉಲ್ ಮುಲ್ಕು

ಔರಂಗಜೇಬನು ಕ್ರಿ.ಶ 1708ರಲ್ಲಿ ಗೋವಳಕೊಂಡರಾಜ್ಯವನ್ನು ನಿರ್ಮೂಲಗೊಳಿಸಿದ ನಂತರ ಕೆಲವು ಕಾಲದ ಮೇಲೆ ಎಂದರೆ ಕ್ರಿ.ಶ 1717ರಲ್ಲಿ ನಿಜಾಮು ಉಲ್‌ಮುಲ್ಕ ಫತೇಹ ಜಂಗರು ಕರ್ನಾಟಕ ಪ್ರಾಂತದ ಸುಭೇದಾರ ರಾದರು. ಕ್ರಿ.ಶ. 1718ರಲ್ಲಿ ಅವರಿಗೆ ಮೊಗಲ್ ಚಕ್ರವರ್ತಿಯಿಂದ ಅಸಫ್‌ಜಹಾ ಎಂಬ ಬಿರದುಕೊಡಲ್ಪಟ್ಟಿತು. ಇವರ ತರುವಾಯ ಕ್ರಿ.ಶ. 1743ರಲ್ಲಿ ಇವರ ಮಗ ನಾಸೀರ್‌ಜಂಗ್ ಮೀರ್ ಅಹಮದ್ ಅಲೀಖಾನ್ ನಿಜಾಮ್ದೌಲ್ ಎಂಬುವರು ದಕ್ಷಿಣದ ಸುಭೇದಾರರಾದರು.

ಈ ಮಧ್ಯದಲ್ಲಿ ಮಹಮ್ಮದ್ ಶಹಾ ಬಾದಶಹರ ಹುಕುಮಿನಂತೆ ಅಸಫ್‌ಜಹಾ ನಿಜಾಮು ಉಲ್ ಮುಲ್ಕ ಇವರು ವಿಜಾಪುರಶುಭೆಯ ಉಕ್ಕಲಿಪರಗಣೆಯ ಯಂಭತ್ತನಾಳಗ್ರಾಮವನ್ನು ಹಿಂದಿನಂತೆ ಶ್ರೀ ಮಠಕ್ಕ ಇನಾಮವಾಗಿ ಮುಂದು ವರಿಸಲು ಕೊಟ್ಟ ಆಜ್ಞೆಯನ್ನು ಸಂಖ್ಯೆ ೨೧೭, ೨೧೮ ಮತ್ತು ೨೧೯ ಈ ಮೂರು ಫರ್ಮಾನುಗಳು ತಿಳಿಸುತ್ತವೆ. ಈ ಗ್ರಾಮದಿಂದ ೮೧,೦೦೦ (ಎಂಬತ್ತೊಂದು ಸಾವಿರ) ದಾಂ ಉತ್ಪತ್ತಿಯತ್ತೆಂದು ೨೧೯ ನೆಯ ಫರ್ಮಾನಿನಲ್ಲಿ ಉಲ್ಲೇಖಿಸಲಾಗಿದೆ.

ಶ್ರೀಮಂತ ಮಾಧವರಾವ್ ಪಂಡಿತ ಪ್ರಧಾನ ಪೇಶ್ವೆಯವರ ಪ್ರತಿನಿಧಿಯ ಹೇಳುಕೆಯನ್ನನುಸರಿಸಿ ನಿಜಾಮು–ಉಲ್–ಮುಲ್ಕ ಆಸಫಜಹಾ ಅವರ ಆಜ್ಞೆಯಂತೆ ಮತ್ತು ಅವರ ಮುದ್ರೆಯನ್ನೊಳಗೊಂಡು ವಜೀರ್ ಮೋಯುದ್‌ದೌಲಾ ಬಹದ್ದೂರ್ ಜಾಫರ್‌ಖಾನನು ಮೇಲೆ ಹೇಳಿದ ಯಂಬತ್ತನಾಳ ಗ್ರಾಮವನ್ನು ಮುಂದು ವರೆಸಿದ್ದು ೨೨೦ ಮತ್ತು ೨೨೧ ನೆಯ ಫರ್ಮಾನುಗಳಿಂದ ತಿಳಿಯುತ್ತದೆ.

ಈ ಸಂದರ್ಭದಲ್ಲಿ ಈಚೆಗೆ 1955 ನೇ ಜನವರಿಯಲ್ಲಿ ಹೈದರಬಾದು ರಾಜಧಾನಿಗೆ ಈಗಿನ ಶ್ರೀ ಶ್ರೀ ಗಳವರು ದಯಮಾಡಿಸಿದ್ದುದನ್ನು ಆಗ ರಾಜಪ್ರಮುಖರಾಗಿದ್ದ ಹೈದರಾಬಾದು ಮೀರ್‌ಉಸ್ಮಾನ್ ಆಲಖಾನ್ ಅಸಫಜಹಾರವರ ಪರವಾಗಿ ಆಗ ಮುಖ್ಯಮಂತ್ರಿಗಳಾಗಿದ್ದ ಶ್ರೀ ಬಿ. ರಾಮಕೃಷ್ಣರಾಯರು ಸ್ವಾಗತಿಸಿದ್ದನ್ನು ಸರ್ಕಾರದ ಪರವಾಗಿ ಖಿಲ್ಲತ್ತು ಶಹಲುಜೋಡಿ ಮತ್ತು ಕಾಣಿಕೆ ಐದುನೂರು ರೂಪಾಯಿಗಳನ್ನು ಸಮರ್ಪಿಸಿದ್ದನ್ನು ಉಲ್ಲೇಖಿಸಬಹುದು.

### E. ಇತರ ಮಹಮದ್ದೀಯ ಅಧಿಕಾರಿಗಳು

ಮಹಮ್ಮದೀಯ ಅಧಿಕಾರಿಗಳ ಪತ್ರಗಳು ಒಟ್ಟು ಹತ್ತು ಈ ವಿಭಾಗದಲ್ಲಿ ಮುದ್ರಿತವಾಗಿವೆ. ಈ ಪೈಕಿ ಮೊದಲನೆಯದಾದ ಸಂಖ್ಯೆ ೨೨೨ ನೆಯ ಪತ್ರವು ದೇವಲಾಪುರವನ್ನು ಶ್ರೀಮಠಕ್ಕೆ ಹಿಂದಿನಂತೆ ಮುಂದುವರಿಸಲು ತಾಕೀದಿಯಾಗಿದೆ.

೨೨೩ ನೆಯದು ಶ್ರೀಮಠಕ್ಕೆ ಮಲೇಬೆನ್ನೂರು ಮುಂತಾದ ಸ್ಥಳಗಳಿಂದ ದೀಪಾರಾಧನೆಗಾಗಿ ೧೨ ಹೊನ್ನು ಮಾಮೂಲು ಮೇರೆ ಕೊಡಬೇಕೆಂದು ಬಸವಾಪಟ್ಟಣದ ಸುಭೆಯ ಅಧಿಕಾರಿಗಳಿಗೆ ಕೊಟ್ಟ ಆಜ್ಞೆಯಾಗಿದೆ.

ಶ್ರೀ ನರಸಿಂಹಭಾರತೀಸ್ವಾಮಿಗಳಿಗೆ ಬಾಗೂರಿನಲ್ಲಿ ಹತ್ತು ಹೊನ್ನಿನ ಜಮೀನು ದಾನಕೊಟ್ಟಿರುವ ವಿಷಯ ಗ್ರಾಮಾಧಿಕಾರಿಗಳಿಗೆ ಅಪ್ಪಣೆ ಮಾಡಿದುದನ್ನು ೨೨೪ ನೆಯ ಪತ್ರವು ತಿಳಿಸುತ್ತದೆ. ೨೨೫ ನೆಯದು ಶ್ರೀ ಶ್ರೀ ಗಳವರ ಸಂಚಾರಕ್ಕಾಗಿ ಕೊಟ್ಟ ರಹದಾರಿಯಾಗಿದೆ. ೨೨೬ ನೆಯದು ಶ್ರೀಮಠಕ್ಕೆ ಹೊಳೇಹೊನ್ನೂರಿನಲ್ಲಿ ಜಮೀನು ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.

೨೨೭ ನೆಯ ಫರ್ಮಾನು ಶಿರಾದ ಶುಭೇದಾರ ತಾಯರ್ ಮಹಮದ್‌ಖಾನರ ಪರವಾಗಿ ಅವರ ಅಧಿಕಾರಿಗಳು ಕಾಟವಾಳ ಗ್ರಾಮವನ್ನು ಶ್ರೀಕಂಠಭಾರತೀಸ್ವಾಮಿಗಳಿಗೆ ಎಂದಿನಂತೆ ಮುಂದುವರಿಸಬೇಕೆಂದು ಆ ಪರಗಣೆ ಅಧಿಕಾರಿಗಳಿಗೆ ಕೊಟ್ಟ ಅಪ್ಪಣೆಯನ್ನು ತಿಳಿಸುತ್ತದೆ.

ಶ್ರೀಮಠಕ್ಕೆ ರಾಯರ ಹುಬ್ಬಳ್ಳಿಯ ಕಿಲ್ಲೆಯಿಂದ ಹತ್ತು ಹೊನ್ನು ವರ್ತನೆಕೊಟ್ಟುದನ್ನು ಆ ಕಿಲ್ಲೆಯ ಫೌಜದಾರ ಕಿಲ್ಲೆದಾರರಿಗೆ ತಿಳಿಸಿಕೊಟ್ಟ ಅಪ್ಪಣೆಯು ೨೨೮ ನೆಯ ಫರ್ಮಾನಿನಿಂದ ತಿಳಿಯುತ್ತದೆ.

೨೨೯ ನೆಯ ಫರ್ಮಾನು ರಟ್ಟೆಹಳ್ಳಿ ಪರಗಣೆಯ ಕುಡುಪಲಿಯಲ್ಲಿ ಏಳುಹೊನ್ನಿನ ಜಮೀನನ್ನು ಶ್ರೀಮಠಕ್ಕೆ ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.

ಬಂಕಾಪುರದ ಕಿಲ್ಲೆಯಿಂದ ಶ್ರೀಮಠಕ್ಕೆ ಬಾದಗಮಗಟ್ಟೆ ಮತ್ತು ನಿಡಗುಂದಿಯಲ್ಲಿ ಜಮೀನನ್ನು ಸರ್ವಮಾನ್ಯ ಇನಾಮಾಗಿ ದಾನಕೊಟ್ಟಿರುವುದನ್ನು ೨೩೦ ನೆಯ ಫರ್ಮಾನು ತಿಳಿಸುತ್ತದೆ. ಬಾದಮಗಟ್ಟೆಯ ಜಮೀನು ಶ್ರೀಮಠದ ಕೈತಪ್ಪಿದ್ದು ಈಚೆಗೆ 1957-58ರಲ್ಲಿ ಅದನ್ನು ಸ್ವಾಧೀನ ಪಡಿಸಿಕೊಂಡದ್ದನ್ನು ಇಲ್ಲಿ ಉಲ್ಲೇಖಿಸಬಹುದು.

೨೩೧ ನೆಯ ಫರ್ಮಾನು ಮೊಜೇ ಗಲಬೆನಹಳ್ಳಿಯಲ್ಲಿ ಶ್ರೀಮಠಕ್ಕೆ ಜಮೀನು ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.

———

# ಐದನೆಯ ಭಾಗ

## ದೇಸಾಯಿ, ದೇಶಪಾಂಡೆ ವಗೈರೆಯವರು

### A ಹಾವನೂರು ದೇಸಾಯಿ

ಹಾವನೂರು ದೇಸಗತಿಯನ್ನು ವಿಜಾಪುರದ ಬಾದಶಹರ ಆಶ್ರಯದಲ್ಲಿ ಸಂಗ್ರಾಮಧುರೀಣ ಹನುಮಂತಗೌಡ ಎಂಬುವನು ಹದಿನಾರನೆಯ ಶತಮಾನದ ಕೊನೆಯ ಭಾಗದಲ್ಲಿ ಸ್ಥಾಪಿಸಿದನು. ಹಳೆಯ ಮೈಸೂರು ದೇಶದಲ್ಲಿ ಪಾಳೆಯಪಟ್ಟುಗಳಿದ್ದಂತೆಯೇ ಉತ್ತರ ಕರ್ನಾಟಕದ ಭಾಗದಲ್ಲಿ ದೇಸಗತಿಗಳಿದ್ದುವು. ಪಾಳೆಯಗಾರರ ಸ್ಥಾನಮಾನಗಳೇ ದೇಸಾಯರಿಗೂ ಇದ್ದು ಅವರು ಸಣ್ಣ ಸಣ್ಣ ಪ್ರಾಂತದ ನಾಯಕತ್ವವನ್ನು ವಹಿಸುತ್ತಿದ್ದರು. ಗುತ್ತಲದ ದೇಸಾಯರು ಹಾವನೂರನ್ನು ತಮ್ಮ ಸಂಸ್ಥಾನದ ಮುಖ್ಯಸ್ಥಳವನ್ನಾಗಿ ಮಾಡಿಕೊಂಡ 'ಸರ್ಪಪುರಾಧಿಶ್ವರ' ಎಂಬ ಬಿರುದನ್ನು ಧರಿಸುತ್ತಿದ್ದರು. ಇವರು ಕಾತ್ಯಾಯನ ಸೂತ್ರದ ಮೌನಭಾರ್ಗವ ಗೋತ್ರದವರಾಗಿ ಶುಕ್ಲಯಜುಃ ಶಾಖಾಧ್ಯಾಯಿಗಳಾಗಿದ್ದರು.

ಈ ಸಂಸ್ಥಾನದ ಮೂಲಪುರುಷ ಸಂಗ್ರಾಮಧುರೀಣ ಹನುಮಂತಗೌಡನಿಂದ ಎಂಟನೆಯವನಾಗಿ ಈ ಸಂಸ್ಥಾನವನ್ನು ಕ್ರಿ. ಶ. 1674–86ರ ವರೆಗೆ ಆಳಿದ ಲಿಂಗನಗೌಡನು ಚಟ್ಟಣಹಳ್ಳಿ ಗ್ರಾಮವನ್ನು ರಟ್ಟೆಹಳ್ಳಿ ಮುಂತಾದ ಮಹಲುಗಳ ಸುಭೇದಾರರು ರಾ॥ ಬನವಾಜಿ ಪಂಡಿತರು ಶ್ರೀಗಳವರಿಗೆ ಧಾರಾದತ್ತ ಮಾಡಿಕೊಟ್ಟದ್ದಕ್ಕೆ ತಾನೂಸಹ ಚಟ್ಟಣಹಳ್ಳಿ ಗೌಡ ಶ್ಯಾನುಭೋಗರಿಗೆ ಕವಲು ಬರೆದು ಕೊಟ್ಟಿದ್ದಾನೆ. ಅದು ಸಂಖ್ಯೆ ೨೩೩ ನೆಯದಾಗಿದೆ.

ಸಂಖ್ಯೆ ೨೩೨ನೆಯ ಬನವಾಜಿ ಪಂಡಿತರ ಪತ್ರದಲ್ಲಿ "ರಟ್ಟೀಹಳ್ಳಿ ಕೋಟೆಗೆ ಪೂರ್ವದಿಗ್ಭಾಗದಲ್ಲಿ ತುಂಗಭದ್ರಾ ತೀರದಲ್ಲಿರುವ ಚಟ್ಟನಹಳ್ಳೀಗ್ರಾಮವು ಬಹುಕಾಲದಿಂದ ಶ್ರೀಮಠಕ್ಕೆ ನಡೆದು ಬರುತ್ತಿದ್ದಲ್ಲ ಮಧ್ಯದಲ್ಲಿ ಹಃ॥ ಹುಕುಮತಿಯವರಿಗೆ ಈ ಪ್ರಾಂತದ ಮೊಖ್ತಾತಿಕೆಯಾಗಿ ಕಾರಕೂನರು ವಿಲಾತಿಯ ಗುತ್ತಿಗೆಮಾಡಿ ತಮ್ಮ ಗುತ್ತಿಗೆ ಪಾರೆಗೆ ಭರತಿಯಾಗಬೇಕೆಂದು ಈ ಚಟ್ಟಣಹಳ್ಳಿ ಗ್ರಾಮವನ್ನು ಅರಮನೆ ಜಮೆ ಹೊತ್ತಿಕೊಂಡು ಬಂದಿದ್ದಲ್ಲಿ ಶ್ರೀ ಸ್ವಾಮಿಗಳು ದಿಗ್ವಿಜಯ ಮಾಡಿ ಈ ಸ್ಥಳಕ್ಕೆ ಬಂದಲ್ಲಿ ದೇಶಕರು ನಾಡಿಗರು ರಾ॥ ಪಂತರಿಗೆ ಹೇಳಿಕೊಂಡದ್ದರಿಂದ ಪೂರ್ವ ಮರ್ಯಾದೆಯಂತೆ ಶ್ರೀ ಮಠಕ್ಕೆ ಈ ಚಟ್ಣಹಳ್ಳಿ ಗ್ರಾಮವನ್ನು ಹರಿಹರಾರ್ಪಣವಾಗಿ ಜೀರ್ಣೋದ್ಧಾರ ಮಾಡಿ ಕೊಟ್ಟರೆಂಬ" ಐತಿಹಾಸಿಕ ಹಿನ್ನೆಲೆಯ ವಿವರಣೆಯಿದೆ

ಮೂಲಸ್ಥಾಪಕನಿಂದ ಹತ್ತನೆಯವನಾಗಿ ಕ್ರಿ. ಶ. 1696–1724ರ ವರೆಗೆ ಆಳಿದ ಬಹದೂರ ಹನುಮಂತಗೌಡನು ಚಿಕ್ಕಕುರವತ್ತಿ, ಉದ್ದಗಟ್ಟಿ, ಹಿರೇ ಮೈಲಾರ ಈ ಮೂರುಗ್ರಾಮಗಳನ್ನು ದಾನಕೊಟ್ಟಿದ್ದಲ್ಲದೆ, ಶಿರಿಗೆರೆ, ಬಿಳಸ್ನೂರು, ಕುದುರೇಹಾಳ, ಹುಚೀಹೊಲ (ಹುಳಚೇರಿ) ಯಲ್ಲಿ ಜಮೀನುಗಳನ್ನು ದಾನವಾಗಿ ಕೊಟ್ಟಿದ್ದಾನೆ. ಈ ನಾಲ್ಕು ಅಂಶವನ್ನೂ ಸಂಖ್ಯೆ ೭೩೪ ರಿಂದ ೨೪೯ ರ ವರೆಗೆ ಇರುವ ಈ ದೇಸಾಯಿಯ ದಾನಶಾಸನ, ಶಿಲಾಶಾಸನ ಮತ್ತು ನಿರೂಪಗಳು ತಿಳಿಸುತ್ತವೆ.

ಸ್ತಂಭದ ಗುರುಗಳೆಂದು ಪ್ರಸಿದ್ಧರಾಗಿರುವ ನಾಲ್ಕನೆಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ವಿಶೇಷಾನುಗ್ರಹಕ್ಕೆ ಈ ಬಹದೂರ ಹನುಮಂತಗೌಡನು ಪಾತ್ರನಾಗಿ ಅವರ ತಪೋಮಹಿಮೆಯ ಅನೇಕ ಸತ್ಫಲಗಳನ್ನು ಅನುಭವಿಸಿದ್ದನೆಂಬುದು ಜನಜನಿತವಾಗಿದೆ.

ಬಹದ್ದೂರ ಹನುಮಂತಗೌಡರ ಪುತ್ರರಾದ ಬಸಪ್ಪಗೌಡರ ಪುತ್ರ ಬೊಮ್ಮಪ್ಪಗೌಡರು ಹಿರೇಬಿದರೆಯಲ್ಲಿ ಎರಡು ಮೂರು ಹೊಲ ದಾನ ಕೊಟ್ಟದ್ದನ್ನು ೨೪೯ ನೆಯ ದಾನಶಾಸನವು ತಿಳಿಸುತ್ತದೆ.

ಸವಣೂರ ನವಾಬರು ಮೂರನೆಯ ಶ್ರೀ ಶಂಕರಭಾರತೀಸ್ವಾಮಿಗಳವರಿಗೆ ದಾನಶಾಸನಸಂಖ್ಯೆ ೧೯೯ ರಂತೆ ದಾನವಾಗಿ ಕೊಟ್ಟ ಸುಂಕಾಪುರಗ್ರಾಮಕ್ಕೆ ದೇಸಾಯಿ ಮಣಿಯಪ್ಪನವರು ಮತ್ತು ಬಹದ್ದೂರ ಲಿಂಗಪ್ಪಗೌಡರು ರಟ್ಟೆಹಳ್ಳಿ ಮುತಾಲೀಕ ಯಲ್ಲಪ್ಪಗೆ ನಿರೂಪ ಕೊಟ್ಟದ್ದು ೨೫೦ ನೆಯ ನಿರೂಪದಿಂದ ತಿಳಿಯುತ್ತದೆ.

ಸುರಳೇಶ್ವರದ ಹವಾಲದಾರಗೌಡ ಶಾನುಭೋಗರು ಮಠದ ಜಮೀನನ್ನು ತಿರುವಿಟ್ಟುಕೊಂಡದ್ದಕ್ಕೆ ಹಾಗೆ ಮಾಡದಂತೆ ದೇಸಾಯಿಲಿಂಗಪ್ಪನವರು ತಾಕೀದು ನಿರೂಪ ಕೊಟ್ಟಿದ್ದನ್ನು ದೇಸಾಯಿ ಬೊಮ್ಮಪ್ಪಗೌಡರ ಸಂಖ್ಯೆ ೨೪೯ ನೆಯ ದಾನಶಾಸನದಂತೆ ಕೊಟ್ಟು ಹಿರೇಬಿದರೆ ಜಮೀನಿಗೆ ಬದಲಾಗಿ ಕರಿಕೆ ಪಟ್ಟೆವಳಿಗೆ ಎರಡು ಮೂರು ಭೂಮಿಯನ್ನು ಕೊಟ್ಟ ವಿವರ ೨೫೨ ನೆಯ ನಿರೂಪದಲ್ಲಿದೆ. ಬಹದೂರ ಹನುಮಂತಗೌಡರು ಮಣಿಯಪ್ಪನವರು ಮತ್ತು ಬಹದ್ದೂರಲಿಂಗಪ್ಪಗೌಡರು ಸವಣೂರ ನವಾಬರು ಶ್ರೀ ಶಂಕರಭಾರತಿಗಳಿಗೆ ದಾನವಾಗಿ ಕೊಟ್ಟ ಸುಂಕಾಪುರ ಗ್ರಾಮದಲ್ಲಿ ತಮಗೆ ಸೇರಿದ ದೇಸಾಯಿಕೆ, ಕುಲಕರ್ಣಿಕೆ, ನಾಡಗೌಡಕೆ, ಮತ್ತು ಪಲ್ಲಕ್ಕಿ ಎಂಬ ನಾಲ್ಕು ಬಾಬಿನ ಹೊಲಗಳನ್ನು ಕುಳವಣ ಆಯುನಹಿತವಾಗಿ ದಾನಕೊಟ್ಟದ್ದನ್ನು ೨೫೩ ನೆಯ ದಾನಶಾಸನವೂ ಮತ್ತು ಅದೇ ವಿಷಯದಲ್ಲಿ ರಟ್ಟೇಹಳ್ಳಿ ಮುತುಲೀಕ ಯಲ್ಲಪ್ಪನಿಗೆ ಕೊಟ್ಟ ಆಜ್ಞೆಯನ್ನು ೨೫೪ ನೆಯ ನಿರೂಪವೂ ತಿಳಿಸುತ್ತವೆ. ಹೀಗೆ ನಾಲ್ಕುಬಾಬಿನ ಜಮೀನುಗಳನ್ನು ದಾನಕೊಡುವದಕ್ಕೆ ದೇಸಾಯಿಯು ಶ್ರೀ ಹಿಂದೂರಾವ ಘೋರ್ಪಡೆಗೆ ಕೊಡುವ ಖಂಡಣಿ ರೊಕ್ಕದಲ್ಲಿ ಶ್ರೀ ಮಠಕ್ಕೆ ಪ್ರತಿವರ್ಷ ಐವತ್ತು ವರಹ ಕೊಡಬೇಕೆಂದು ಘೋರ್ಪಡೆಯು ಮಾಡಿಕೊಟ್ಟನೇ ಮೂಲಕು ಕಾರಣವೆಂಬುದನ್ನು ೨೫೫ ಮತ್ತು ೨೫೬ ನೆಯ ನಿರೂಪಗಳು ತಿಳಿಸುತ್ತವೆ.

ಹಾನಗಲ್ಲು ಸೀಮೆಯ ಮುಡೂರು ಗ್ರಾಮದಲ್ಲಿ ಹನ್ನೆರಡು ವರಹದ ಭೂದಾನವನ್ನು ಬಹದ್ದೂರ ಹನುಮಂತ ಗೌಡ (ಐದನೆಯವರು) ಶ್ರೀ ಶಂಕರಭಾರತೀ ಶ್ರೀಗಳವರಿಗೆ ಕೊಟ್ಟಿದ್ದನ್ನು ೨೫೭ ನೆಯ ನಿರೂಪವು ತಿಳಿಸುತ್ತದೆ.

ನಾಲ್ಕನೆಯ ಶ್ರೀಶಂಕರ ಭಾರತೀ ಶ್ರೀಗಳವರು ದೇಶಸಂಚಾರದಲ್ಲಿದ್ದು ಶ್ರೀಮುಖ ಕಳಿಸಿದ್ದನ್ನು ಬಹದ್ದೂರ ಹನುಮಂತ ದೇಸಾಯಿಯು ಗೌರವದಿಂದ ಬರಮಾಡಿಕೊಂಡು ಶ್ರೀ ಸ್ವಾಮಿಗಳವರ ಮಹಿಮಾವಿಶೇಷ ಗಳು ಲೋಕಪ್ರಸಿದ್ಧವಾಗಿದಾವೆ. ನಮಗೆ ಸಂದರ್ಶನ ಲಾಭವಿಲ್ಲದೆ ಬಹುಕಾಲವಾದ ಪ್ರಯುಕ್ತ ಚಕೋರನ್ಯಾಯ ವನ್ನಿಚ್ಛಿಸುತ್ತೇವೆ. ಭಕ್ತವಾತ್ಸಲ್ಯವೇ ಮುಖ್ಯವಾಗಿ, ಎಲ್ಲಿದ್ದಾಗ್ಯೂ ಸ್ಮರಿಸಿ ಪರಾಂಬರಿಸಿ ನಡೆಸುವದರಿಂದಲೇ ಸಕಲ ದುರಿತಗಳೂ ಪರಾಭವವಾಗಬೇಕಲ್ಲದೇ ಮತ್ತೊಂದಿಲ್ಲ ಎಂದು ೨೫೮ ನೆಯ ಲೇಖನದಲ್ಲಿ ಬರೆದಿದ್ದಾನೆ.

ಮೂಡೂರ ಹವಾಲದಾರಗೌಡರು ಆ ಗ್ರಾಮವನ್ನು ಹಿಂತೆಗೆದುಕೊಂಡದ್ದನ್ನು ತಿರುಗಿ ಕೊಡುವದಕ್ಕೂ ಹಾನ ಗಲ್ಲು ಮುತಾಲೀಕ ಕೃಷ್ಣಪ್ಪನು ಹೊನ್ನಾವರಕೊಪ್ಪ (ಶೃಂಗೇರಿ) ವನ್ನು ಸಂಚಣಿಮಾಡುವದಕ್ಕೂ ಕೊಟ್ಟ ತಕೀದಿ ನಿರೂಪಗಳು ೨೪೯ ಮತ್ತು ೨೬೦ನೆಯವಾಗಿವೆ.

ಬಸವಾಪಟ್ಟಣದ ಸೀಮೆ ನಂದಿಗಾವಿ ಸಮ್ಮತ್ತಿನ "ಕಾಮಲಾಪುರ"ವನ್ನು ಬಹದ್ದೂರ ಹನುಮಂತಗೌಡರು ಶ್ರೀಶಂಕರಭಾರತೀ ಶ್ರೀಗಳವರಿಗೆ ದಾನ ಕೊಟ್ಟದ್ದನ್ನು ೨೬೧ ನೆಯ ಶಾಸನ ತಿಳಿಸುತ್ತದೆ. ಅದರ ನಿರೂಪ ೨೬೨ ನೆಯದಾಗಿದೆ.

೨೬೩ ನೆಯ ಲೇಖನವನ್ನು ದೇಸಾಯಿ ಲಕ್ಷ್ಮವ್ವನವರು ಬರೆದಿದ್ದು; ಅದು ಬಹದ್ದೂರ ಹನುಮಂತಗೌಡರ ಲಗ್ನಪತ್ರಿಕೆ; ಅದರಲ್ಲಿ "ಸ್ವಾಮಿಗಳು ಭಕ್ತವಾತ್ಸಲ್ಯದಿಂದ ದಯಮಾಡಿ ಮಾಂಗಲ್ಯಸಿದ್ಧಿಯಾಗುವಂತೆ ಅನುಗ್ರಹಿಸ ಬೇಕೆಂದು" ಕೇಳಿಕೊಳ್ಳಲಾಗಿದೆ.

೨೬೪ ನೆಯ ದಾನ ಶಾಸನವು ದೇಸಾಯರ ಉಮ್ಮಳಿ ಮೆಡಲೇರಿಗೆ ಸೇರಿದ ಹೀಲದಹಳ್ಳಿ ದಳವಾಯಿ ಕೆರೆಯ ಭೂದಾನವನ್ನು ತಿಳಿಸುತ್ತದೆ.

ಉದ್ದಗಟ್ಟಿ ದನಗಳು ಮೇಯುವದಕ್ಕೆ ಕುದರಹಾಳು ಗ್ರಾಮದ ದಕ್ಷಿಣಕ್ಕೆ ಸರಸ್ವತಿಕೆರೆ ದಕ್ಷಿಣದಲ್ಲಿ ಹುಳಚಿ ಹೊಲದ ಪರಿಯಂತ ಇರುವ ಅಡವಿಯನ್ನು ಕೊಟ್ಟಿರುವ ಅಂಶವನ್ನು ೨೬೫ನೆಯ ನಿರೂಪ ತಿಳಿಸುತ್ತದೆ.

ಟೀಪೂಸುಲ್ತಾನನು ಈ ದೇಸಗತಿಯನ್ನು ಹಾಳುಮಾಡುವದಕ್ಕಾಗಿ ದಂಡಯಾತ್ರೆ ಕೈಕೊಂಡ ಸಂದರ್ಭವನ್ನು ೨೬೬ ನೆಯ ಲೇಖನವು ತಿಳಿಸುತ್ತದೆ. ಅದರಲ್ಲಿ “ದಕ್ಷಿಣಾಧಿಪತಿಯ ಆಗಮನವಾರ್ತೆ ಬಹಳವಾಗಿಹುದು ಅರಿಕೆ ಇದ್ದೀತಷ್ಟೆ. ಶ್ರೀರಂಗಪಟ್ಟಣದಿಂದ ಹೊರಟು ತೀವ್ರದಲ್ಲಿ ತುಂಗಭದ್ರೆ ದಾಟಿಬರುವ ಸಮಾಚಾರ ಪ್ರತಿಕ್ಷಣಕ್ಕೂ ಕೇಳಥೇವೆ. ಈ ಸ್ಥಳದಲ್ಲಿ ತದೀಯ ಕಾರಕೂನರು, ವರಾತದಾರರು ಬಹುಜನಕ್ಕೆ ಫಾಶೀ ಉದ್ದಿಶ್ಯ ಬಂದುಕುಳಿತು, ನಿತ್ಯವೂ ನಿರ್ಬಂಧಿಸುತ್ತಾರೆ. ಸ್ವಾಮಿಗಳ ಪರಮಾನುಗ್ರಹದಿಂದಲೇ ಸಕಲ ದುರಿತ ದೂರೀಕೃತವಾಗಬೇಕು ನಾವು ಸಹ ಸ್ವಾಮಿಗಳವರ ಸ್ಮರಣಾಸಕ್ತಮನಸ್ಕರಾಗಿದ್ದೇವೆ. ಅಲ್ಲದೆ ಮತ್ತೊಂದಿಲ್ಲ” ಎಂದು ಪ್ರಾರ್ಥಿಸಿದ್ದಾನೆ.

ದೇಸಾಯಿಯ ಕೊನೆಯಪತ್ರವು ದೇಸಗತಿಯು ಹಾಳಾದಮೇಲೆ ಬಹದ್ದೂರಲಿಂಗಪ್ಪಗೌಡರು ತಮ್ಮ ಸಂಸ್ಥಾನದ ಕಾರ್ಯಕ್ಕಾಗಿ ಮೈಸೂರ ಮುಮ್ಮಡಿ ಕೃಷ್ಣರಾಜಒಡೆಯರು ಮತ್ತು ದಿವಾನ ರಾಮರಾಯರಿಗೆ ಶ್ರೀಗಳವರು ನಿರೂಪ ಕೊಡಬೇಕೆಂದು ಕೇಳಿಕೊಂಡ ವಿಜ್ಞಾಪನೆಯಾಗಿದೆ. ಅದರಂತೆ ಅನುಗ್ರಹಿಸಿದ ಶ್ರೀಗಳವರ ನಿರೂಪವೇ ಈಗಿನ ಅಗಡಿ ಜಹಗೀರು ದೊರೆಯಲು ಕಾರಣವಾಗಿದೆ.

## B. ತೊರಗಲ್ಲು (ಕೊಕಟನೂರ) ದೇಸಾಯಿ

ತೊರಗಲ್ಲು (ಕೊಕಟನೂರ) ದೇಸಾಯಿಗಳು ವೀರಶೈವರು. ಆ ದೇಸಗತಿಯು ಕ್ರಿಸ್ತಾಬ್ದ 1310 ರಲ್ಲಿ ಕಾಡಳ್ಳಿದ್ಯಶ್ಯಪ್ಪನವರ ಮಕ್ಕಳಾದ ಗದಿಗೆಪ್ಪ ಎಂಬುವವರಿಂದ ಪ್ರಾರಂಭವಾಯಿತು. ಅವರಿಂದ ಹದಿನಾಲ್ಕನೆಯರಾದ ಲಿಂಗಗೌಡರಸದೇಸಾಯಿ (ಹಿರೇಲಿಂಗಪ್ಪ) ಯವರು ಹೊಂಗಲವಲ್ಲಿ ಎರಡು ಮಾರು, ಆಹಟ್ಟಿ ಮತ್ತು ಶಿರೂರ ಗಳಲ್ಲಿ ಒಂದೊಂದು ಮಾರು, ಹೀಗೆ ಒಟ್ಟು ನಾಲ್ಕು ಮಾರು ಜಮಿನನ್ನು ಎರಡನೆಯ ಶಂಕರಭಾರತಿಗಳಿಗೆ ದಾನ ಕೊಟ್ಟಿದ್ದನ್ನು ೨೬೮ ನೆಯ ಸಂಖ್ಯೆಯ ದಾನಶಾಸನ ತಿಳಿಸುತ್ತದೆ.

ಅನಂತರ ಜಾಯೇಗೌಡ ದೇಸಾಯಿಯ ರೀಜೆಂಟರಾಗಿದ್ದ ಚನ್ನವ್ವ ಇವರು ಶಿರೇಶಿಲವಡಿ ಮತ್ತು ನವಲಗುಂದಗಳಲ್ಲಿ ಒಂದು ಮಾರಿಗೆ ಮುವತ್ತಾರು ಬಿಘೆ ಪ್ರಮಾಣದಂತೆ, ಮೂರು ಮೂರು ಮಾರು ಜಮೀನು ದಾನಮಾಡಿರುವುದನ್ನು ೨೬೯ ನೆಯ ದಾನಶಾಸನ ತಿಳಿಸುತ್ತದೆ.

ಚನ್ನವ ಜಾಯಗೌಡದೇಸಾಯಿಯವರು ಶಲವಡಿಗ್ರಾಮದಲ್ಲಿ ಹಿಂದಿನವರು ಕೊಟ್ಟ ಎರಡು ಮಾರು ಭೂಮಿಯ ಜೊತೆಗೆ ತಾವು ಕೊಟ್ಟ ಮೂರು ಮಾರು ಭೂಮಿ ಸೇರಿ ಐದು ಮಾರು ಭೂಮಿಗೆ ಕೊಟ್ಟ ತಾಕೀದಿ ೨೭೦ ನೇ ಶಾಸನವಾಗಿದೆ.

ಚನ್ನವ್ವಜಾಯಗೌಡರು ಮೂರನೆಯ ಶಂಕರಭಾರತಿಗಳಿಗೆ ಶಲವಡಿ ನವಲಗುಂದಗ್ರಾಮಗಳಲ್ಲಿ ಭೂಮಿದಾನ ಮತ್ತು ನವಲಗುಂದದಲ್ಲಿ ಮಠದ ಕಟ್ಟಡಕ್ಕೆ ನಿವೇಶನ ಕೊಟ್ಟ ವಿವರಕ್ಕೆ ಬರೆದ ವಿಜ್ಞಾಪನ ಪತ್ರಿಕೆ ೨೭೧ ನೇ ಲೇಖನವಾಗಿದೆ.

ಶ್ರೀಸ್ವಾಮಿಗಳವರನ್ನು ತಮ್ಮ ಗ್ರಾಮಕ್ಕೆ ಆಹ್ವಾನಿಸಿದ ವಿಷಯ ೨೭೨ ರಲ್ಲಿದೆ.

ತೋರಗಲ್ ಸರಕಾರದ ಪರವಾಗಿ ಬಾದಾಮಿ ಪರಗಣೆ ಗೌರಭಾಸ್ಕರಪುರ ಎಂಬ ಊರನ್ನು ವಿದ್ಯಾಶಂಕರ ಭಾರತಿಗಳಿಗೆ ದಾನ ಕೊಟ್ಟ ವಿಷಯವನ್ನು ೨೭೩ ನೇ ನಿರೂಪವು ತಿಳಿಸುತ್ತದೆ.

ತೋರಗಲ್ಲ ದೇಸಾಯಿ ಲಿಂಗಪ್ಪಾಜಾಯೆ ಗೌಡ ಇವರು ಗುರ್ಲ ಹೊಸೂರ ಗ್ರಾಮದಾನವನ್ನು, ನವಲಗುಂದ ದಲ್ಲಿ ಮೂರುಮಾರು ಜಮೀನನ್ನು ಅನೇಕ ಗ್ರಾಮಗಳಲ್ಲಿ ಇಪ್ಪತ್ತೈದು ಹೊನ್ನು ದೀಪಾರಾಧನೆಯ ಕಾಣಿಕೆ

ಯನ್ನು, ನವಲಗುಂದದಲ್ಲಿ ಮಠಕಟ್ಟಲು ಸ್ಥಳದಾನವನ್ನು, ಬೇರೆ ಬೇರೆ ಊರುಗಳಲ್ಲಿ ಮೂವತ್ತೊಂಭತ್ತು ಹೊನ್ನು ದೀಪಾರಾಧನೆ ಕಾಣಿಕೆಯನ್ನು ಸಹ ಕೊಟ್ಟ ವಿಷಯವನ್ನು ೨೭೪ ರಿಂದ ೨೭೯ ರ ವರೆಗಿನ ನಿರೂಪಗಳು ತಿಳಿಸತ್ತವೆ.

ಕಲ್ಲಾಪುರಗ್ರಾಮದಲ್ಲಿದ್ದ ೬೦ದು ಮಾರು ಜಮೀನಿಗೆ ಕಲ್ಲನಗೌಡ ಪಾಟೀಲ ಎಂಬುವನು ದಿಕ್ಕತ್ತು ಮಾಡಕೂಡದೆಂಬುದಾಗಿ ಕೊಟ್ಟ ತಾಕೀದಿಯು ೨೮೦ ನೇಯ ಸಂಖ್ಯೆಯದಾಗಿದೆ.

## C ಬಾದಾಮಿ ದೇಸಾಯಿ

ಬಾದಾಮಿ ಸೀಮೆ ಸರದೇಸಾಯಿಯವರು ಯಲಬುರ್ಗಸೀಮೆ ನಾಡಪಟ್ಟಣ ಶೆಟ್ಟಿಗಳೂ ಬಾಗಡಕೋಟೆಸೀಮೆ ಸರನಾಡ ಚೌಧರಿಗಳೂ ಆಗಿದ್ದರು. ಇವರ ಪೈಕಿ ನರಸಪ್ಪನಾಯಕನ ಪೌತ್ರನೂ, ಮುರಾರಿನಾಯಕನ ಪುತ್ರನೂ ಆದ ಪವಾಡಿನಾಯಕನು ಶಿರೂರಲ್ಲಿ ಎಂಟು ಗಿದ್ನ ಹೊಲ, ಮತ್ತು ದೇವರಮನಿ ಗ್ರಾಮವನ್ನು ದಾನಕೊಟ್ಟ ವಿಷಯವನ್ನು ೨೮೧ನೆಯ ಪತ್ರವು ತಿಳಿಸುತ್ತದೆ.

ಇಮ್ಮಡಿ ಪವಾಡಿನಾಯಕರು ಕರಮಡಿಯಲ್ಲಿ ಜಮೀನು ದಾನ ಕೊಟ್ಟದ್ದನ್ನು ೨೮೨ನೆಯ ಪತ್ರವು ತಿಳಿಸುತ್ತದೆ.

ವೆಂಕಪ್ಪನಾಯಕರು ಬಾಗಲಕೋಟೆಯಲ್ಲಿ ಮಠ ಕಟ್ಟಲು ಸ್ಥಳ ದಾನಕೊಟ್ಟದ್ದನ್ನು ೨೮೩ನೆಯ ಪತ್ರವು ತಿಳಿಸುತ್ತದೆ.

೨೮೪–೨೮೫ನೆಯ ಪತ್ರಗಳು ವೆಂಕಪ್ಪನಾಯಕರು ಕೊಟ್ಟ ಹಡಗಲ್ಲಿ ಗ್ರಾಮದಾನ ಶಾಸನ ಮತ್ತು ತಾಕೀದಿಗಳಾಗಿವೆ.

ಬಾದಾಮಿಸೀಮೆ ದೇಶಮುಖನಾದ ಸಂಗಪ್ಪಯ್ಯನು ಹದಿನೆಂಟು ಬಿಘೆಜಮೀನನ್ನು ದಾನ ಕೊಟ್ಟ ಪತ್ರವು ೨೮೬ನೆಯದಾಗಿದೆ.

೨೮೭–೨೮೮ನೆಯ ಪತ್ರಗಳು ಬಾದಾಮಿ ಸರದೇಸಾಯಿ ಹನುಮಪ್ಪ ನಾಯಕನು ಗೋವಿನಹಾಳು ಗ್ರಾಮ ದಾನಕೊಟ್ಟುದನ್ನು ಮತ್ತು ಅದಕ್ಕಾಗಿ ಗ್ರಾಮಾಧಿಕಾರಿಗಳಿಗೆ ಕೊಟ್ಟ ಅಪ್ಪಣೆಯನ್ನು ತಿಳಿಸುತ್ತವೆ.

೨೮೯–೨೯೦ನೆಯ ದಾನಶಾಸನ ಮತ್ತು ನಿರೂಪಗಳು ಶ್ರೀಮಂತರಾಜೇ ಶ್ರೀ ಬಾಜೀರಾವ ಪಂತ ಪ್ರಧಾನರು ಮತ್ತು ಶ್ರೀಮಂತ ಮಹದೇವ ರಾವರಾಸ್ತೆ ಇವರ ಆಜ್ಞೆಯಂತೆ ಕೃಷ್ಣಪ್ಪ ಆಲಪ್ಪನಾಯಕರು ಹಡಗಲ ಗ್ರಾಮದ ಪುನರ್ದಾನ ಮಾಡಿಕೊಟ್ಟ ಪತ್ರ ಮತ್ತು ಆ ಬಗ್ಗೆ ಅಧಿಕಾರಿಗಳಿಗೆ ಕೊಟ್ಟ ತಾಕೀದಿಗಳಾಗಿವೆ.

## D ಮಿಶ್ರೀಕೋಟೆ ದೇಶಾಯಿ

ಮಿಶ್ರೀಕೋಟೆದೇಸಾಯರು ವಿಶ್ವಾಮಿತ್ರಗೋತ್ರದ ಆಶ್ವಲಾಯನ ಸೂತ್ರದ ಬ್ರಾಹ್ಮಣರು. ಇವರ ಲೇಖನಗಳು ೨೯೧ ರಿಂದ ೩೦೩ ಪೂರ್ತಿ ಹದಿಮೂರು ಇದ್ದ ಇವುಗಳು ಕೂಡಲಿಗಿ, ಬಚ್ಚೆಕೊಪ್ಪ, ಕುರುಬರಕೊಪ್ಪ ಮಾಚಾಪುರ, ಹಸರಂಬಿ, ಹಳೇಶೀಗೀಗಟ್ಟಿ, ಕುಮರಿಕೊಪ್ಪ, ಹುಲಗಿಕಟ್ಟೆ, ದಾಸ್ತೀಕೊಪ್ಪ, ಚಿಕ್ಕಶೀಗೀಕಟ್ಟೆ, ಹಿರೇ ಶೀಗೀಕಟ್ಟೆ ಇವುಗಳಲ್ಲ ಜಮೀನುಗಳನ್ನು ಆ ದೇಸಾಯರ ವಂಶಜರು ದಾನಕೊಟ್ಟಿರುವ ವಿಷಯವನ್ನು ತಿಳಿಸುತ್ತವೆ.

೩೦೨ನೆಯ ನಿರೂಪವು ವೆಂಕಾಜಿ ಶಿವಾಜಿದೇಸಾಯಿಯು ರಂಗಾಪುರ ಗ್ರಾಮವನ್ನು ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.

ತಿಮ್ಮಾಜಿ ವೆಂಕಾಜಿದೇಸಾಯಿಯು, ಲಕ್ಷ್ಮೀಬಾಯಿ ದೇಸಾಯಿಯವರಿಗೆ ಶ್ರೀಸ್ವಾಮಿಗಳನ್ನು ಸತ್ಕರಿಸಲು ಬರೆದ ಪತ್ರವು ೩೦೩ನೆಯದಾಗಿದೆ.

## E ಲಕ್ಷ್ಮೇಶ್ವರದ ದೇಸಾಯಿ

ಲಕ್ಷ್ಮೇಶ್ವರದ ದೇಸಾಯಿಯವರು ವೀರಶೈವ ಮತಕ್ಕೆ ಸೇರಿದವರು. ಅವರು ಈ ಮಠದ ಶ್ರೀಗಳವರ ವಿಷಯದಲ್ಲಿ ವಿಶೇಷ ಭಕ್ತಿ–ಶ್ರದ್ಧೆಯನ್ನಿಟ್ಟುಕೊಂಡಿದ್ದರು.

ಬಹದ್ದರ ಭಾನಪ್ಪಗೌಡರು ಲಕ್ಷ್ಮೇಶ್ವರದಲ್ಲಿ ಹೊಲ ದಾನಕೊಟ್ಟದ್ದನ್ನು ೨೦೪ ನೆಯ ದಾನ ಪತ್ರವು ತಿಳಿಸುತ್ತದೆ.

ದೇಸಾಯಿ ಕಂಚಣ್ಣಗೌಡರು ಗಡ್ಡಿಬಸಾಪುರ ಗ್ರಾಮುವನ್ನು ದಾನವಾಗಿ ಕೊಟ್ಟ ವಿಷಯುವನ್ನು ೨೦೫ ನೆಯ ದಾನಪತ್ರವು ತಿಳಿಸುತ್ತಿದ್ದು, ೨೦೬ ನೆಯು ಪತ್ರವು ಅದೇ ವಿಷಯುದ ಶಿಲಾಶಾಸನವಾಗಿದೆ.

ಲಕ್ಷ್ಮೇಶ್ವರದ ದೇಸಗತಿಗೆ ಸಂಬಂಧಪಟ್ಟ ಶಾನಭೋಗ ಭೀಮಪ್ಪ, ದೇಶಕುಲ ಕರ್ಣಿ ಸಂಕಪ್ಪ ಮುಂತಾದವರು, ದೇಸಾಯಿಬಣ, ಗುಡಗೇರಿ, ದೊಡ್ಡೂರು, ಕೊಂಚಿಗೇರಿಗಳಲ್ಲಿ ಜಮೀನು ದಾನಕೊಟ್ಟ ವಿಷಯುವನ್ನು ೨೦೭ ರಿಂದ ೨೧೦ ರ ವರೆಗಿನ ನಾಲ್ಕು ಲೇಖನಗಳೂ ತಿಳಿಸುತ್ತವೆ.

ಕೆಂಚಣ್ಣಗೌಡ ದೇಸಾಯರು ಹುಲಗೆರೆ ಭೂಮೀ ಪೈಕಿ ಶಂಕರತೀರ್ಥ ತೋಟವನ್ನು ದಾನ ಕೊಟ್ಟದ್ದನ್ನು ೨೧೧ ನೆಯ ಪತ್ರವು ತಿಳಿಸುತ್ತದೆ.

## F ಹಾನಗಲ್ಲ ದೇಸಾಯಿ

ಹಾನಗಲ್ಲ ದೇಸಾಯರು ಭಾರದ್ವಾಜಗೋತ್ರದ ಆಶ್ವಲಾಯನ ಸೂತ್ರದ ಋಕ್ ಶಾಖೆಯ ಬ್ರಾಹ್ಮಣರು. ರಾಯಣ್ಣಗೌಡ ಮತ್ತು ಸಂಕಣಗೌಡರ ಹೆಂಡತಿ ನೀಲವ್ವ ಈ ಉಭಯತರು ಹಾನಗಲ್ಲಿನ ಮಠದ ಜಾಗ ದಾನ ಕೊಟ್ಟ ವಿಷಯುವನ್ನು ೨೧೨ ನೆಯ ನಿರೂಪವು ತಿಳಿಸುತ್ತದೆ.

ದೇಸಗತಿಗೆ ಸಂಬಂಧಪಟ್ಟವರು ಸುರಳೇಶ್ವರದ ಗದ್ದೆ ಮೂಡೂರು ಜಮೀನು ಕಸಬೆಯ ತೋಟದ ಒಳಗಿನ ಭೂಮಿ ಹಿರೂರು ಹೊಲ, ಗೊಂದಿ ಮತ್ತು ನಾಗನೂರು ಜಮಿನುಗಳನ್ನು ದಾನಕೊಟ್ಟ ವಿಷಯವನ್ನು ೨೧೩ರಿಂದ ೨೨೦ ರವರೆಗಿನ ದಾನಪತ್ರಗಳು ತಿಳಿಸುತ್ತವೆ.

## G ಸಿಂಧನೂರು ದೇಸಾಯಿ

ಸಿಂಧದನೂರ ದೇಸಾಯರು ಯಜುರ್ವೇದಾಂತರ್ಗತ ಬೋಧಾಯನ ಸೂತ್ರದ ಕಾಶ್ಯಪಗೋತ್ರದ ಬ್ರಾಹ್ಮಣರು ಈ ಮನೆತನದವರು.

ಗದಗು, ಶಿರೂರು, ನೀರಲಗಿ, ಕುರ್ತಕೋಟೆ, ಹವೇಲಿ, ಹಿರೇಕೊಪ್ಪ, ಲಕ್ಕುಂಡಿ, ಕಡೆಯಣ, ಕಣಗಿನಹಾಳುಗಳಲ್ಲಿ ಜಮಿನುಗಳನ್ನು ದಾನಕೊಟ್ಟ ವಿವರವನ್ನು ೨೨೧ರಿಂದ ೨೨೯ ರವರೆಗಿನ ದಾನಪತ್ರಗಳು ತಿಳಿಸುವುವಲ್ಲದೇ ೨೨೬ನೆಯ ದಾನಪತ್ರವು ಬಹದ್ದರ ವೆಂಕಪ್ಪಯ್ಯನವರು ಎಲೆಶಿರೂರ ಮಜರೆ ವೆಂಕಟಾಪುರ ಗ್ರಾಮುವನ್ನು ದಾನ ಕೊಟ್ಟ ವಿಷಯುವನ್ನು ತಿಳಿಸುವುದೊಂದು ವಿಶೇಷವಾಗಿದೆ.

## H ಇತರೆ

ಈ ವಿಭಾಗದಲ್ಲಿ ದೇಶಕುಲಕರ್ಣಿ, ನಾಡಗಣಿತ, ನಾಡಕುಲಕರ್ಣಿ ಮುಂತಾದವರ ದಾನಪತ್ರಗಳು ೨೩೦ರಿಂದ ೨೩೯ರ ವರೆಗೆ ಇವೆ. ಚಿನ್ನೀಕಟ್ಟೆ, ಎಳವಟ್ಟೆ, ಅಜ್ಜಾಪುರ, ಚಿಕ್ಕಬೂದಿಹಾಳು, ಅಗಸರಕೊಪ್ಪ ಸವಶಿ, ಹಾವೇರಿ, ಕರಮಡಿ, ಹೆಬ್ಬಳ್ಳ, ಬೆನಕನಕೊಪ್ಪಗಳಲ್ಲಿ ಅವರುಗಳು ಜಮಿನುಗಳನ್ನು ದಾನ ಕೊಟ್ಟಿರುವುದನ್ನು ಈ ಪತ್ರಗಳು ವಿವರಿಸುತ್ತವೆ.

———

## ಆರನೆಯ ಭಾಗ

### ಮೈಸೂರು ಧರ್ಮಪ್ರಭುಗಳು ಮತ್ತು ರಾಜ್ಯಧರರು

### A ಕಂಠೀರವ ಒಡೆಯರವರ ಆಳ್ವಿಕೆ

ಸುಪ್ರಸಿದ್ಧವಾದ ಮೈಸೂರು ಧರ್ಮಪ್ರಭುಗಳ ರಾಜವಂಶವು ದ್ವಾರಕೆಯಿಂದ ಮೈಸೂರಿಗೆ ಬಂದ ಶ್ರೀ ಯದುರಾಯ–ಕೃಷ್ಣರಾಯರೆಂಬ ಅಣ್ಣ ತಮ್ಮಂದಿರಿಂದ ಊರ್ಜಿತಗೊಳಿಸಲ್ಪಟ್ಟು ಅವರಿಂದ ಒಂಭತ್ತನೆಯವರಾದ ಶ್ರೀ ರಾಜಒಡೆಯರ ಕಾಲದಿಂದ ತುಂಬ ಅಭಿವೃದ್ಧಿ ಸ್ಥಿತಿಗೆ ಬಂದಿತು. ಈ ರಾಜಒಡೆಯರು ಶ್ರೀರಂಗಪಟ್ಟಣದಲ್ಲಿದ್ದ ತಿರುಮಲರಾಯನನ್ನು ಗದ್ದು ವಿಜಯನಗರದ ರತ್ನಸಿಂಹಾಸನವನ್ನು ಪಡೆದು 'ಕರ್ಣಾಟಕ ರತ್ನಸಿಂಹಾಸನಾಧೀಶ್ವರ'ರಾದರು. ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಲಾರಂಭಿಸಿದರು. ಅವರಿಂದ ಆರನೆಯವರಾದ ಶ್ರೀ ಕಂಠೀರವ ಮಹಾರಾಜ ಒಡೆಯರು (1704–1714) ಶ್ರೀರಂಗಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಕಡೂರು ಬಾಣಾವರ ಮುಂತಾದ ಪ್ರದೇಶವು ಅವರ ರಾಜ್ಯಕ್ಕೊಳಪಟ್ಟಿತು. ಆ ಸಂದರ್ಭದಲ್ಲಿ ಶ್ರೀಕೂಡಲೀಕ್ಷೇತ್ರದಲ್ಲಿರುವ ಶ್ರೀಗೇರೀ ಮಠಕ್ಕೆ ಸಂತೇಬೆನ್ನೂರು ಕೆಂಗನಾಯಕರಿಂದ ದಾನ ಮಾಡಲ್ಪಟ್ಟು ಬಿಜಾಪುರದ ಬಾದಶಹರೇ ಮುಂತಾದವರಿಂದ ಮುಂದುವರೆಸಲ್ಪಟ್ಟ ಬಾಣಾವರದ ಹೋಬಳಿ ಕಡೂರು ಸ್ಥಳಕ್ಕೆ ಸೇರಿದ ಲಿಂಗರಾಪುರ ಗ್ರಾಮವು ತಮಗೆ ಸೇರಿದ್ದೆಂದು ಶ್ರಿಂಗೇರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ವಿವಾದವೆಬ್ಬಿಸಿದರು. ವಿವಾದವು ದೊರೆಗಳವರೆಗೆ ತಲ್ಪಿದಾಗ ಸಮ್ಮುಖದ ವಿದ್ವಾಂಸರಿಗೆ ವಿಚಾರಿಸಿ ತೀರ್ಪುಕೊಡಲು ತಿಳಿಸಲಾಗಿ ಕೂಡಲೀ ಕ್ಷೇತ್ರದಲ್ಲಿರುವ ಶ್ರಿಂಗೇರೀ ನರಸಿಂಹ ಭಾರತೀಸ್ವಾಮಿಗಳವರ ಕಡೆಯವರು ಲಿಖಿತ ಭುಕ್ತಿ ಸಾಕ್ಷಿ ತೋರಿಸಿದ್ದರಿಂದ ಈ ಗ್ರಾಮವು ಅವರಿಗೆ ಸೇರಿದ್ದೇ ವಿನಹಾ ಶ್ರಿಂಗೇರೀ ಕ್ಷೇತ್ರದಲ್ಲಿರುವ ಶ್ರಿಂಗೇರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರಿಗೆ ಸೇರಿದ್ದಲ್ಲವೆಂದು ತೀರ್ಪುಕೊಟ್ಟರು. ಈ ನಿರ್ಣಯದಂತೆ ಜಾರಿಗೆ ತರಲು ದಳವಾಯಿ ಬಸವರಾಜಯ್ಯನು ಚನ್ನರಾಯಪಟ್ಟಣದ ಮಲ್ಲರಾಜನಿಗೆ ನಿರೂಪಿಸಿರುವ ವಿಷಯವು ಈ ವಿಭಾಗದ ಮೊದಲನೆಯ ಲೇಖನದಿಂದ ತಿಳಿಯುತ್ತದೆ.

### B ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆ

ಎರಡನೆಯ ಪತ್ರವು ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆ (1734–1766) ಯಲ್ಲಿ ಕಳಲೆ ನಂಜರಾಜಯ್ಯನು ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ಶ್ರೀರಂಗಪಟ್ಟಣಕ್ಕೆ ಬರಲು ಕೊಟ್ಟ ರಹದಾರಿಯಾಗಿದೆ.

### C ನವಾಬ್ ಹೈದರಲಿ ಖಾನರವರ ಆಳ್ವಿಕೆ

ಮೈಸೂರು ರಾಜ್ಯದ ಸರ್ವತೋಮುಖವಾದ ಪುರೋಭಿವೃದ್ಧಿಗೆ ಕಾರಣರಾದ ನವಾಬ್ ಹೈದರಲ್ಲೀ ಖಾನ್ ಬಹದ್ದೂರ್‌ರವರು ಬಿದನೂರನ್ನು (ನಗರ) ಗೆದ್ದಮೇಲೆ ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ ಅಲ್ಲಿಗೆ ದಯಮಾಡಿಸಲು ವಿಜ್ಞಾಪನ ಪತ್ರಿಕೆಯನ್ನು ಮತ್ತು ರಹದಾರಿಯನ್ನು ಕಳುಹಿಸಿರುವ ವಿಷಯವು ಅನುಕ್ರಮಾಂಕ ೩೪೨, ೩೪೩ ಮತ್ತು ೩೪೪ ರಿಂದ ತಿಳಿಯುತ್ತದೆ.

ಅನುಕ್ರಮಾಂಕ ೩೪೫ ಮತ್ತು ೩೪೬ ನೇ ಲೇಖನಗಳೂ ಸಹ ನವಾಬ್ ಹೈದರಲ್ಲೀಖಾನರವರು ಶ್ರೀಶ್ರೀಗಳವರ ದೇಶಸಂಚಾರಕ್ಕೆ ಕೊಟ್ಟ ರಹದಾರಿಗಳೇ ಆಗಿವೆ.

ಹೈದರಲ್ಲೀ ಖಾನ್‌ರವರ ಪ್ರಧಾನಿ ವೆಂಕಪ್ಪಯ್ಯನವರು ಅನುಕ್ರಮಾಂಕ ೩೪೭, ೩೪೮ ಮತ್ತು ೩೪೯ ನೇ ಪತ್ರಗಳು ಪೆನಗೊಂಡೆ ಸ್ಥಳದ ಹತ್ತಿರವಿರುವ ಜೂಲಕುಂಟೆಗ್ರಾಮದ ಮುಂದುವರಿಕೆಯನ್ನು ಮತ್ತು ಕೆಲವು ಗ್ರಾಮಗಳಲ್ಲಿ ಮಠಕ್ಕೆ ದೀಪಾರಾಧನೆ ಕಾಣಿಕೆಗಳ ಸಲ್ಲಿಸುವಿಕೆಯನ್ನೂ ನಿರೂಪಿಸುತ್ತವೆ.

೩೫೦ನೆಯ ಪತ್ರವು ನವಾಬ್ ಹೈದರಲ್ಲೀ ಖಾನ್‌ರವರ ಪುತ್ರ ಪ್ರೇಮಕ್ಕೆ ಪಾತ್ರನಾದ ಸೇಖ ಆಯಾಜಿ ಸಾಹೇಬರ ರಹದಾರಿಯಾಗಿದೆ.

## D ಟಿಪ್ಪೂ ಸುಲ್ತಾನ್‌ರವರ ಆಳ್ವಿಕೆ

ಟಿಪ್ಪೂಸುಲ್ತಾನರವರ ಆಡಳಿತ ಕಾಲದಲ್ಲಿನ ಅನುಕ್ರಮಾಂಕ ೩೫೧, ೩೫೨ ಮತ್ತು ೩೫೩ ನೇ ನಂಬರಿನ ಮೂರು ಪತ್ರಗಳಲ್ಲಿ ಮೊದಲನೆಯದು ರಾಜ್ಯದಲ್ಲಿ " ಕೂಡಲಿ ಶ್ರಿಂಗೇರೀ ಸ್ವಾಮಿಗಳು ತಮ್ಮ ಶಿಷ್ಯ ವಗೈರೆಯವರಿಂದ ಪೂರ್ವ ಕಾಲದಿಂದಲೂ ಪೂಜೆ ವಗೈರೆ ಸ್ವೀಕರಿಸುತ್ತಿದ್ದರು. ಈಗ ಶ್ರಿಂಗೇರೀ ಸ್ವಾಮಿಗಳು ಆಚಾರ–ವಿಚಾರ ಪ್ರಾಯಶ್ಚಿತ್ತಾದಿಗಳ ವಿಚಾರಣೆ ನಡೆಸುತ್ತಿದ್ದಾರೆಂದು ತಿಳಿದು ಬಂದಿದೆ. ಪೂರ್ವದಿಂದ ಈ ಇಬ್ಬರು ಸ್ವಾಮಿಗಳವರಲ್ಲಿ ಯಾವ ರೀತಿ ನಡೆಯುತ್ತಿತ್ತೆಂಬುದನ್ನು ಗ್ರಾಮದ ಪೂರ್ವಿಕರನ್ನು ವಿಚಾರಿಸಿ ಹಿಂದಿನಿಂದ ಹೇಗೆ ನಡೆಯುತ್ತಿತ್ತೋ ಹಾಗೆಯೇ ಅಮಲಿನಲ್ಲಿ ತರುವುದು" ಎಂಬ ನಿರೂಪಣೆಯನ್ನು ತಿಳಿಸುವುದಲ್ಲದೇ ಉಳಿದೆರಡು ಸರ್ಕಾರದಿಂದ ಜಪ್ತಿಮಾಡಲ್ಪಟ್ಟ ಮೂಗಿನಗೊಂದಿ ಬಗ್ಗಡನಹಾಳು, ಕಾಮಲಾಪುರ ಮತ್ತು ಮರಡಿ ಎಂಬ ಗ್ರಾಮಗಳನ್ನು ಬಿಡುಗಡೆ ಮಾಡಿ ಮಠಕ್ಕೆ ಪ್ರತ್ಯರ್ಪಿಸುವ ವಿಷಯ ತಿಳಿಸುತ್ತವೆ.

## E ದಿವಾನ್ ಪೂರ್ಣಯ್ಯನವರ ಆಳ್ವಿಕೆ

ದಿವಾನ್ ಪೂರ್ಣಯ್ಯನವರ ಹದಿನೆಂಟು ೩೫೪–೩೬೧ ಸನ್ನದುಗಳಲ್ಲಿ ಮೊದಲನೆಯ ಮೂರು (೩೫೪, ೩೫೫, ೩೫೬,) ಸನ್ನದುಗಳು ಹರಪನಾಹ ಶುಭೆಯ ಮೈಲಾರ ಪಂಚಗ್ರಾಮ, ಹರಿಹರ, ಕಾರ್ಲಹಳ್ಳಿ, ಶುಭೆಯ ಬಳ್ಳಾಪುರ ಮತ್ತು ಚಿತ್ರದುರ್ಗ ಶುಭೆಯ ಹನುಮನಹಳ್ಳಿ ಮತ್ತು ಮಾರಬಗಟ್ಟೆ ಗ್ರಾಮಗಳ ಸರಕಾರದ ಜಪ್ತಿ ಬಿಡುಗಡೆಯನ್ನು ಮತ್ತು ಅವುಗಳ ಪುನರ್ದಾನವನ್ನು ತಿಳಿಸುತ್ತವೆ.

ನಾಲ್ಕನೆಯ (೩೫೭)ದು ಶ್ರೀ ಶ್ರೀ ಗಳವರ ದೇಶ ಸಂಚಾರಕ್ಕಾಗಿ ಅರಮನೆ ಸೀಮೋಗಡಿಗಳ ಅಮಲ್‌ದಾರರಿಗೆ ಕೊಟ್ಟು ರಹದಾರಿಯಾಗಿದೆ. (೩೫೮, ೩೫೯, ೩೬೦) ಐದು ಆರು ಮತ್ತು ವಿಜ್ಞಾಪನ ಪತ್ರಗಳಿಂದ ಪೂರ್ಣಯ್ಯನವರು ಶ್ರೀಗಳವರಿಗೆ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿ ಖಿಲ್ಲತ್ತುಗಳನ್ನು ಸಮರ್ಪಿಸಿದ್ದು ತಿಳಿಯುತ್ತದೆ.

ಅನುಕ್ರಮಾಂಕ ೩೬೧ ನೆಯ ಪತ್ರವು ಪೂರ್ಣಯ್ಯನವರು ನಗರ ಶುಭೇದಾರ ರಾಮರಾಯರಿಗೆ "ಕೂಡಲೀ ಮತ್ತು ಶ್ರಿಂಗೇರೀ ಮಠಗಳ ಆಚಾರ ವಿಚಾರ ವ್ಯವಹಾರವು ಪೂರ್ವದಿಂದ ನಡೆದುಕೊಂಡುಬಂದಂತೆ ಮುಂದುವರೆಸಲ್ಪಡಬೇಕೆಂದು" ಕೊಟ್ಟ ನಿರೂಪ.

೩೬೨ ನೆಯ ಪತ್ರವು ಪೂರ್ಣಯ್ಯನವರು ಶ್ರೀ ಶ್ರೀಗಳವರಿಗೆ ಧಾರವಾಡ ಪ್ರಾಂತ ಸಂಚಾರ ಮಾಡಲು ರಹದಾರಿಕೊಟ್ಟ ಅಂಶದ ವಿಜ್ಞಾಪನಾ ಪತ್ರಿಕೆ.

೩೬೩ ನೆಯ ಪತ್ರವು ಶಿವಮೊಗ್ಗ ಅಮೀರ್‌ದಾರ್ ಸರ್ವೋತ್ತಮರಾಯರ ಲೇಖನದಂತೆ ಶೆಟ್ಟಿಹಳ್ಳಿ, ಜಾವಳ್ಳಿ ಗ್ರಾಮಗಳನ್ನು ಶ್ರೀಮಠಕ್ಕೆ ಸರ್ವಮಾನ್ಯವಾಗಿ ಮುಂದುವರೆಸಿರುವ ನಿರೂಪ.

೩೬೪ ನೆ ವಿಜ್ಞಾಪನಾ ಪತ್ರವು ಶ್ರೀಗಳವರ ಶ್ರೀಮುಖಕ್ಕೆ ಪೂರ್ಣಯ್ಯನವರು ತಾವು ಆ ಪ್ರಾಂತ ಬರುವುದನ್ನು ವಿಜ್ಞಾಪಿಸಿಕೊಂಡ ಲೇಖನವಾಗಿದೆ.

ಪೂರ್ಣಯ್ಯನವರು ಬಂದು ಶ್ರೀಗಳವರ ದರ್ಶನ ಪಡೆದು ಶ್ರೀಮಠದಲ್ಲಿ ವಿಶೇಷವಾಗಿ ಅನ್ನದಾನ ನಡೆಯುತ್ತಿರುವುದನ್ನು ಕಂಡು ವರ್ಷಕ್ಕೆ ಎರಡು ಸಹಸ್ರ ರೂಪಾಯಿ ವರ್ಷಾಶನವನ್ನು ಮಾಡಿಕೊಟ್ಟು ಆ ಬಗ್ಗೆ ನಗರ ಶುಭೇದಾರ ರಾಮರಾಯರಿಗೆ ಕೊಟ್ಟ ನಿರೂಪವನ್ನು ೩೬೫ ನೆಯ ಲೇಖನವು ತಿಳಿಸುತ್ತದೆ.

೩೬೬ ನೆಯ ಲೇಖನ ಕೂಡಲೀ ಸ್ವಾಮಿಗಳವರು ದೇಶ ಸಂಚಾರ ಮಾಡಬೇಕೆಂದೂ ಶ್ರಿಂಗೇರಿಯಲ್ಲಿನ ಸ್ವಾಮಿಗಳು ಶ್ರೀ ಶಾರದಾ ಪೂಜೆ ಮಾಡಿಕೊಂಡು ಶ್ರಿಂಗೇರಿಯಲ್ಲಿ ಇರಬೇಕೆಂದೂ ಆಗಿದ್ದ ಪೂರ್ವನಿಬಂಧನೆಯನ್ನು ಜಾರಿಗೆ ತರಲು ಏರ್ಪಾಡು ಮಾಡಿದ ವಿಷಯವನ್ನು ಶ್ರೀಗಳವರಿಗೆ ಪೂರ್ಣಯ್ಯನವರು ವಿಜ್ಞಾಪಿಸಿರುತ್ತಾರೆ.

೩೬೭, ೩೬೮ ಮತ್ತು ೩೬೯ ನೆಯ ಪೂರ್ಣಯ್ಯನವರು ಮೂರು ವಿಜ್ಞಾಪನಾ ಪತ್ರಿಕೆಗಳಿಂದ ಶ್ರೀಗಳವರು ತಮ್ಮ ಶಿಷ್ಯರಲ್ಲಿ ಆಚಾರ ವಿಚಾರ ಮಾಡಲು ತಮ್ಮ ಒಪ್ಪಿಗೆಯನ್ನು ಶ್ರೀಮಠಕ್ಕೆ ತರುವ ಅಕ್ಕಿ ಬೇಳೆ ಮುಂತಾದ ಜಿನಸುಗಳಿಗೆ ಸುಂಕದ ವಿನಾಯಿತಿಯನ್ನು ಶ್ರೀಗಳವರು ಪೇಶ್ವೆ ಬಾಜೀರಾಯರಿಗೆ ದರ್ಶನಕೊಟ್ಟು ಅವರ ಸತ್ಕಾರವನ್ನು ಸ್ವೀಕರಿಸಿದ್ದನ್ನು ತಿಳಿಸುತ್ತವೆ.

ಪೂರ್ಣಯ್ಯನವರು ತಮ್ಮ ದಿವಾನ್ ಪದವಿಯಿಂದ ವಿಶ್ರಾಂತರಾಗುವಾಗ ತಾವು ಶ್ರೀಮಠಕ್ಕೆ ಮಾಡಿಕೊಟ್ಟಿದ್ದ ವರ್ಷಾಶನವನ್ನು ಮುಂದುವರಿಸಲು ಶ್ರೀಮನ್ಮಹಾರಾಜರವರ ನಿರೂಪವನ್ನು ಕೊಡಿಸಿದ ವಿಚಾರವು ೩೭೧ ನೆಯ ಲೇಖನದಿಂದ ತಿಳಿಯುತ್ತದೆ.

## F. ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲ

ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರವರ ನಿರೂಪ, ರಹದಾರಿ ವಿಜ್ಞಾಪನಾ ಪತ್ರಿಕೆ ಮತ್ತು ಲೇಖನಗಳಲ್ಲಿ ಮೂವತ್ತೇಳನ್ನು ಮುದ್ರಿಸಿದೆ. ಅವುಗಳಲ್ಲಿ ಮೊದಲಿನ ಐದು ನಿರೂಪ (೩೭೨, ೩೭೩, ೩೭೪, ೩೭೫, ೩೭೬) ಗಳು ಕ್ರಮವಾಗಿ ಶ್ರೀಮಠಕ್ಕೆ ಇರುವ ಪ್ರಥಮ ದರ್ಜೆಯ ಗೌರವವನ್ನೂ ಶ್ರೀ ಗಳವರ ಸಂಚಾರ ಕಾಲದಲ್ಲಿ ಮೈಸೂರು ರಾಜ್ಯದ ಪ್ರತಿಯೊಂದು ಊರಿನಲ್ಲಿಯೂ ಮೊದಲನೆಯ ದಿನ ವಿಶಿಷ್ಟ ಖರ್ಚಿನೊಡನೆ ಸರ್ಕಾರದ ಭಿಕ್ಷೆ ನಡೆಸಬೇಕೆಂಬ ಆದೇಶವನ್ನೂ, ಕೂಡಲಿಯಲ್ಲಿ ಚಾತುರ್ಮಾಸ್ಯ ಮಾಡಿದ ಶ್ರೀಗಳವರಿಗೆ ಸೌಲಭ್ಯಗಳನ್ನೊದಗಿಸಬೇಕೆಂಬ ಅಪ್ಪಣೆಯನ್ನೂ ತಿಳಿಸುತ್ತವೆ.

೩೭೭ ನೆಯ ವಿಜ್ಞಾಪನಾ ಪತ್ರಿಕೆಯು ಶ್ರೀಗಳವರ ಆಶೀರ್ವಾದ ಫಲಮಂತ್ರಾಕ್ಷತೆಗಳನ್ನು ಸ್ವೀಕರಿಸಿ ಮಹಾರಾಜರು ಖಿಲ್ಲತ್ತು ಕಳುಹಿಸಿಕೊಟ್ಟದ್ದನ್ನು ತಿಳಿಸುತ್ತದೆ.

ಶ್ರೀಮಠದ ಆನೆಯು ಮದವೇರಿ ಕಂಪನಿಸರಕಾರದ ಪ್ರಾಂತಕ್ಕೆ ಹೋಗಿದ್ದಲ್ಲಿ ಅದನ್ನು ಹಿಡಿತಂದು ಮಾದವಿಳಿಸಿ ಶ್ರೀಸ್ವಾಮಿಗಳವರ ಸ್ವಾಧೀನ ಮಾಡಬೇಕೆಂದು ಗುಮ್ಮ ನಾಯಕನ ಪಾಳೆಯದ ಅಮಲದಾರ ಕೃಷ್ಣರಾಯರಿಗೆ ಬರೆದಿರುವುದು ೩೭೮ ನೆಯ ಲೇಖನದಿಂದ ತಿಳಿಯುತ್ತದೆ.

೩೭೯, ೩೮೦, ೩೮೧ ನೆಯ ಪತ್ರಗಳು ಕ್ರಮವಾಗಿ ಶ್ರೀಗಳವರು ಮೈಸೂರು ರಾಜಧಾನಿಗೆ ದಯಮಾಡಿಸಲು ಬರೆದ ವಿಜ್ಞಾಪನಾಪತ್ರಿಕೆ. ಆ ಬಗ್ಗೆ ಶ್ರೀಗಳವರ ಮಾರ್ಗದಲ್ಲಿ ಸಕಲ ಸೌಲಭ್ಯಗಳನ್ನೇರ್ಪಡಿಸಲು ಅರಮನೆ-ಸೀಮೆ ಗಡಿಗಳ ಅಮಿಲ್ ಕಿಲ್ಲೇದಾರರಿಗೆ ಕೊಟ್ಟ ರಹದಾರಿ ಮತ್ತು ಶ್ರೀಗಳವರು ನಂಜನಗೂಡಿನಲ್ಲಿ ಚಾತುರ್ಮಾಸ್ಯ ಮಾಡಿದಾಗ ಸೌಲಭ್ಯ ಕಲ್ಪಿಸಲು ಆಜ್ಞೆಯನ್ನು ತಿಳಿಸುತ್ತದೆ.

ಶ್ರೀಗಳವರು ಶ್ರೀಮನ್ಮಹಾರಾಜರವರ ವಿಜ್ಞಾಪನೆಯಂತೆ ಮೈಸೂರು ರಾಜಧಾನಿಗೆ ದಯಮಾಡಿಸಿದ ವೃತ್ತಾಂತವನ್ನು ಶ್ರೀಮಠದ ಆಗಿನ ದಿನಚರಿಯಲ್ಲಿ ಈ ಮುಂದೆ ಕಾಣಿಸುವಂತೆ ಬರೆದಿಡಲಾಗಿದೆ:—

### ಮೈಸೂರು, ನಂಜನಗೂಡಿಗೆ, ಹೋದದ್ದು

ಶ್ರೀ ನರಸಿಂಹಭಾರತಿ ಸ್ವಾಮಿಗಳವರ ಸನ್ನಿಧಾನಂಗಳಿಗೆ

ಅಂಗೀರಸ ಸಂವತ್ಸರದ ಜೇಷ್ಠ ಬಹುಳ ೭ ಇಂದುವಾರದಲ್ಲಿ ಕೃಷ್ಣರಾಜ ವಡೆಯರವರು ಬರಕೊಂಡ ಬಿನ್ನಹಪತ್ರ. ಮೈಸೂರಿಗ ಚಿತ್ತೈಸಬೇಕಂತ ರಹದಾರಿ ಕಳುಹಿಸಿದೆವೆಂತೆಲ್ಲಾ ಸಹಾ :—

**ರಹದಾರೀ**: –ಕೃಷ್ಣರಾಜವಡೆಯರವರು ಅಂಗೀರಸ ಸಂವತ್ಸರದ ಜ್ಯೇಷ್ಠ ಬಹುಳ ೩ ತಾರೀಖು ೭ನೇ ಮಾಹೆ ಜುಲಾಯಿ ಸನ್ ೧೮೧೨ ನೇ ಯಿಸವಿ.

ಯೀಪ್ರಕಾರಬಂದ ಬಿನ್ನಹ ಪತ್ರರಹದಾರೀ ಸಹ ಬಂದದ್ದರಿಂದ ಶ್ರೀ ಸನ್ನಿಧಾನದಲ್ಲೂ ವೋದಿಕೆ ಆಗಿ ಮೈಸೂರ ಸಂಸ್ಥಾನಕ್ಕೆ ದಿಗ್ವಿಜಯ ಮಾಡತಕ್ಕ ಬಗ್ಗೆ, ಗಜ, ತುರಗ, ಆಂದೋಳಿಕಾ, ಛತ್ರ, ಪತಾಕಿ, ಮುಂತಾದ ಸರ್ವಸನ್ನಹ ದಿಂದಾ ತೆರಳಿದ್ದು ಶಕವರ್ಷ ೧೭೩೪ ನೇಯ ಅಂಗೀರಸ ಸಂವತ್ಸರದ ಆಷಾಢ ಶುದ್ಧ ೬ ಮಂಗಳವಾರದಲ್ಲಿ ಹೊರಟು ಹೊಳೆಹೊನ್ನೂರ ವೊದಲಾಗಿ ಮಜಲಿನ ವಿವರ :—

1 ಹೊಳೆಹೊನ್ನೂರ ಮಜಲು 1ಕ್ಕೆ ರಹದಾರಿ, ಪ್ರಕಾರ ಶುಭೇದಾರ ಕೃಷ್ಣರಾಯರ ಬಿಕ್ಷಾ . . . . ೩೦೦ ಬ್ರಾಹ್ಮಣ ಜನರು ೨೦೦ ಶೂದ್ರಜನಾ ಚಾಕರಿಯವರು ಜುಮ್ಲಾ (೫೦೦) ಆನೆ, ಒಂಟೆಗಳು, ಕುದುರೆಗಳು, ಭೋವಿಗಳು (೬೦) ಯೀಪರಿವಾರಕ್ಕೆ . . . . ಭಿಕ್ಷಾ ಪಾದಪೂಜಾ ಚರಣಕಾಣಿಕೆ, ಆನೆ, ಕುದುರೆ, ವಂಟೆ ಮುಂತಾದ್ದಕ್ಕೆ ಸರಭರಾಯ ಮುಂತಾಗಿ ಸಕಲ ಸಾಹಿತ್ಯವನ್ನು ಅನುಕೂಲ ಮಾಡಿಸಿಕೊಟ್ಟಿತು. ಮುಂದೆ ಶುದ್ಧ ೭ಯ ದಿವಸ ಬೆಂಕೀಪುರಕ್ಕೆದಿಗ್ವಿಜಯ ಮಾಡಿದರು :—

೧ ಶುದ್ಧ ೭ಯಲ್ಲೂ ಬೆಂಕೀಪುರದ ಮಜಲು ೧ಕ್ಕೆ ಶುಭೇದಾರ ಕೃಷ್ಣರಾಯರ ಕಡೆ ಲಿಂಗೋಪಂತನ ಮುಖಾಂತರ ಭಿಕ್ಷಾ 1—

೧ ಶುದ್ಧ ೮ ಯಲ್ಲೂ ತರೀಕೆರೆ ಮಜಲು ೧ಕ್ಕೆ ಅಮಲದಾರ ಭೂನಕ್ಷೋಣಿ ರಾಮಪ್ಪನ ಮುಖಾಂತರ ಸರಕಾರದ ಭಿಕ್ಷಾ ೧—

೧ ಶುದ್ಧ ೯ರಲ್ಲೂ ಕಡೂರ ಮಜಲು ೧ಕ್ಕೆ ಸುಭೇದಾರ ನಾರಾಯಣಪ್ಪನವರ ಭಿಕ್ಷಾ . . . ೧

೧ ಶುದ್ಧ ೧೦ರಲ್ಲೂ ಭಾಣಾವರದ ಮಜಲು ೧ಕ್ಕೆ ಸುಭೇದಾರ ವೆಂಕಟರಾಯನ ಬಿಕ್ಷಾ ೧ . . .

೧ ಶುದ್ಧ೧೧ ರಲ್ಲೂ ಹಾರನಹಳ್ಳೀ ತಾಲೂಕು ಗಂಡಸೀಮಜಲು ೧ ಕ್ಕೆ ಶುಭೇದಾರ ವೆಂಕಟರಾಯನ ಮುಖಾಂತರ ಚರಣಕಾಣಿಕೆ ಮುಂತಾದ ಸಾಹಿತ್ಯಗಳ ಮಾಡಿಸಿಕೊಟ್ಟದ್ದರಿಂದ ನಿಂತ ಮಜಲು ೧ ಏಕಾದಶೀ ಆದ ಪ್ರಯುಕ್ತ ಭಿಕ್ಷೆಯಿಲ್ಲಾ . . . . . . . . .

೧ ಶುದ್ಧ ೧೨ರಲ್ಲೂ .... ಮಾರ್ಗವಾಗಿ ಚನ್ನರಾಯಪಟ್ಟಣಕ್ಕೆ ಮಜಲು ೧ಕ್ಕೆ ಶುಭೇದಾರ ಕಾಳೇಗೌಡನ ಮುಖಾಂತರ ಸರಕಾರದ ಬಿಕ್ಷೆ. . . . . . . .

೧ ಯೀ ಶುದ್ಧ ೧೩ ರಲ್ಲೂ ಅತ್ತಗುಪ್ಪಿ ಮಜಲು 1ದಲ್ಲ ಶುಭೇದಾರ ಲಿಂಗೇಗೌಡನ ಸರಕಾರದ ಭಿಕ್ಷಾ ೧—

೧ ಶುದ್ಧ 1೪ರಲ್ಲು ಕನ್ನಂಬಾಡಿ ಮಜಲು 1ಕ್ಕೆ ಭೂತನಕೇರಿ ಮಾಮಲೇದಾರ ಚನ್ನೇಗೌಡನ ಮುಖಾಂತರ ಸರಕ್ಕಾರದ ಭಿಕ್ಷಾ 1 . . . . . . . .

1 ಶುದ್ದ 15ರಲ್ಲೂ ಬಲಮುರೀ ಮಜಲು 1ಕ್ಕೆಯಿದು ಕಾವೇರಿತೀರಾ ಮಹಾಕ್ಷೇತ್ರವಾದ್ದರಿಂದ ಚಾತುಮಾಸ್ಯ ಸಂಕಲ್ಪಸನ್ನಿಹಿತವಾಗಿ ಪೌರ್ಣಿಮಿಯೂ ಕೂಡಿದ್ದರಿಂದಲೂ ಯೀ ಸ್ಥಳದಲ್ಲ ನಿಲ್ಲುವದಕ್ಕೆ ಮುಂದೆ ಕೃಷ್ಣ ರಾಜ ಮಹಾರಾಜರಿಗೆ ದರ್ಶನ ಕೊಡತಕ್ಕ ಬಗ್ಗೆ ದಿಗ್ವಿಜಯ ಮಾಡುವದರಿಂದಾ ಯೀ ಸ್ಥಳದಲ್ಲ ಸಂಕಲ್ಪಕ್ಕೆ ಕೂಡುವದಕ್ಕೆ ಬಾರದೇ ವಿಶ್ವೇಶ್ವರ ಸ್ಮೃತಿಯಲ್ಲಿ ಬಹುಳ ಪಂಚಮೀ ಪರ್ಯಂತರ ಅದೀತೆಂದು ನಿರ್ಣಯ ಕಂಡದ್ದರಿಂದ ಕ್ಷೌರಕರ್ಮ ಮಾತ್ರ ಈ ಸ್ಥಳದಲ್ಲ ತೀರಿಸಿಕೊಂಡು ಆ ದಿವಸ ಈ ಕ್ಷೇತ್ರದಲ್ಲಿಯೇ ವಾಸವಾಗಿಇದ್ದು ಯೀ ಬಹುಳ ೧ಯ ದಿವಸವೂ ಅಲ್ಲಿಯೇ ವಾಸವಾಗಿ ಇದ್ದು ಮುದ್ದುರಾಜಯ್ಯ ಅರಸಿನವರ ಮುಖಾಂತರ ಸರಕಾರದ ಬಿಕ್ಷಾ ಪಾದ ಪೂಜೆ ತೀರಿಸಿಕೊಂಡು ಮಜಲು 1ಕ್ಕೆ—

ಯೀ ಬಹುಳ ೨ ಯಲ್ಲೂ ಬಲಮುರಿ ಕ್ಷೇತ್ರದಿಂದ ದಿಗ್ವಿಜಯ ಮಾಡಿ ಕಳಸವಾಡೀ ಅಗ್ರಹಾರಕ್ಕೆ ಚಿತ್ತೈಸಿ ಈ ಬಹುಳ ಚತುರ್ಥೀ (೪) ಪರ್ಯಂತರ ದಿವಸ ೩ ವಾಸವನ್ನು ಮಾಡಿ ಸಂಕಷ್ಟಚತುರ್ಥಿ ಮಹಾಗಣಪತಿ ವ್ರತಾಚರಣೆ ಮಾಡಿ ಪ್ರದೋಷ ಕಾಲದಲ್ಲ ದೇವರ ಆರಾಧನೆ ಮಾಡುವ ಕಾಲದಲ್ಲಿ ಈ ಸ್ಥಳಕ್ಕೆ ಶ್ರೀಗಳವರು ಚಿತ್ತೈಸಿದ

ವರ್ತಮಾನವನ್ನು ಮಹಿಸೂರ ಕೃಷ್ಣರಾಜಮಹಾರಾಜರವರು ತಿಳಿದು, ಪರಮ ಸಂತೋಷಚಿತ್ತರಾಗಿ ದರ್ಶನಾಪೇಕ್ಷೆಯಿಂದ ಕಳಸವಾಡಿಗೆ ಚಿತ್ತೈಸತಕ್ಕ ಬಗ್ಗೆ ಹೊರಟದ್ದರಿಂದ ಸಂಗಡ ಬಂದ ಸಮ್ಮುಖ ವಿದ್ವಾಂಸರುಗಳು—

ಶ್ರಿಂಗೇರಿ ಮಠದ ಲಿಂಗಾಶಾಸ್ತ್ರಿಗಳು ಇವರು ರಾಜಪುರೋಹಿತರು, ಪೂನಾದ ರಾಮಚಂದ್ರಶಾಸ್ತ್ರಿಗಳು (ಸಮ್ಮುಖ ವಿದ್ವಾಂಸರುಗಳು ಕಣಿವೆಕೆಳಗಿನವರು), ಶ್ರಿಂಗೇರಿಯವರ ಕಡೆಯ ಸದಾಶಿವಶಾಸ್ತ್ರಿಗಳು, ಕಾಶೀನಾಥಶಾಸ್ತ್ರಿಗಳು, ಅಪ್ಪಯ್ಯಶಾಸ್ತ್ರಿಗಳು, ನಯನಶಾಸ್ತ್ರಿಗಳು, ಗುಂಜಾನರಸಿಂಹಶಾಸ್ತ್ರಿಗಳು, ಕೋದಂಡಶಾಸ್ತ್ರಿಗಳು, ಗೋಪಾಲಜೋಯಿಸರು, ದಾಸಾಜೋಯಿಸರು, ಶ್ರೀರಂಗಾಚಾರ್ಯರು, ಶ್ರೀನಿವಾಸಾಚಾರ್ಯರು ಚಕ್ರವರ್ತಿ ಆಚಾರ್ಯರು, ಆನಂದೂರ ವರದಾಚಾರ್ಯರು, ಪರಕಾಲೀಸ್ವಾಮಿಗಳ ಮಠದ ಮೊಕ್ತಾಮಿ ಶ್ರೀನಿವಾಸಾಚಾರ್ಯರು, ಬೆಂಗಳೂರ ಗೋಪಾಲಾಚಾರ್ಯರು, ಧರ್ಮಾವಾರದ ಗಂಗಾಧರಶಾಸ್ತ್ರಿ, ಗೋದಾವರೀ ವೆಂಕಟಶಾಸ್ತ್ರೀ, ಅಂತೂ ಜನಾ ೧೯.

## ಸಾಮಾಜಿಕರು

ದಿವಾನಕಚೇರೀ ಭಕ್ಷೀ ರಾಮರಾಯರು, ತೋಶಿಖಾನಿ ಗಂಗಾಧರರಾಯರು, ಕರಣೀಕ ಸಲಾಂದಾದ ಸುಬ್ರಾಯ, ಕರಣೀಕ ಖಂಡೇರಾಯ—ಕರಣೀಕ ಬಾಬೂರಾಯ, ಪೂರ್ಣಯ್ಯನವರ ಅಳಿಯ ರಾಮಪ್ಪಯ್ಯ, ಕರಣೀಕ ನಾರಾಯಣರಾಯ, ಕಂದಾಚಾರ ಬಕ್ಷಿ ಥೋಂಡರಾಯ, ವಿಾರವಿಾರಾಕಚೇರಿ ಶ್ರೀನಿವಾಸರಾಯ, ವೆಂಕಟಕೃಷ್ಣಪ್ಪ, ಸ್ವಾರಕಚೇರಿ ಭಕ್ಷೀ ಭೀಮರಾಯ ಕಿಲ್ಲೇಕಚೇರಿ ತಿಪ್ಪಯ್ಯ, ನಗರಕಚೇರಿ ಭಕ್ಷಿ ಕಾಬೇಪುರದ ಪೋಪಯ್ಯನ ಮಗ ಬಾಲಕೃಷ್ಣರಾಯ, ಅರುಣಾಚಲ ಪಂತರ ಮಗಾದಾಸೋಪಂತ.

## ಅರಸುಮಕ್ಕಳು

ನಾಳಯ್ಯ ಅರಸು ಕೃಷ್ಣಯ್ಯ ಅರಸು, ಮುದಿರಾಜಯ್ಯ ಅರಸು, ಚಲ್ವಪ್ಪಯ್ಯ ಅರಸು ಮೂಗೂರುಅರಸು.

ಈ ಪ್ರಕಾರವಾಗಿ ಸಮ್ಮುಖ ವಿದ್ವಾಂಸರುಗಳು, ಸಾಮಾಜಿಕರು, ಅರಸು ಮಕ್ಕಳು, ನಗಾರೀ, ನಿಶಾನಿ, ಸಮಸ್ತ ಸನ್ಮಾನ, ಮಛಾ, ಕೂರ್ಮ, ವರಹ, ಗಂಡಭೇರುಂಡ, ಹನುಮಧ್ವಜ, ಗರುಡಧ್ವಜ ಮೊದಲಾದ ಬಿರುದುಗಳಿಂದ ನಾನಾ ವಿಧವಾದ್ಯ ಸಮೇತ, ರಥಾರೂಢರಾಗಿ ಕೃಷ್ಣರಾಜಮಹಾರಾಜರು ಶ್ರೀಗಳವರ ಚರಣ ಸನ್ನಿಧಿಗೆ ಬಂದು ವಂದನೆಯಮಾಡುವುದುಗರೆಯಾಗಿ ತಂದ ತಹಲಜೋಡಿ ೧, ಫಲ ಪುಷ್ಪ ಚರಣಕಾಣಿಕೆ ಸಮರ್ಪಿಸಿ ಶ್ರೀ ವಿದ್ಯಾಶಂಕರಸ್ವಾಮಿ ಸಂದರ್ಶನ ಮಾಡಿ ಶ್ರೀಮಠದ ವಿದ್ವಾಂಸರು ಸಾಮಾಜಿಕರು, ವಾದ್ಯವಿಶೇಷ ವೇದಘೋಷಣ ಸುವರ್ಣ, ರಜತ, ಮೌಕ್ತಿಕ ನವರತ್ನಗಳಿಂದ ನಿರ್ಮಿಸಿದ ಮಂಟಪದ ಆಭರಣ ದೇವರ ಪೂಜಾ ವಿನಿಯೋಗ ಯಾವತ್ತೂ ನೋಡಿ ಪರಮ ಸಂತೋಷಚಿತ್ತರಾಗಿ ಕೃತಾರ್ಥರಾದೆವೆಂದು ಅರಿಕೆ ಮಾಡಿಕೊಳ್ಳಲಾಗಿ ಶ್ರೀಗಳವರು ನಿರೂಪಿಸಿದ್ದು ತಮ್ಮದು ಧರ್ಮಸಂಸ್ಥಾನ ಅನೇಕವಾಗಿ ದೇವರ ಬ್ರಾಹ್ಮಣರ ಪೂಜೆಗಳನ್ನು ಪೂರ್ವಾರಭ್ಯ ಮಾಡಿಯಿದ್ದೀರಿ ಆದ್ದರಿಂದ ದುಷ್ಟನಿಗ್ರಹವಾಗಿ ಪೂರ್ವಪ್ರಕಾರ ಸಂಸ್ಥಾನವು ತಮ್ಮ ಸ್ವಾಧೀನವಾಯಿತು. ಯೀ ದೇಶದಲ್ಲ ಸಂಸ್ಥಾನಿಕರ ಕರಿಃ ಪೂಜೆಗಳನ್ನು ಮಾಡುವಂಥ ಪ್ರಭುಗಳಿಲ್ಲದ ದೇಶಕ್ಕೆ ಬಂದು ಮಾಡುವದೇನು ? ಪೂರ್ವಪ್ರಕಾರ ತಮಗೆ ಸಂಸ್ಥಾನಾಧಿಪತ್ಯವಾಗಬೇಕು.

ಆಗ್ಯೆ ಬಂದು ದರ್ಶನ ಕೊಡಬೇಕೆಂದು, ಈಶ್ವರನನ್ನು ಕುರಿತು ಪ್ರಾರ್ಥನೆ ಮಾಡುತ್ತಾಯಿದ್ದೆವು. ಅದೇ ಪ್ರಕಾರ ಪರಮೇಶ್ವರನು ಸಂಕಲ್ಪ ಸಿದ್ಧಿಮಾಡಿಸಿದನು. ಇತೋಪಿ ಅಧಿಕವಾದಂಥಾ ಶ್ರೇಯಸ್ಸುಗಳನ್ನು ದಯಮಾಡುತ್ತಾನೆಂದು ಪೂರ್ಣ ಆಶೀರ್ವಾದವಂ ಮಾಡಿ ಫಲಮಂತ್ರಾಕ್ಷತೆಯನ್ನು ಕೊಟ್ಟದ್ದರಿಂದ ಕೃಷ್ಣರಾಜರು ಶಿರಸಾವಹಿಸಿ ವಿಜ್ಞಾಪನೆಮಾಡಿದ್ದು "ಮೈಸೂರ ಅರಮನೆಗೆ ಚಿತ್ತೈಸಿ ಪೂರ್ವಮರ್ಯಾದೆಪ್ರಕಾರ ಭಿಕ್ಷಾಪಾದಪೂಜೆ

ಗಳನ್ನು ತೆಗೆದುಕೊಂಡು ಅರಮನೆಯಲ್ಲಿ ಚರಣ ಧೂಳಿಯನ್ನು ಕೊಡಬೇಕೆಂದೂ'' .... ಅರಿಕೆ ಮಾಡಿ ಅರಮನೆಗೆ ಸ್ವಾರಿ ಚಿತ್ತೈಸಿದರು. ಆ ತರವಾಯಾ ಶ್ರೀಗಳವರು ಮಠದ ಸಿದ್ಧಾಂತಿ ಗಿರಿಜೋಯಿಸರನ್ನು ಕರೆಸಿ ಪರಾಂಬರಿಸಲಾಗಿ ಅರಮನೆಗೆ ಚಿತ್ತೈಸತಕ್ಕ ಬಗ್ಗೇನೂ ನೋಡಿ ಅರಿಕೆಮಾಡಿದ ಲಗ್ನ ಆ.ಬ.೫. ಮಂಗಳವಾರದ ದಿನಾಘಟಿಕಾವಂದಕ್ಕೆ ಸಲ್ಲುವಾ ಕರ್ಕಲಗ್ನ—ತುಲಾರಾಶಿ

ಕಳಸವಾಡಿಯಿಂದ ಮಹಿಸೂರಿಗೆ ಪ್ರಯಾಣಮಾಡಿ ಹೊರಡುವ ಸಮಯದಲ್ಲಿ ದೊರೆಗಳ ಅಪ್ಪಣೀ ಪ್ರಕಾರ ಹಸ್ತ್ಯಶ್ವ. ರಥ, ಪದಾತಿ, ಸೈನ್ಯ ಅಶೇಷ ವಿದ್ವನ್ಮಹಾಜನಂಗಳು ಸಮಸ್ತ ಸಾಮಾಜಿಕರು ಸಹ ಕರೆದುಕೊಂಡು ದಿವಾನ ರಾಮರಾಯರು, ಗಂಗಾಧರರಾಯರು, ಬಾಳೇ ಅರಸಿನವರು, ಸಹಾಬಂದು, "ಸ್ವಾಮಿ ಚಿತ್ತೈಸತಕ್ಕದ್ದೆಂದು ಅರಿಕೆ ಮಾಡಿಕೊಂಡಲ್ಲಿ ಬಹಳ ಕುತೂಹಲದಿಂದ ಹಸ್ತ್ಯಶ್ವ, ರಥ, ಪಾದಾತಿ, ಆಂದೋಳನಗಳಿಂದ ನಗಾರಿ, ಡಂಕಾ, ಚಂದ್ರವಾದ್ಯ, ಸೂರ್ಯವಾದ್ಯ, ತಾಶೀಮು, ರಪಾ, ಬಜೇಂತ್ರೀ, ಕರ್ನೀನಫಾರಿ, ಚಿನ್ನಗಾಳೀ ಮುಂತಾದವಾದ್ಯ ವಿಶೇಷದಿಂದ ಶ್ವೇತಛತ್ರ, ಮಕರ ತೋರಣ, ಕನಕ ಚಾಮರ, ಮುಂದೆ ನದವಹಿ . . . ಧವಳ ಶಂಖ ಪಂಚದೀವಿಟಿಗೆ, ಸಪ್ತದೀವಟಿಗೆ ಮುಂತಾದ ನಾನಾಬಿರುದುಗಳಿಂದ ಶ್ರೀಗಳವರು ಚಿತ್ತೈಸಿ ಮೈಸೂರ ಶಹರದ ರಾಜಬೀದಿಯಲ್ಲಿ ಅಡ್ಡ ಪಾಲಖಿಯಿಂದ ಕಿಲ್ಲೇವಳಗಣ ತ್ರಿಣೇಶ್ವರ ದೇವಸ್ಥಾನಕ್ಕೆ ಬಂದು ದೇವರ ದರ್ಶನಮಾಡಿ ಅಲ್ಲಿಂದ ಹೊರಟು ಅರಮನೆಗೆ ಬರುವ ಸಮಯದಲ್ಲಿ ಕೃಷ್ಣರಾಜರು ಅರಮನೆ ವಳಗಣ ಜಂತದ ತೊಟ್ಟಿಯಿಂದ ಮುಂದಣ ಆನೇಬಾಗಿಲು ಮಹಾದ್ವಾರದಿಂದ ಹೊರಟು ನವಬತ್ತುಖಾನೀ ಮುಂದಣ ಕೆಮ್ಮಣ್ಣುಮಟ್ಟೀ ಬೈಲಿಗೆ ಬರುವದರ ವಳಗೆ ಸ್ವಾಮಿಯವರ ಸ್ವಾರಿ ಅಲ್ಲಿಗೆ ಚಿತ್ತೈಸಿದಲ್ಲಿ ನಿರಾಜೀ ವಸ್ತ್ರವನ್ನು ಅಲ್ಲಿ ಹಾಕಿದ್ದರಿಂದ ಅದರ ಮೇಲೆ ಪೂರ್ವ ಮರ್ಯಾದಿ ಪ್ರಕಾರ ವಂದನೆ ಮಾಡಿ ಪಾಲಖೀಸಹಿತವಾಗಿ ಅರಮನೆವಳಗೆ ತೆರಳಿಸಿಕೊಂಡು ಹೋಗಿ ಅಲ್ಲಿಂದ ಶೆಜ್ಜೆ ಮೇಲಕ್ಕೆ ಚಿತ್ತೈಸಬೇಕಾದರೆ ದೊರೆಗಳೂ ಹಸ್ತಲಾಘವವನ್ನು ಕೊಟ್ಟು ಕರಕೊಂಡು ಹೋಗಿ ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜೋಪಚಾರದಿಂದ ಗುರು ಚರಣ ಪೂಜೆಯಂ ಮಾಡಿ ಸಮರ್ಪಿಸಿದ್ದು ಚರಣಕಾಣಿಕೆಯ ಬಗ್ಗಿ ರೂಪಾಯಿ ಎರಡು ಸಾವಿರ ೨,೦೦೦ ಹಳದೀ ಶಕಲ ಜೋಡಿ ೧. ಮುತ್ತಿನ ಕಂಠಿ ೧ಕ್ಕೆ ಸರ ೬ಕ್ಕೆ ಮಣ ೨೪೬ ಯೀಸರಕ್ಕೆ ಹಾಕಿರುವ ಪದಕ ೧ಕ್ಕೆ ಕೆಂಪು ೧೨ ವಜ್ರದ ಹರಳು ೧೧ ಸಣ್ಣ ಪಚ್ಚೆದ ಹರಳು ೩ ಮತ್ತು ತುದಿಗೆ ಹಚ್ಚಿರುವ ಪಚ್ಚೆ ೧ ಸಹಾನಗ ೧ ಅಂದಾರೀ ಬಗ್ಗೆ ಸಾಮಾನು ಸಹ ಆನೆ ೧ ಯೀಪ್ರಕಾರ ಸಮರ್ಪಿಸಿದ್ದರಿಂದ ಸ್ವಾಮಿಯವರು ಸಂತೋಷಚಿತ್ತರಾಗಿ ಆರಶಿಗೆ ಪೂರ್ಣ ಆಶೀರ್ವಾದವನ್ನು ಮಾಡಿದರು. ತರುವಾಯ ಶ್ರೀಮಠದ ವಿದ್ವಾಂಸರುಗಳಿಗೆ ವಿದ್ವತ್ಸಂಭಾವನೆಯನ್ನು ಕೊಟ್ಟು ಅಪ್ಪೂಶಾಸ್ತ್ರಿಗಳಿಗೆ ಶಹಲಜೋಡಿ ೧ ಶ್ರೀನಿವಾಸ ಶಾಸ್ತ್ರಿಗಳಿಗೆ ಶಕಲಜೋಡಿ ೧ ಮೊಕಾವಿ ತರೀಕೇರಿ ಕೃಷ್ಣ ಶಾಸ್ತ್ರಿಗಳಿಗೆ ಶಹಲಜೋಡಿ ೧ ಮಠದ ಪಾರುಪತ್ತೆಗಾರ ಗಂಗಾಧರ ಶಾಸ್ತ್ರಿಗಳಿಗೆ ಶಹಲಜೋಡಿ ೧ ರಾಮಶಾಸ್ತ್ರಿಗಳಿಗೆ ಶಹಲಜೋಡಿ ಯೀ ಪ್ರಕಾರ ಕೊಡಿಸಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಯೀಸ್ಥಳದಲ್ಲಿ ನಿಲ್ಲಬೇಕೆಂದು ಧೊರೆಗಳು ಅರಿಕೆ ಮಾಡಿಕೊಂಡಲ್ಲಿ ಸ್ವಾಮಿಗಳು ಅಪ್ಪಣೆ ಕೊಟ್ಟಿದ್ದು ದೊಡ್ಡ ಕ್ಷೇತ್ರ ತೀರ ವಾಸವಲ್ಲಿಯೇ ಸಂಕಲ್ಪಕ್ಕೆ ಕೂಡ್ರುವಂಥಾದ್ದು ವಿಶೇಷವಿದೆಯಂದೂ ರಾಜಸ್ಥಾನ ಸಮೀಪದಲ್ಲಿ ಮಹಾಕ್ಷೇತ್ರವಾದ ಕಪಿಲಾ ನದೀತೀರ ಗೌತಮ ಋಷಿಗಳ ಆಶ್ರಮವಾದ ನಂಜನಗೂಡು ಸ್ಥಳದಲ್ಲಿ ಸಂಕಲ್ಪಕ್ಕೆ ಕೂರಿಸಿದರೆ ಸ್ನಾನ ಜಪಕ್ಕೆ ಅನುಕೂಲವಾಗಿ ನಿಮಗೆ ಅತ್ಯಂತ ಶ್ರೇಯಸ್ಸು ಲಭಿಸವಾದೀತೆಂದು ನಿರೂಪಿಸಲಾಗಿ, ಅದೇ ಪ್ರಕಾರ ಧೊರೆಗಳು ಸಮ್ಮತಿಪಟ್ಟು ನಂಜನಗೂಡು ಸ್ಥಳಕ್ಕೆ ಅಪ್ಪಣೀ ಕೊಟ್ಟು ಸಂಗಡ ಸಂಕಲ್ಪಕ್ಕೆ ಕೂಡರಿಸಿ ಬರತಕ್ಕ ಬಗ್ಗೆ ಸ್ವಾರಕಚೇರಿ ಬಕ್ಷೀ ಭೀಮರಾಯರಿಗೆ, ಕಚೇರಿ ತಿಪ್ಪಯ್ಯನ ಸಹಾ ಇವರ ಸಂಗಡ ಹಸರು ಶಕಲ ಜೋಡಿ ಚರಣಕಾಣಿಕೆ ಮುಂತಾದ ಸಾಹಿತ್ಯ ಮಾಡಿಕೊಟ್ಟು ಕಳುಹಿಸಿದ್ದರಿಂದ ಆ ದಿವಸವೇ ಹೊರಟು ನಂಜನಗೂಡಿಗೆ ತಲುಪಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಕೂತರು. ಆ ದಿವಸ ಧೊರೆಗಳಿಂದ ಬಂದ ಕಾಣಿಕೆ ರೂಪಾಯಿ ವಂದು ಸಾವಿರ ೧,೦೦೦ ಹಸರು ಶಹಲ ಜೋಡಿ ೧ — — ಧೋತರಜೋಡು ೨ ಈ ಪ್ರಕಾರ ಸಮರ್ಪಿಸಿ ಫಲಮಂತ್ರಾಕ್ಷತೆ ವ್ಯಾಸಾಕ್ಷತೆ ತೆಗೆದುಕೊಂಡು ಭೀಮರಾಯ ತಿಪ್ಪಯ್ಯ ಸಹ ಧೊರೆಗಳ ಸನ್ನಿಧಾನಕ್ಕೆ ಬಂದರು. ಮುಂದೆ ದಿನಚರಿಯಲ್ಲೂ, ಮಧ್ಯದಲ್ಲೂ ನಡೆವ ದೇವತಾರಾಧನೆ ಸಂತರ್ಪಣೆ ಬಗ್ಗೆ ಹುಜೂರ

ತಸ್ತೀಕನ ಪಟ್ಟಿ ಬರಸಿಕೊಟ್ಟು ನಂಜನಗೂಡ ವಾಮಲೇದಾರರು ಶ್ರೀನಿವಾಸೈಯ್ಯಗೆ ಬರೆದ ನಿರೂಪ ಪ್ರಕಾರ ದಿನ ಒಂದಕ್ಕೆ ಆಯಕಟ್ಟು ಪಟ್ಟೀ ನಕಲು.

ವಿವರ

| | | |
|---|---|---|
| ೧೦ | ಆಷಾಢ ಬಹುಳ ೫ ಲಾಗಾಯಿತು ಬಹುಳ ೩೦ ರ ವರೆಗಿನ ದಿನ | ದಿನ ಒಂದಕ್ಕೆ ಹುಜೂರ ಖಾಸಾದ ಸಕತ್ತ ಆದ ಪಟ್ಟಿ ಪ್ರಕಾರ ಬಂದ ಪದಾರ್ಥ |
| ೩೦ | ಶ್ರಾವಣ ಶುದ್ಧ ೧ ಲಾಗಾಯಿತು ಬಹುಳ ೩೦ ರ ವರೆಗಿನ ದಿನ | |
| ೨೨ | ಭಾದ್ರಪದಶುದ್ಧ ೧ ಲಾಗಾಯಿತು ಬಹುಳ ೭ ರ ವರೆಗಿನ ದಿನ | |

[ಈ ಪದಾರ್ಥದ ತಪಶೀಲು ಬರಿಯದೇ ಬಿಟ್ಟಿದೆ]

ಇದಕ್ಕೆ ಮೇಲು ತಾಕೀದಿಯಾಗಿದೆ. ನಂಜನಗೂಡು ವಾಮಲೇದಾರ ಶ್ರೀನಿವಾಸೈಯ್ಯಗೆ ಬರೆದ ನಿರೂಪ ೩ಕ್ಕೆ ವಿವರ :—

೧. ನಿರೂಪ ಸ್ಥಳ ದಾಖಲ್‌ಬಹುಳ ೮ ಮಂಗಳವಾರ.

ಕೃಷ್ಣರಾಜವಡೆಯರವರು ಆಂಗೀರಸ ಸಂವತ್ಸರದ ಆಷಾಢ ಬಹುಳ ೪ ಸೋಮವಾರ ತಾ ೨೭ನೇ ಜುಲಾಯಿ ಸನ್ನ ೧೮೧೨ ನೇ ಇಸವಿ, ಕೇಳಿದ ಜೀನಸಿಕೊಡ್ಸುವಂತೆ ನಂಜನಗೂಡು, ಅಮಲದಾರ ಶ್ರೀನಿವಾಸೈಯ್ಯನಿಗೆ:—

2. ನಿರೂಪ ಸ್ಥಳದ ದಾಖಲ್ ಬಹುಳ ೧೧ ರಲ್ಲೂ

ಕೃಷ್ಣರಾಜವಡೆಯರವರು ಆಂಗೀರಸ ಸಂವತ್ಸರದ ಆಷಾಢ ಬಹುಳ ೯ ರಲ್ಲು ಬರೆದ ನಿರೂಪದಲ್ಲಿ ನಂಜನಗೂಡು ಅಮಲದಾರ ಶ್ರೀನಿವಾಸಯ್ಯನಿಗೆ–ನಿನ್ನ ತಾ॥ಊರೆನಲ್ಲಿ ಜೀನಸಿವದಗಡೆ ಇರುವ ಮೂಲಕ ಗುಂಡ್ಲು ತಾಲೂಕ ಅಮೀಲರಿಗೆ ನಿರೂಪ ಬರೆಸಿದೆ. ನೀನು ಬರೆದು ತರಿಸಿಕೊಡುವುದು ಗೌಳಿಗರಿಗೆ ತಾಕೀತಿ ಕೊಟ್ಟಿದೆ.

೩. ಶ್ರಾವಣಶುದ್ಧ ೪ ರಲ್ಲು ಸ್ಥಳದಾಖಲ್ಲು ಅಂಗೀರಸ ಸಂವತ್ಸರದ ಶ್ರಾವಣ ಶುದ್ಧ ೩ ರಲ್ಲು ಬರೆದ ನಿರೂಪಾ ಕ್ರಷ್ಣರಾಜರವರು ಬರೆಸಿದ್ದು.

ಸ್ವಾಮಿಗಳವರಲ್ಲಿ ನಡೆಯುವ ಸಂತರ್ಪಣೆ ಬ್ರಾಹ್ಮಣರ ದಕ್ಷಿಣೆ ಬಗ್ಗೆ ರೋಖುಸಿಕ್ಕುವದಿಲ್ಲವೆಂದು ಬರಶಿಕೊಂಡದ್ದಕ್ಕೆ ದಿನ ಒಂದಕ್ಕೆ (೭೦೦) ದುಡ್ಡು ಕೊಡುತ್ತಾತ್ತಹೋಗಬೇಕು. ಈ ರೋಖು ಹುಜೂರುಯಿಂದಾ ಕಳುಹಿಸಿ ಕೊಡುತ್ತದೆ. ಅಂತಾ ಸದರೀ ಅಮೀಲ್ ಶ್ರೀನಿವಾಸಯ್ಯನಿಗೆ

ಈಪ್ರಕಾರ ತಸಲ್ಮತುಪಪಿ ನಿರುಪಗಳು ಒಂದು ತೈನಾತೀಬಗ್ಗೆ ಹುಜೂರ ಹರಿಕಾರರು, ಪಹರೇಚವಕೀಬಗ್ಗೆ 12 ಜವಾನರು ಸಹಾ ಇಷ್ಟು ವಿಚಾರಿಸಿಕೊಂಡದ್ದರಿಂದ ಶ್ರಿಮಠದಲ್ಲೂ, ದಿನವಹಿಯಲ್ಲೂ ನಡೆದ ಆಯಕಟ್ಟು ಗುರುಸ್ವಾಮಿಯವರು ಬ್ರಾಹ್ಮಮುಹೂರ್ತದಲ್ಲ ಕಪಿಲಾನದಿ ಸ್ನಾನ ಘಟ್ಟಕ್ಕೆ ಚಿತ್ತೈಸಿ ಸ್ನಾನ ಜಪಾ ಅನುಷ್ಠಾನವಾಗಿ ಆತರುವಾಯ ಸಂಸ್ಥಾನದ ಸಿದ್ಧಾಂತಿ ಗಿರಿಜೊಯಿಸರು ಬಂದು ಪಂಚಾಂಗ ಶ್ರವಣವಾಗಿ ಆ ತರುವಾಯ ಪುರಾಣ ಶ್ರವಣವಾದ ಕೂಡಲೇ ಶ್ರೀ ನಂಜುಂಡೇಶ್ವರಸ್ವಾಮಿ ದೇವಾಲಯಕ್ಕೆ ಬಂದು ದೇವರ ದರ್ಶನವನ್ನು ಮಾಡಿಕೊಂಡು ಆನಂತರ ಮಠ ಪ್ರವೇಶವಾಗುವವರೆಗೆ ಘಟಿಕಾ ೭ ಆದಮೇಲೆ ಮಧ್ಯದಲ್ಲಿ ನಾಲ್ಕು ಘಳಿಗೆ ಪಾಠ ಪ್ರವಚನೆಯಾಗಿ ಆ ತರುವಾಯ ನೂತನವಾಗಿ ಬಂದ ವಿದ್ವಾಂಸರುಗಳ ವಿದ್ವತ್ಪರೀಕ್ಷೆಗಳ ಮಾಡಿಶಿ ಪುನಃ ಸ್ನಾನವಾಗಿ ದೇವತಾ ಆರಾಧನೆ, ಭಿಕ್ಷಾ, ಸಂತರ್ಪಣೆ ನಡೆಯುವಲ್ಲಿ ಈ ವಿವರವನ್ನು ದಿನಚರಿಯಲ್ಲ ತೈನಾತೀಹರಿಕಾರರು ಹುಜೂರಿಗೆ ಅರ್ಜಿಬರೆದುಕೊಳ್ಳುವದ್ದರಿಂದ ಧೊರೆಗಳು ಈ ಚರ್ಯವನ್ನು ಪರಾಮರಿಶಿ ಸಂತೋಷಚಿತ್ತರಾಗಿ ಇದ್ದರು ಈ ಪ್ರಕಾರ ಚಾತುರ್ಮಾಸ್ಯ ಸಂಕಲ್ಪವು ಸಾಂಗವಾಗಿ ನಡೆದು ಭಾದ್ರಪದ ಶುದ್ಧ ೧೫ ದಿವಸ ವಿಶ್ವರೂಪಯಾತ್ರೆ ಹೊರಟು ಕೂಡ್ಲೇ ನಂಜನಗೂಡು ಶ್ರೀ ಮಠಕ್ಕೆ ಚಿತ್ತೈಶಿದರು.

ಈಬಹುಳ ೧ ಅರಭ್ಯ ಬಹುಳ ೭ ರವರೆಗೆ ಆಸ್ಥಳದಲ್ಲಿಯೇ ಇದ್ದು, ಈ ಬಹುಳ ೮ ಸೋಮವಾರ ಪ್ರಾತಃಕಾಲಕ್ಕೆ ನಂಜನಗೂಡು ಅಗ್ರಹಾರದಲ್ಲಿ ಇರುವ ವಿದ್ವಾಂಸರುಗಳಿಗೆ ಮಾನಸನ್ಮಾನಗಳನ್ನುಮಾಡಿಸಿ ಶ್ರೀ ನಂಜುಂಡೇಶ್ವರನ ದರ್ಶನವನ್ನು ತೆಗೆದುಕೊಂಡು ಅಲ್ಲಿ ಭಿಕ್ಷವಾಗುತ್ತಲೇ ದಿವಾ ಘಟಿಕಾ ೧೮ ಕ್ಕೆ ಹೊರಟು ಮೈಸೂರು ಚಾಮುಂಡೇಶ್ವರೀ ಪರ್ವತದ ಸಮೀಪದಲ್ಲಿ ಇರುವ ದಳವಾಯಿ ಕೆರೇ ಹಿಂದೆ ಯಿರುವ ಚಮನ್ನಪಟ್ಟೀ ಶ್ರಿಂಗಾರಕ್ಕೆ ಬಡವಳಗಣದ ಛತ್ರದಲ್ಲಿ ವುಳಿದು ಯೀ ಬಹುಳ ೯ ದಿವಸವೆಲ್ಲ ದಿವಾನ ರಾಮರಾಯರ ಮನೆಯಲ್ಲಿ ಭಿಕ್ಷೆಯಾಗಬೇಕೆಂದು ಅರಿಕೆಮಾಡಿಕೊಂಡಲ್ಲ ಸಕಲ ವಿಭವದಿಂದ ಆತನು ಕರೆದುಕೊಂಡು ಹೋಗಿ ತನ್ನ ಮನೆಯಲ್ಲಿ ಭಿಕ್ಷಾ ಪಾದಪೂಜೆ ಮಾಡಿಕೊಟ್ಟದ್ದೂ ಶಹಲಜೋಡಿ ೧, ರೂಪಾಯಿ ೧,೦೦೦, ಕಪ್ಪುಕುದುರೆ ೧ ಸಹಾ ಸಮರ್ಪಿಸಿ ಆತನು ಪೂರ್ಣ ಅನುಗ್ರಹಕ್ಕೆ ಪಾತ್ರನಾದ್ದರಿಂದ ಅಲ್ಲಿ ಇರುತ್ತಿರಲಾಗಿ

ಕೃಷ್ಣರಾಜ ಮಹಾರಾಜರು ತಮ್ಮ ಅರಮನೆಗೆ ಚಿತ್ತೈಸಿ ದರ್ಶನಕೊಟ್ಟು ತಮ್ಮಿಂದ ಆಗತಕ್ಕ ಶೇವಾ ತೆಗೆದುಕೊಂಡು ಚಿತ್ತೈಸಬೇಕೆಂದು, ಅರಸುಮಕ್ಕಳ ಬಾಳೇಅರಸರನ್ನು ಕಳುಹಿಸಿದಲ್ಲ ಆದಿವಸ ಸಾಯಂಕಾಲದ ಘಟಿಕಾ ೫ ಕ್ಕೆ ಅರಮನೆಗೆ ತೆರಳುವಲ್ಲಿ ಧೊರೆಗಳು ಹೊರಗಣ ಆನೇಬಾಗಿಲಿಗೆ ಬಂದು ಹಸ್ತಲಾಘವಕೊಟ್ಟು ಸೆಜ್ಜೇ ಮೇಲೆ ಕರಕೊಂಡು ಹೋಗಿ, ಸಿಂಹಾಸನದ ಮೇಲೆ ಕೂಡರಿಸಿ ಆಸಮಯದಲ್ಲಿ ಕೊಟ್ಟ ಊದೀಶಹಲ್ ಜೋಡಿ ೧, ರೂಪಾಯಿ ೫೦೦ ಐದುನೂರುರೂಪಾಯಿ ಚರಣ ಕಾಣಿಕೆಕೊಟ್ಟು ಶ್ರೀಮಠದಲ್ಲಿ ಕಾಲಂಪ್ರತಿ ನಡೆಯುತ್ತಿರುವ, ನವರಾತ್ರೆ ವುತ್ಸವ ಚಾತುರ್ಮಾಶ್ಯ ಸಂಕಲ್ಪದ ಖರ್ಚಿನ ಬಗ್ಗೆ ಪ್ರಾ. ಧೊರೆಗಳವರ ದಿವಾನ್ ಪೂರ್ಣಯ್ಯನವರ ದಿವಸದಲ್ಲೂ ಶಿವಮೊಗ್ಗಾ ತಾಲ್ಲೂಕಿನ ನೇ ೨,೦೦೦ ಎರಡುಸಾವಿರ ರೂಪಾಯಿಗಳಿಗೆ ತಸ್ತೀಕು ಮಾಡಿಕೊಟ್ಟಪ್ರಕಾರ ನಡೆದು ಬರುತ್ತಾಯಿತ್ತು. ಯಿದರಿಂದ ನವರಾತ್ರೇ ಅನ್ನ ಸಂತರ್ಪಣೆ ಮುಂತಾದ ಖರ್ಚು ಪೂರೈಸುವದಿಲ್ಲವೆಂದು ದಿವಾನ್ ರಾಮರಾಯರು ಅರಿಕೆಮಾಡಿಕೊಂಡದ್ದರಿಂದ ಧೊರೆಗಳವರ ಅಪ್ಪಣೆ ಆದದ್ದು ಪ್ರಾಕು ಸಲ್ಲುವದು ಎರಡು ಸಾವಿರ ರೂಪಾಯಿ ೨,೦೦೧ ಅಲ್ಲದೇ ನವರಾತ್ರೀ ಅನ್ನಸಂತರ್ಪಣೆ ಮುಂತಾದ ಖರ್ಚಿನ ಬಗ್ಗೆ ಅಪ್ಪಣೆ ಕೊಡಿಸಿರುವುದು ರೂಪಾಯಿ ೨,೦೦೦ ಉಭಯ ರೂಪಾಯಿ ಸಾವಿರ ನಾಲ್ಕಕ್ಕೇ ಇಕ್ಕೇರಿ ನಾಣ್ಯಕ್ಕೆ ೧,೦೦೦ ಸಾವಿರ ವರಾಹನ್ನ ಪ್ರಕಾರ ಶಿವಮುಗ್ಗ ತಾಲೂಕ ಮುಜಕೂರಿನಿಂದಾ ಕೊಡುವಹಾಗೆ ಮಾಮಲೇದಾರ ಕೃಷ್ಣರಾಯರಿಗೆ ಬರಶಿಕೊಟ್ಟ ವರುಷಾಶನದ ತಸ್ತೀಕಿನ ನಿರೂಪ ೧ಕ್ಕೆ ಅಂಗೀರಸ ಸಂವತ್ಸರದ ಭಾದ್ರಪದ ಬಹುಳ ೧೦ ತಾರೀಖಿನಲ್ಲೂ ಬಂದು ಯಿರುವ ನಿರೂಪ ಖತ್ತು ಮುನಸೀ ರಾಮಾಜೀ ಪಂತ । ಹುಜೂರು । . . . . . . . ಈ ಸನದಿನಲ್ಲಿ । ಪಾರಶೀ, ಹಿಂದಿ, ಕನ್ನಡ ಸಹಾ ಬರದುಯಿಧೇ. ಮಾರ್ಗದ ಗಡಿಗಳಿಗೆ ಅಪ್ಪಣೆಯಾಗಿ ಬರಶಿಕೊಟ್ಟರಹದಾರೀ ೧ ಕ್ಕೆ.

. . . . . . .

## ಕೃಷ್ಣರಾಜ ಒಡೆಯರವರು

ಅಂಗೀರಸ ಸಂವತ್ಸರದ ಭಾದ್ರಪದ ಬಹುಳ ೧ ರಲ್ಲೂ ಅರಮನೆ ಶೀಮೇ ಗಡೀಗಳ ಅಮೀಲ್ ಕಿಲ್ಲೇದಾರರಿಗೆ ರಹದಾರೀ ಮೈಸೂರಿನಿಂದ ಪುನಃ ಕೂಡ್ಲಿಗೆ ಹೋಗುವಬಗ್ಗೆ ತಾರೀಖು ೨೧ನೇ ಮಾಹೆ ಸಪ್ಟಂಬರ ಸನ್ ೧೮೧೨ ಯಿಸವಿ.

ಈಪ್ರಕಾರ ರಹದಾರೀ ಬರಸಿಕೊಟ್ಟು ದೊರೆಗಳವರು, ಮಹಾವಡ್ಡೋಲಗವನ್ನು ಮಾಡಿಸಿ ಸಮ್ಮುಖ ವಿದ್ವಾಂಸರು, ಸಾಮಾದಿಕರು ಸಹಾಕುಳಿತು, ಬಿರಸು, ಬಾಣಗಲು ಬತ್ತಿ, ಮಹಾಕಾಶ, ಚಂದ್ರ ಜ್ಯೋತಿ ಮುಂತಾದ ವಿಚಿತ್ರವಾದ ನಾನಾವಿಚಿತ್ರವಾದಮದ್ದಿನ ಆಕಲ ಬಾಜೀಮಾಡಿಸಿ ಕುಳ್ಳಿರುವ ಕಾಲದಲ್ಲಿ ಸಭಾಪ್ರಾಂಗಲಕ್ಷಣಕ್ಕೆ ಸರಿಯಾಗಿ ಯಿರುವದನ್ನು ಶ್ರೀಗುರು ಸ್ವಾಮಿಯವರು ಪರಾಮಬರಿರೆ ಪರಮಕುತುಹಲದಿಂದ ಕೃಷ್ಣರಾಜ ಮಹಾರಾಜರಿಗೆ ಪೂರ್ಣ ಆಶೀರ್ವಾದ ಮಾಡಿ ಫಲಪುಷ್ಪ ಮಂತ್ರಾಕ್ಷತೆಯನ್ನು ಕೊಟ್ಟು ಶ್ರೀಮಠದಿಂದ ಅಪ್ಪಣೆ ಕೊಡಿಸಿ ಕೊಟ್ಟತಸರೀಫು.

1 ನಂಜನಗೂಡಿನಿಂದ ಮೈಸೂರಿಗೆ ಬಂದು ಅರಮನೆಗೆ ಹೋದವ್ಯಾಳ್ಯದಲ್ಲಿ ಕೊಟ್ಟ ಶಹಲ್ ಜೋಡಿ—

1 ಕೂಡಲಿಯಿಂದ ಹೊರಟು ಮೈಸೂರಿಗೆ ಬಂದು ಚಾತುರ್ಮಾಸ್ಯ ಸಂಕಲ್ಪಕ್ಕೆ ನಂಜನಗೂಡಿಗೆ ಹೋಗಬೇಕಾದರೆ ಅರಮನೆಯಲ್ಲಿ ಶ್ರೀಮಠದಿಂದ ಅರಸುಗಳಿಗೆ ಅಪ್ಪಣೆಕೊಡಿಸಿದ ತಸರೀಫು

ಅಂಗೀರಸ ಸಂವತ್ಸರದ ಆಷಾಡ ಬಹುಳ ೫ ಮಂಗಳವಾರ ದಿವಸ—

1 ಧೊರೆಗಳಿಗೆ ಕೊಟ್ಟ ಖಿಲ್ಲತ್ತು ೧ ಕ್ಕೆ—

2 ಜವಾಹೀರ ನಗಾ—

1 ಹಳು ಕೆತ್ತಿದ ಶಿರಪೇಚು

1 ಕಲರೇ ತುರಾಯ ಕೆತ್ತಿಗೆ ಸಹಾ—

1 ವ್ರತಮು ಶಹಲ್‌ಜೋಡಿ ೧

1 ರಾಜಸ್ತ್ರೀಯರುಗಳು ಜನ ೩ ಕ್ಕೆ—

೩ ಜಹಲ ನಾಬಾದೀ ಭರ್ಜರಿಸೀರೆ

೩ ಕುಪ್ಪಸದ ಖಣ

೩ ಶಹಲ್‌ಜೋಡಿ

ಯೀಪ್ರಕಾರ ತಸರೀಫು ಕೊಡಿಸಿ ಸ್ಥಳಕ್ಕೆಬರುವದಕ್ಕೆ ಒಪ್ಪಿಗೇಕೊಡಿಸಬೇಕು ನಿಮಗೆ ಅನೇಕ ಶ್ರೇಯಸ್ಸುಗಳಾಗಬೇಕೆಂದು ಈಶ್ವರನಕುರಿತು ಪ್ರಾರ್ಥನೆ ಮಾಡುತ್ತೇವೆಂದು ಆಜ್ಞಾಪಿಸಿ ಅರಮನೆಯಿಂದ ಹೊರಟು ತ್ರಿನೇಶ್ವರಸ್ವಾಮಿ ಲಕ್ಷ್ಮಿನಾರಾಯಣಸ್ವಾಮಿ, ವರಹಸ್ವಾಮಿ ದೇವಾಲಯಗಳಿಗೆ ದೇವತಾ ಸಂದರ್ಶನ ಮಾಡಿಕೊಂಡು, ಪುನಃ ಚಮನ ಪಟ್ಟಿ ಶ್ರಿಂಗಾರ ತೋಟದಲ್ಲಿ ಇರುವಥತ್ರಕ್ಕೆಬಂದು ಕುಳಿತಲ್ಲಿ ಮೈಸೂರು ದರಬಾರದಲ್ಲಿ ಯಿರುವ ಪ್ರಮುಖ ಸಾಮಾದಿಕರು ಯಾವತ್ತರೂಬಂದು ತಮ್ಮ ತಮ್ಮ ಯೋಗ್ಯತಾನುಸಾರ ಚರಣಕಾಣಿಕ್ಕೆ ಕೊಟ್ಟು ವಸ್ತು ಸಹ ಸವರ್ಪಿಶಿ ಫಲ ಮಂತ್ರಾಕ್ಷತೆ ತೆಗೆದುಕೊಂಡು ಹೋದ ತರುವಾಯ ಆ ದಿವಸ ಅಲ್ಲಿ ಮೊಕ್ಕಾಂ ಮಾಡಿದರು.

೩೮೨ ನೆಯ ನಿರೂಪವು ಶ್ರೀಗಳವರು ಮಹಾರಾಜರಿಗೆ ದರ್ಶನಕೊಟ್ಟು ಪುನಃ ಕೂಡ್ಲಿಗೆ ಚಿತ್ತೈಸುವ ಸಂದರ್ಭದಲ್ಲಿ ಕೊಟ್ಟ ರಹದಾರಿ.

೩೮೩ ನೆಯ ನಿರೂಪವು ದಿವಾನ್ ಪೂರ್ಣಯ್ಯನವರು ಶ್ರೀಗಳವರಿಗೆ ಕೊಟ್ಟ ವರ್ಷಾಶನವನ್ನು ಮಹಾರಾಜರು ಎರಡರಷ್ಟು ಹೆಚ್ಚಿಸಿದ ಸನ್ನದಾಗಿವೆ. ಅದು ಪರ್ಷಿಯನ್, ಮಹಾರಾಷ್ಟ್ರ ಮತ್ತು ಕನ್ನಡ ಮೂರು ಭಾಷೆಗಳಲ್ಲೂ ಬರೆಯಲ್ಪಟ್ಟಿದ್ದು ಅದನ್ನು ಆಯಾ ಭಾಷೆಗಳಲ್ಲಿಯೇ ಮುದ್ರಿಸಲಾಗಿದೆ.

೩೮೪ ನೆಯ ನಿರೂಪವು ಮಹಾರಾಜರು ಶ್ರೀಮಠಕ್ಕೆ 'ಗಂಗಾ' ಎಂಬ ಆನೆಯನ್ನು ದಾನಕೊಟ್ಟದ್ದನು ಆನೆಯು ಕೂಡ್ಲಿ ತಲ್ಪುವವರೆಗೆ ಅದಕ್ಕೆ ರಾತೀಪು ವಗೈರೆ ಕೊಡುವುದಕ್ಕೂ ಕೊಟ್ಟ ನಿರೂಪ.

೩೮೫, ೩೮೬ ನೆಯ ನಿರೂಪಗಳು ಹೊನ್ನಾಳಿ ಮತ್ತು ಶಿವಮೊಗ್ಗಾ ಅಮಲ್‌ದಾರರಿಗೆ ಗೋಪಗೊಂಡನಹಳ್ಳಿ ಮತ್ತು ಶೆಟ್ಟಿಹಳ್ಳಿ ಗ್ರಾಮಗಳಿಗೆ ಹೆಚ್ಚಿಸಿದ್ದ ಸರ್ಕಾರಿ ಜೋಡಿಯನ್ನು ಕಡಿಮೆ ಮಾಡಿ ಮಾಮೂಲಿನಂತೆ ತೆಗೆದುಕೊಳ್ಳಲು ಕೊಟ್ಟ ನಿರೂಪವಾಗಿದೆ.

೩೮೬—೮೮ ನೆಯ ನಿರೂಪಗಳು ಶ್ರೀಗಳವರು ಉತ್ತರದೇಶ ಸಂಚಾರಾರ್ಥವಾಗಿ ಕೊಟ್ಟ ರಹದಾರಿ ಮತ್ತು ಅದನ್ನು ಕೊಟ್ಟಿರುವ ಅಂಶದ ವಿಜ್ಞಾಪನಾ ಪತ್ರಿಕೆಗಳಾಗಿವೆ.

೩೮೯ ನೆಯ ನಿರೂಪವು ಶ್ರೀಮಠದಿಂದ ಅರಮನೆ ಪ್ರಾಣತೊಟ್ಟಿ ಸರಸ್ವತೀ ಭಂಡಾರಕ್ಕೆ ಹನ್ನೆರಡು ಪುಸ್ತಕಗಳನ್ನು ಬರೆಸಿ ಕಳುಹಿಸಲು ಶ್ರೀಮಠದ ಮುಕ್ಕಾಮಿ ಕೃಷ್ಣಶಾಸ್ತ್ರಿಗಳಿಗೆ ಕೊಟ್ಟ ನಿರೂಪ:

೧ ಶಂಕರಭಾಷ್ಯ ನಾಲ್ಕು ಅಧ್ಯಾಯ
೨ ಕಲ್ಪತರು
೩ ವಿವರಣವಾಚಸ್ಪತ್ಯ
೪ ನ್ಯಾಯರಕ್ಷಾಮಣಿ
೫ ಅದ್ವೈತಸಿದ್ಧಿ
೬ ಅದ್ವೈತಪರಿಭಾಷಾ
೭ ಸಿದ್ಧಾಂತಲೇಶಸಂಗ್ರಹ
೮ ಬ್ರಹ್ಮವಿದ್ಯಾಭರಣ
೯ ಅದ್ವೈತದೀಪಿಕಾ
೧೦ ಗೌಡಬ್ರಹ್ಮಾನಂದೀಯ
೧೧ ನಾರಾಯಣಾಶ್ರಮೀಯ
೧೨ ರಾಮಕೃಷ್ಣದೀಕ್ಷಿತೀಯ ಅದ್ವೈತಪರಿಭಾಷಾ ವ್ಯಾಖ್ಯಾನ

೩೯೦ ನೆಯ ನಿರೂಪವು ಶ್ರೀಗಳವರ ಚಾತುರ್ಮಾಸ್ಯದ ಬಗ್ಗೆ ಪ್ರತಿಸಾಲು ಅರಮನೆ ಖಜಾನೆಯಿಂದ ನಲ್ಲ ಪುದನ್ನು ಮೋಖೂಫುಮಾಡಿ ಶಿವಮೊಗ್ಗಾ ತಾಲ್ಲೂಕು ಕಚೇರಿಯಿಂದ ಮುನ್ನೂರು ರೂಪಾಯಿ ನಗದು ಮತ್ತು ಮೂವತ್ತು ಹಣದ ಒಂದು ಜೊತೆ ಪಂಚೆಯನ್ನೂ ಕೊಡಲು ಶಿವಮೊಗ್ಗಾ ಅಮಿಲ್ ಕೃಷ್ಣರಾಯರಿಗೆ ಕೊಟ್ಟನಿರೂಪ ವಾಗಿದೆ.

೩೯೧–೯೨ ನೆಯ ನಿರೂಪಗಳು ಪುಸ್ತಕಗಳನ್ನು ಬರೆಸಲು ಶ್ರೀಮಠದವರು ಉಪಕ್ರಮಿಸಿದ ಬಗ್ಗೆ ಸಂತೋಷ ವನ್ನು ಸೂಚಿಸಿರುವುದನ್ನೂ, ಪುಸ್ತಕಗಳು ತಪ್ಪಿದುದನ್ನು ತಿಳಿಸಿ ಶ್ರೀ ಮಠಕ್ಕೆ ಪ್ರತಿವರ್ಷ ಹತ್ತು ಮಣ ಗಂಧ ವನ್ನು ಕೊಡಲು ನಿರೂಪವನ್ನು ಕೊಟ್ಟ ವಿಚಾರವನ್ನು ಶ್ರೀಮಠದ ಪಾರಪತ್ತೇಗಾರ್ ಗಂಗಾಧರಶಾಸ್ತ್ರಿಗಳಿಗೆ ಬರೆದುದಾಗಿವೆ.

೩೯೩ ನೆಯ ನಿರೂಪದಲ್ಲಿ ಅರಮನೇ ಶೀಮೋಗಡಿಗಳ ಅಮಿಲ್‌ಕಿಲ್ಲೇದಾರ, ನಾಯರು ಮಣೇಗಾರರಿಗೆ ಸಹ ಶ್ರೀಮಠದ ಸಂತರ್ಪಣೆಗಾಗಿ ತರುವ ಸಾಮಾನುಗಳ ಬಗ್ಗೆ ಸುಂಕ ವಸೂಲ್ಮಾಡಕೂಡದೆಂದು ಅಪ್ಪಣೆ ಮಾಡಿದ್ದಾರೆ.

೩೯೪–೯೫ ನೆಯ ನಿರೂಪಗಳು ಶ್ರೀಗಳವರ ದೇಶಸಂಚಾರದಲ್ಲಿ ಪ್ರತಿಯೊಂದು ಮಜಲಿಗೂ ಒಂದು ದಿವಸ ಸರ್ಕಾರದ ಭಿಕ್ಷೆ ಬಗ್ಗೆ ಸಕಲ ಸೋಪಸ್ಕರ ಕೊಡುವ ವಿಷಯದಲ್ಲಿಯೂ ಶ್ರೀಗಳವರನ್ನು ಮರ್ಯಾದೆಯಿಂದ ಕರೆ ತಂದು ಒಳ್ಳೆ ಸ್ಥಳದಲ್ಲಿ ಇಳಿಸಿ ಮುಂದಿನ ಮುಕ್ಕಾಮಿಗೆ ಬೀಳ್ಕೊಡುವ ವಿಷಯದಲ್ಲಿಯೂ ಕೊಟ್ಟ ರಹದಾರಿಗಳಾಗಿವೆ.

೩೯೬–೯೭ ನೆಯ ನಿರೂಪಗಳು ಶ್ರೀ ಮಠಕ್ಕೆ ಅಕ್ಕಪಕ್ಕದ ಗ್ರಾಮಗಳಿಂದ ರಾಗಿಹುಲ್ಲು ವಗೈರೆ ಕೊಡುವ ವಿಷಯದಲ್ಲಿ ಮಾಮೂಲಿನಂತೆ ನಡೆಯಲು ಕೊಟ್ಟ ನಿರೂಪಗಳು.

೩೯೮ ನೆಯದು ಶ್ರೀಮಠಕ್ಕೆ ಕೊಡುವ ಹತ್ತು ಮಣ ಗಂಧದ ಬಗ್ಗೆ ಹೊಸ ಸನದನ್ನು ಅಪೇಕ್ಷಿಸದೇ ಕೊಡುತ್ತಾ ಬರಬೇಕೆಂದು ಕೊಟ್ಟ ಅಪ್ಪಣೆಯಾಗಿದೆ.

೩೯೯ ನೆಯ ನಿರೂಪವು ಕೂಡ್ಲಿಯಲ್ಲಿರುವ ಅಕ್ಷೋಭ್ಯ ತೀರ್ಥ(ಕರ್) ಮಠದ ಸ್ವಾಮಿಗಳಿಗೆ ಅವರು ಹುಜೂರ ಲ್ಲಿಗೆ ಬಂದಾಗ ಶ್ವೇತಛತ್ರ ಕೊಟ್ಟು ಕಳಿಸಿರುವ ವಿಷಯ ತಿಳಿಸಿ ಕೂಡ್ಲಿ ಶೃಂಗೇರೀಸ್ವಾಮಿಗಳು ತಮ್ಮ ಸಂಸ್ಥಾನದ ಬಿರುದುಗಳೊಡನೆ ನದೀಸ್ನಾನಕ್ಕೆ ಹೋಗುತ್ತಿರುವಾಗ ಅಕ್ಷೋಭ್ಯತೀರ್ಥಸ್ವಾಮಿಗಳು ಅವರೆದುರಿಗೆ ಶ್ವೇತಛತ್ರವನ್ನು ಧರಿಸಿಬಂದು ಗಲಾಟೆಗೆ ಅವಕಾಶ ಮಾಡುತ್ತಿದ್ದಾರೆ. ದೊಡ್ಡಸಂಸ್ಥಾನದ ಸ್ವಾಮಿಗಳು ಹೋಗುತ್ತಿದ್ದಾಗ ಅವರೆದುರು ಬೇರೆಯವರು ಹೋಗಕೂಡದೆಂಬ ಕಾಯಿದೆ ಇರುವಾಗ ಶೃಂಗೇರಿಗೆ ಸ್ವಾಮಿಗಳು ಸ್ನಾನಕ್ಕೋಸ್ಕರ ನದಿಯ ಯಾವ ಕಡೇ ಹೋಗುತ್ತಾರೋ ಆ ಘಟ್ಟವನ್ನು ಬಿಟ್ಟು ಬೇರೆ ಘಟ್ಟಕ್ಕೆ ಹೋಗಬೇಕು. ರಥೋತ್ಸವ ಸಮಯದಲ್ಲಿ ಕೂಡ್ಲಿ-ಶೃಂಗೇರೀ

ಸ್ವಾಮಿಗಳು ಹೋಗುತ್ತಿದ್ದರೆ, ಕಲ್ಮಠದವರು ಆಗ ತಾವು ಹೋಗದೇ ಅವರು ಹಿಂದಿರುಗಿ ಬಂದನಂತರ ತಾವು ಹೋಗಿ ಬರಬೇಕು. ಹೀಗೆ ತಾಕೀದ ಮಾಡಿ ಇಬ್ಬರಲ್ಲೂ ಯಾವ ಘಳಿಗೆಯಲ್ಲೂ ಗಲಾಟೆಗೆ ಅವಕಾಶವಿಲ್ಲದಂತೆ ತಿಳಿಸಬೇಕು. ಈ ವಿಷಯದಲ್ಲಿ ದೂರುಬರಲು ಅವಕಾಶಕೊಡಬಾರದು ಎಂದು ಶಿವಮೊಗ್ಗಾ ಅಮಲ್ದಾರ್ ಸುಬ್ಬರಾಯರಿಗೆ ಕೊಟ್ಟ ನಿರೂಪವಾಗಿದೆ.

೪೦೦ ನೆಯ ನಿರೂಪವು ಶ್ರೀ ನರಸಿಂಹಭಾರತೀ ಸ್ವಾಮಿಗಳವರು ವಿಕ್ರಮ ಸಂವತ್ಸರದ (ಕ್ರಿ. ಶ. ೧೮೨೦) ವೈಶಾಖ ಶುದ್ಧ ಚತುರ್ಥಿ ಮುಕ್ತರಾಗಿ ಶ್ರೀ ಶಂಕರಭಾರತೀ ಸ್ವಾಮಿಗಳವರಿಗೆ ಪಟ್ಟಾಭಿಷೇಕವಾದ ಸಂದರ್ಭದಲ್ಲಿ ಶ್ರೀಗಳವರ ಪೀಠಾಭಿಷೇಕಕ್ಕೆ ಮುನ್ನೂರು ರೂಪಾಯಿಗಳನ್ನು ಕೊಟ್ಟು ರಸೀದಿ ತೆಗೆದುಕೊಳ್ಳುವ ಬಗ್ಗೆ ಶಿವಮೊಗಾ ಅಮೀಲ್ ಸುಬ್ಬರಾಯರಿಗೆ ಕೊಟ್ಟ ನಿರೂಪ.

ವಿಕ್ರಮ ಸಂವತ್ಸರದ ಮಾಘ ಬಹುಳ ನವಮೀ, ದಶಮೀ, ಏಕಾದಶೀ ಈ ಮೂರು ದಿನಗಳು ಶ್ರೀಮನ್ಮಹಾರಾಜರವರು ಕೂಡ್ಲಿಗೆ ದಯಮಾಡಿಸಿ ಮುಕ್ಕಾಂ ಮಾಡಿದ ವಿಷಯವನ್ನೂ ಇದೇ ಪ್ರಸ್ತಾವನೆಯ 18 ನೆಯ ಪುಟದಲ್ಲಿ ಬರೆಯಲಾಗಿದೆ.

೪೦೧ ನೆಯ ನಿರೂಪವು ಶ್ರೀ ಶಂಕರಭಾರತೀ ಶ್ರೀಗಳವರು ಗೋಕರ್ಣಕ್ಕೆ ಚಿತ್ತೈಸಿ ತಿರುಗಿಬರುವ ಸಂದರ್ಭದಲ್ಲಿ ಪ್ರತಿ ಮಜಲಗೂ ಸೋಪಸ್ಕರ ಕೊಡಬೇಕೆಂದು ಕೊಟ್ಟ ರಹದಾರಿ ನಿರೂಪವಾಗಿದೆ.

೪೦೨ ನೆಯ ನಿರೂಪವು ಶ್ರೀ ನರಸಿಂಹಭಾರತೀಸ್ವಾಮಿಗಳವರ ಕಾಲದಲ್ಲಿ ಮಾಡಿಕೊಟ್ಟ ನಾಲ್ಕುಸಾವಿರ ರೂಪಾಯಿಗಳ ವರ್ಷಾಶನವನ್ನು ಶ್ರೀ ಶಂಕರಭಾರತೀ ಸ್ವಾಮಿಗಳವರಿಗೂ ಮುಂದುವರೆಸಲು ಕೊಟ್ಟ ನಿರೂಪವಾಗಿದೆ.

೪೦೩ ನೆಯ ನಿರೂಪದಲ್ಲಿ ಶ್ರೀಮಠಕ್ಕೆ ತರುವ ದನಸಿ ಸಾಮಾನುಗಳಿಗೆ ಸುಂಕದ ವಿನಾಯಿತಿಯನ್ನು ತಿಳಿಸಿದ್ದಾರೆ.

೪೦೪ ನೆಯ ನಿರೂಪವು ಶ್ರೀಮಠಕ್ಕೆ ಸೇರಿದ ಎಮ್ಮಿಗನೂರು ಗ್ರಾಮದ ಎಲ್ಲೆಕಟ್ಟಿಗೆ ಸೇರಿದ ಜಾಗೆದಲ್ಲಿ ಕೆಲವು ತಮ್ಮದೆಂದು ಅನವಟ್ಟಿ ತಾಲ್ಲೂಕ ಭಾರಂಗೀ ಗ್ರಾಮದ ಗೌಡನು ತಂಟೆಮಾಡುತ್ತಿದ್ದುದನ್ನು ನಗರದ ಸುಭೇದಾರ ರಾಮರಾಯರ ಕಾಲದಲ್ಲಿ ಪರಿಹರಿಸಲ್ಪಟ್ಟ ದಾಖಲೆಯನ್ನು ದಿವಾನ್‌ಕಛೇರಿಯಲ್ಲಿ ನೋಡಿ ಆ ಫೈಸಲಿನಂತೆ ಈಗಲೂ ನಡೆದುಕೊಳ್ಳುವಂತೆ ಗೌಡನಿಗೆ ತಾಕೀದಮಾಡಲು ಅನವಟ್ಟೀ ಅಮೀಲ್ ಚಲುವಯ್ಯಗೆ ನಿರೂಪ ಕೊಡಿಸಿರುವ ವಿಷಯವನ್ನು ಶ್ರೀಮಠದ ಸರ್ವಾಧಿಕಾರಿ ಲಿಂಗಾಶಾಸ್ತ್ರಿಗಳಿಗೆ ಬರೆಸಿದ ನಿರೂಪ.

೪೦೫ ನೆಯ ನಿರೂಪವು ವ್ಯಾಸನತೋಳು ನಂದೀಕೋಲು ಮೆರವಣಿಗೆಯನ್ನು ನಿಷೇಧಿಸಲು ನಗರದ ಫೌಜ್‌ದಾರ್ ಕೃಷ್ಣರಾಯರಿಗೆ ಬರೆದದ್ದಾಗಿದೆ.

೪೦೬ ಮತ್ತು ೪೦೭ ವಿಜ್ಞಾಪನಾಪತ್ರಿಕೆಗಳು ಶ್ರೀಗಳವರು ಕಳುಹಿಸಿದ ವ್ಯಾಸಾಕ್ಷತೆಯನ್ನು ಸ್ವೀಕರಿಸಿ ಪ್ರತಿಯಾಗಿ ಖಿಲ್ಲತ್ತನ್ನು ಸಮರ್ಪಿಸಿರುವ ವಿಷಯವನ್ನೂ ಶ್ರೀಮಠಕ್ಕೆ ಒಂದು ಆನೆ ದಾನಮಾಡಿರುವ ಮತ್ತು ಮಠಕ್ಕೆ ಅನುಕೂಲಿಸತಕ್ಕ ಕಾರ್ಯಗಳ ವಿದ್ಯಮಾನಕ್ಕೆ ಬರೆದುಕೊಂಡ ವಿಜ್ಞಾಪನೆಗಳಾಗಿವೆ.

೪೦೮ ನೆಯ ವಿಜ್ಞಾಪನಾ ಪತ್ರಿಕೆಯು ಶ್ರೀ ಶ್ರೀಗಳವರು ಉದ್ದೇಶಿಸಿದಂತೆ ನಂಜನಗೂಡು ಕಪಿಲಾಸ್ನಾನ ಮತ್ತು ಶ್ರೀ ಶ್ರೀಕಂಠೇಶ್ವರ ಸಂದರ್ಶನ ಮಾಡುವ ಮತ್ತು ಶ್ರೀಮನ್ಮಹಾರಾಜರವರಿಗೆ ದರ್ಶನವನ್ನೀಯುವ ಅಭಿಲಾಷೆಗೆ ಮಹಾರಾಜರು ತಮ್ಮ ಇಷ್ಟವನ್ನು ಸೂಚಿಸಿ ತಾವೂ ಶ್ರೀ ವಿದ್ಯಾಶಂಕರದೇವರ ದರ್ಶನವನ್ನು ಮಾಡಬೇಕೆಂಬ ಇಷ್ಟವನ್ನು ಸೂಚಿಸಿ ಶ್ರೀಗಳವರು ಮೈಸೂರಿಗೆ ದಯಮಾಡಿಸಲು ಬರೆಸಿದ ವಿಜ್ಞಾಪನಾ ಪತ್ರಿಕೆಯಾಗಿದೆ.

ಶ್ರೀಗಳವರು ಅದರಂತೆ ಮೈಸೂರಿಗೆ ದಯಮಾಡಿಸಿದ ಸಂದರ್ಭದ ದಿನಚರಿಯನ್ನು ಈ ಮುಂದೆ ಕೊಡಲಾಗಿದೆ.

೧೭೭೨ ನೇ ಸಾಧಾರಣ ಸಂವತ್ಸರದ ಮಾಘ ಬಹುಳ ೩ ಬುಧವಾರ ಮೈಸೂರಿಗೆ ದಯಮಾಡಿಸಬೇಕೆಂದು ಶ್ರೀಮನ್ಮಹಾರಾಜ ಪ್ರಭುಗಳ ಅಪ್ಪಣೆಯಾಗಿ. ಶ್ರೀ ಸ್ವಾಮೀ ದಯಮಾಡಿಸಿದ್ದರಿಂದ ಶ್ರೀ ಕಳಸವಾಡೀ ಸಮಾಪಕ್ಕೆ ಬೆಳ್ಳೀಭಾಲೇ, ತುರಾಪಿನ ಕುದುರೆ, ಬಾರು, ಹಲಿಗೆ, ಕಾಳೀತಾಶೇಮರಫೇ, ಯಿಂಗ್ರೇಜೀಭಾಜೇ ಅರಸು ಮಕ್ಕಳು, ಸಮ್ಮುಖದ ವಿದ್ವಾಂಸರು, ಅಠಾರ ಕಚೇರಿಯ ಜನರು, ಸಮೇತ ಶ್ರೀ ಮಹಾರಾಜರು ಇಸ್ತ ಕಪಾಲು ಒಂದು ವಂದನೆ ಮಾಡಿದ್ದರಿಂದಾ, ಶ್ರೀಮಠದಿಂದ ಕಲಬತ್ತು ಶಹಲಜೋಡೀ, ಮುತ್ತಿನ ಕಂಠೀ ಸಹಾ ಕೊಟ್ಟು ಮುಂದಕ್ಕೆ ದಯಮಾಡಿಸಿ ದೊಡ್ಡ ಪೇಟೆಯೊಳಗೆ ಚಿತ್ತೈಸುವ ಕಾಲದಲ್ಲಿ ೨೨ ತೋಪು ಹಾರಿಸಿದರು. ವೀರಣಗೇರಿ ಬಾಗಲಿಗೆ ಶ್ರೀ ತ್ರಿಣೇಶ್ವರ, ವರಾಹಸ್ವಾಮಿ, ಲಕ್ಷ್ಮೀನಾರಾಯಣಸ್ವಾಮಿ ದೇವಸ್ಥಾನದಿಂದ ಫಲ ಪ್ರಸಾದ, ಪೂರ್ಣಕುಂಭ ಮುಂತಾದ್ದು ಮರ್ಯಾದೆಆಗಿ ಅಲ್ಲಿಂದ ಕೋಟೆ ಬಾಗಿಲಲ್ಲಿರುವ ಗಣಪತಿಗೆ ಫಲಸಮರ್ಪಣೆ, ಮಂಗಳಾರತೀ ಮಾಡಿಶಿದ ತರುವಾಯ ಶ್ರೀ ಮಹಾರಾಜರು (ಶ್ರೀ ಮಹಾರಾಜರು ದರ್ಶನಕ್ಕೆ ಬಂದಾರಭ್ಯ ಅರಮನೆಗೆ ಬರುವವರೆಗೂ ಪಾಲಕೀ ಸಂಗಡಲೇ ರಥಾರೂಢರಾಗಿ ಸಂಗಡ ದಯಮಾಡಿಸಿ) ಶ್ರೀಗಳವರನ್ನು ಅರಮನೆಗೆ ಕರೆದು ಕೊಂಡುಹೋಗಿ . . . . . ಬಾಲಾ ಖಾನೆಯಲ್ಲಿ ಬೆಳ್ಳೀ ಚಾಕೀ ಹಾಕಿ ರಾಜಪೂಜೆ ಮುಂತಾದ್ದು ಆಗಿ ದಿನವಂದಕ್ಕೆ ೮೦೦ ಜನಕ್ಕೆ ಅವರ್ ಲವಾಜಮೇ, ಪ್ರಕಾರ ಸೋಪಸ್ಕರ ಕೊಡುವಂತೆ ಅಪ್ಪಣೆ ಆಗಿ ಶ್ರೀ ತ್ರಿಣೇಶ್ವರ ದೇವಸ್ಥಾನದಲ್ಲಿ ಇಳಿಶಿದರು.

ಯಿಾ ಬಹುಳ ೬ ಶುಕ್ರವಾರ ರಾತ್ರಿ ಮಂಗಳಾರತಿ ಕಾಲಕ್ಕೆ ಶ್ರೀ ಮಹಾರಾಜರು ದಯಮಾಡಿಸಿ ಮಂಗಳಾರತೀ ಆಗಿ ತರುವಾಯ ಬೆಳ್ಳೀ ಮಂಟಪ, ಭಂಗಾರದ ಮಂಟಪ, ದೇವರು ಮುಂತಾದ್ದು ಪರಾಂಬರಿಶಿ, ಅರಮನೆಯಲ್ಲ ದೇವತಾರ್ಚನೆಯಾಗಬೇಕೆಂದು ಭಿಕ್ಷಾ, ವಂದನೆ ಮಾಡಿದರು. ಅರಮನೆಗೆ ದಯಮಾಡಿಸುವ ಕಾಲ್ದದಲ್ಲ ಫಲ ಮಂತ್ರಾಕ್ಷತೆ, ಕೆಂಪಿನ ಗಾಸಾ ಹಾರಾ, ಶಹಲಜೋಡೀಸಹಾ ಶ್ರೀ ಮಠದಿಂದ ಶ್ರೀ ಮಹಾರಾಜರಿಗೆ ಅಪ್ಪಣೆ ಆಯಿತು.

ಯಿಾ ಬಹುಳ ೭ ಶನಿವಾರ ಅರಮನೆಯ ಅಂಬಾವಿಲಾಸದಲ್ಲಿ ದೇವರ ಮಂಟಪ ಇಟ್ಟು ಶ್ರೀಗಳನ್ನು ಕರೆದು ಕೊಂಡು ಹೋಗತಕ್ಕದ್ದಕ್ಕೆ ಜಿಲ್ಲೋ ಚೇರಿ, ಜ್ಯಾಮಪ್ಪಾಜಿಯವರಿಗೆ ಅಪ್ಪಣೆ ಆಗಿ ಬೆಳ್ಳೀಭಾಲೆ, ಆನೆಮೇಲೆ ನಗಾರಿ, ಆನೆಮೇಲೆ ನಿಶಾನಿ, ಹಲಿಗೆ, ಕಾಳೀತಾಶೇಮರಫೇ, ಯಿಂಗ್ರೇಜಿಬಾಜೇ, ಮುಂತಾದ್ದು ಬಂದದ್ದರಿಂದ ಶ್ರೀ ದೇವರನ್ನು ಪಾಲಕೀವಳಗಯಿಟ್ಟು ಕೊಂಡು ಹೋಗಿ, ಇಟ್ಟ ತರುವಾಯ ಶ್ರೀ ಗಳವರು ಅರಮನೆಗೆ ದಯಮಾಡಿ ಸುವಲ್ಲಿ, ಬಾಗಿಲ ಹೊರಗೆ, ಧೊರೆಗಳು ಬಂದು ಕರಕೊಂಡು ಹೋದ ತರುವಾಯ ಸುಬ್ಬಾಗಳು ವಾಮಸೇವೇ ತೊಟ್ಟಿಯಲ್ಲಿ ಸ್ನಾನವಾಗಿ ಅಂಬಾವಿಲಾಸಕ್ಕೆ ದಯಮಾಡಿಸಿ, ಭಾಗವತಪುರಾಣ ದೇವತಾರ್ಚನೆ, ಆದ ತರುವಾಯ

ಶ್ರೀ ಗಳವರು ಪುನಹ ತ್ರಿಣೇಶ್ವರ ದೇವಸ್ಥಾನಕ್ಕೆ ದಯಮಾಡಿಶಿ ಭಿಕ್ಷವಾಗಿ ರಾತ್ರೀ ಅರಮನೆಗೆ ಚಿತ್ತೈಸಿ, ಸ್ನಾನವಾಗಿ, ಶ್ರೀ ದೇವರ ಮಂಗಳಾರತಿಯಾದ ತರುವಾಯ ಸಂಸ್ಥಾನದ ವಿದ್ವಾಂಸರು ಸುಬ್ಬಾಶಾಸ್ತ್ರೀ, ಕೇಶವ ಶಾಸ್ತ್ರೀ, ವೆಂಕಟಕ್ರಿಷ್ಣಶಾಸ್ತ್ರಿ, ಸಮ್ಮುಖದ ವಿದ್ವಾಂಸರು ತಿಮ್ಮಣ್ಣಶಾಸ್ತ್ರಿಗಳು, ರಾಮಾಶಾಸ್ತ್ರಿ, ಕಾಶೀಶೇಷಶಾಸ್ತ್ರಿಗಳು ಮುಂತಾದ ವಿದ್ವಾಂಸರು ಸಭಾ ಆಗಿ ಪ್ರಸಂಗವಾಯಿತು. ಆ ತರುವಾಯ ಶ್ರೀ ಮಹಾರಾಜರು ನವರತ್ನ ಕೆತ್ತಿದ ಪದಕ ಸಮೇತ ಮೂರು ಎಳೇ ಮುತ್ತಿನ ಕಂಠೀಕಲಾಬತ್ತು ಶಹಲುಜೋಡಿ, ಪೀತಾಂಬರ, ಶಹರಮಾಲು, ಧೋತ್ರ ಜೋಡು, ನಗದು ೧೦೦೦ ಸಹ ಸಮರ್ಪಣೆ ಮಾಡಿದ್ದರಿಂದ ಫಲಮಂತ್ರಾಕ್ಷತೆ ಅಪ್ಪಣೆ ಆಗಿ, ಶ್ರೀ ಗಳವರು ತ್ರಿಣೇಶ್ವರ ದೇವಾಲಯಕ್ಕೆ ದಯಮಾಡಿಶಿದರು. ಯಿಾ ಬಹುಳ ೮ ಭಾನುವಾರ ತ್ರಿಣೇಶ್ವರ ದೇವಸ್ಥಾನದಲ್ಲ ಅರಮನೇ ಭಿಕ್ಷವಾಯಿತು.

ಯಾ ಬಹುಳ ೧೪ ನೇ ಶನಿವಾರ ಶಿವರಾತ್ರಿಯಾದ್ದರಿಂದ ರಾತ್ರೀ ಎರಡನೇ ಯಾಮ ಪೂಜೇಕಾಲಕ್ಕೆ ಶ್ರೀ ಮಹಾರಾಜರು ದೇವರದರ್ಶನಕ್ಕೆ ಬಂದು ಮಂಗಳಾರತಿಯಾದ ತರುವಾಯ ಫಲಮಂತ್ರಾಕ್ಷತೆಯಾಗಿ ಸಂಸ್ಥಾನದ ವಿದ್ವಾಂಸರನ್ನ ಅರಮನೆಗೆ ಬರಬೇಕೆಂದು ಅಪ್ಪಣೆಕೊಟ್ಟು ದಯಮಾಡಿದ್ದರಿಂದ ಶ್ರೀಮಠದ ಬ್ರಾಹ್ಮಣರು, ಸರ್ವರೂ ಅರಮನೆಗೆ ಹೋದ್ದರಿಂದ ಶ್ರೀಮಹಾರಾಜರು ಅಂಬಾವಿಲಾಸದಲ್ಲಿ ಶಿವಪೂಜೆ ಮಾಡಿ, ಮಠದ ಬ್ರಾಹ್ಮಣರಿಗೆ ಹೂವು, ಗಂಧ, ತಾಂಬೂಲ, ದಕ್ಷಿಣೆ ಸಹಾ ಕೊಡಿಸಿ ಪ್ರಾತಃಕಾಲದವರೆಗೆ ಸಂಗೀತ ಮುಂತಾದ ವುತ್ಸವದಿಂದ ಜಾಗರಣೆ ಮಾಡಿದರು . . . . . .

ಯಾ ಬಹುಳ ೩೦ ಭಾನುವಾರ ಫಾಲ್ಗುಣ ಶುದ್ಧ ೧ ಸೋಮವಾರ ಸಹಾ ದೇವಸ್ಥಾನದಲ್ಲಿ ಅರಮನೇ ಭಿಕ್ಷವಾಯಿತು.

ಯಾ ಶುದ್ಧ ೧ ಮಂಗಳವಾರ ಅರಮನೆಯಿಂದ ಭಿಕ್ಷವಾಗಿ ಶ್ರೀ ಸ್ವಾರಿ ಸಂಧ್ಯಾಕಾಲದಲ್ಲಿ ಪ್ರಯಾಣ ಮಾಡಿಸಿದ್ದರಿಂದ ಶ್ರೀ ಮಹಾರಾಜರು, ಅಠಾರ ಕಚೇರಿ ಜನರು, ಸಮಸ್ತ ಬಿರುದುಗಳು ಮುಂತಾದ್ದರಿಂದ ಸಂಗಡ ಬಂದು ಅರ್ಧ ಹರದಾರಿ ಪರ್ಯಂತರಕ್ಕೂ ಬಂದು ಕಳುಹಿಸಿ ಕೊಟ್ಟದ್ದರಿಂದ ರಾತ್ರೀಕ ಕೋಳದ ಮುಕ್ಕಾಮು ಆಯಿತು.

ಈ ಶುದ್ಧ ೨ ಬುಧವಾರ ನಂಜನಗೂಡಿಗೆ ಚಿತ್ತೈಸಿದ್ದರಿಂದ ಮಾಮಲೇದಾರರು, ಶಿರಸ್ತೇದಾರರು ಮುಂತಾದ ಜನರು ಚಂದ್ರಶೇಖರ ಶ್ರೌತಿಗಳು, ವೆಂಕಟದೀಕ್ಷಿತರು, ಸುಬ್ಬಾಭಟ್ಟರು ಮುಂತಾದ ಅಶೇಷರು, ದೇವಸ್ಥಾನದ ಪಾರುಪತ್ತೇಗಾರರು, ಶ್ಯಾನುಭೋಗರು ಅರ್ಚಕರು ಮುಂತಾದವರು ಇಸ್ತಕಬಾಲು ಬಂದು ಸಮಸ್ತ ಬಿರುದುಬಾವಲಿಯಿಂದ ಶ್ರೀಕಂಠೇಶ್ವರ ದೇವಸ್ಥಾನಕ್ಕೆ ದಯಮಾಡಿಸಿ ಶ್ರೀ ಮಹಾರಾಜರು ಕಟ್ಟಿಸಿರುವ ಗೋಪುರದ ಮಹಾದ್ವಾರದವಳಗೆ ಪ್ರಾಕಾರದಲ್ಲಿಯಿರುವ ವಸಂತಮಂಟಪದ ಹತ್ತಿರ ಪಾಲಖೀ ಇಳಿದು ಉಭಯ ಅಪ್ತಾಗಿರಿ, ಉಭಯ ಶ್ವೇತಛತ್ರ, ಪಂಚದೀವಟಿಗಿ, ಸಪ್ತದೀವಟಿಗಿ, ಚೌರಿ, ಮೊಹಜರ್ಾಲು, ಭಂಗಾರದ ಬೆತ್ತ, ಬೆಳ್ಳಿ ಬೆತ್ತ, ಮುಂತಾದ ಬಿರುದುಗಳು, ಭಜಂತ್ರೀ, ಡವಣೆ, ಸಮ್ಮೇಳ, ಚಂದ್ರವಾದ್ಯ, ಸೂರ್ಯವಾದ್ಯ, ಧವಳಶಂಖು, ಕರ್ಣೇ, ಕಾಳೇ ಮುಂತಾದ ವಾದ್ಯವಿಶೇಷಗಳಿಂದ ದೇವಸ್ಥಾನದವಳಗೆ ದಯಮಾಡಿಸಿ ಪ್ರಾಕಾರದಲ್ಲಿರುವ ಶ್ರೀ ಪ್ರಸನ್ನ ಗಣಪತಿ ದರ್ಶನಾ ತೆಗೆದುಕೊಂಡು ಅನಂತರ ಶ್ರೀಕಂಠೇಶ್ವರಸ್ವಾಮಿ, ಅಮ್ಮನವರು, ಉತ್ಸವ ಮೂರ್ತಿ, ಲಕ್ಷ್ಮೀನಾರಾಯಣ ಸಭಾಪತಿ ಮುಂತಾದ ದೇವರಿಗೆ ಕಾಣಿಕೆ ಫಲ ಸಮರ್ಪಣೆ ಮಾಡಿಸಿ ಪ್ರಾಕಾರದಲ್ಲಿರುವ ಪಂಚಲಿಂಗಗಳು, ಲೀಲಾ ಮೂರ್ತಿ ದರ್ಶನಾ ತೆಗೊಂಡು (ಮಹಾರಾಜವಡೆಯರ ಪ್ರತಿಮಾ ನೋಡಿ ಮರ್ಯಾದಾ ಮಾಡಿ) ಅಲ್ಲಿಂದ ವಸಂತ ಮಂಟಪದಲ್ಲಿ ಕೂತುಕೊಂಡು ಅಲ್ಲಿಂದ . . . . . . . ನವರ ಮನೆಯಲ್ಲಿ ಮಾಮಲೇದಾರರು ಹುಜೂರು ಅಪ್ಪಣೆ ಪ್ರಕಾರ ಹಾನಗಲ್ಲು ಶ್ರೀನಿವಾಸರಾಯರು ಸಹಾ ಇಳಕೊಂಬುವುದಕ್ಕೆ ಸ್ಥಳಮಾಡಿಸಿ ಇದ್ದುದ್ದರಿಂದ ಅಲ್ಲಿಗೆ ದಯಮಾಡಿಸಿ ಸರ್ವರಿಗೂ ಫಲಮಂತ್ರಾಕ್ಷತೆ ಅಪ್ಪಣೆಆಗಿ ಕಪಿಲಾನದಿ ಸ್ನಾನಕ್ಕೆ ಚಿತ್ತೈಸಿ, ಸ್ನಾನ, ದೇವತಾರ್ಚನೆ ಸಹಾ ಆಯಿತು.

ಈ ಶುದ್ಧ ೩ ಗುರುವಾರ ಸಂಧ್ಯಾಕಾಲಕ್ಕೆ ಶ್ರೀ ಮಹಾರಾಜರು ಶ್ರೀಗಳವರ ದರ್ಶನಕ್ಕೆ ದಯಮಾಡಿಸಿ ದರ್ಶನಾ ತೆಗೆದುಕೊಂಡು ಮಂಗಳಾರತಿ ಆದ ತರುವಾಯ ಚಾಮರಾಜನಗರಕ್ಕೆ ಹೋಗಿ ಬರುತ್ತೇವೆ. ಬರುವ ವರಿಯಂತರಾ ಸ್ವಾರೀ ಈ ಸ್ಥಳದಲ್ಲಿ ಇರಬೇಕು. ತಾವು ಬಂದ ತರುವಾಯ ದೇವರಿಗಿ ಮಾಡಿಸಿ ಕೊಟ್ಟಂಥಾ ವಾಹನಗಳು, ಆಭರಣಗಳು ಮುಂತಾದ್ದು ತೋರಿಸುತ್ತೇವೆಂತಾ ಅರಿಕೆ ಮಾಡಿಕೊಂಡು ಫಲಮಂತ್ರಾಕ್ಷತೆ ತೆಗೆದುಕೊಂಡು

ಈ ಶುದ್ಧ ೬ ಭಾನುವಾರ ಶ್ರೀಮಠದಿಂದಾ ವೃಷಭೋತ್ಸವ ಮಾಡಿಸಿ 10 ಗಂಟೆಗೆ ಶ್ರೀಗಳವರು ದೇವರ ದರ್ಶನಕ್ಕೆ ದೇವಾಲಯಕ್ಕೆ ದಯಮಾಡಿಸಿ ದೇವರ ದರ್ಶನವನ್ನು ತೆಗೆದುಕೊಂಡು ತಿರುಗಿ ಮಹಾದ್ವಾರಕ್ಕೆ

ದಯಮಾಡುವುದರಲ್ಲಿ ದೊರೆಗಳು ಅರಮನೆಯಿಂದ ಪಾದಚಾರಿಗಳಾಗಿ ಬಂದು, ಶ್ರೀಗಳವರ ದರ್ಶನ ತೆಗೆದುಕೊಂಡು ಮಠಕ್ಕೆ ಸಹಸ್ರ ರೂಪಾಯಿ ವರ್ಷಾಶನಾ ಸರ್ವಾಧಿಕಾರಿಗಳಿಗೆ, ಕೇಶವಶಾಸ್ತ್ರಿಗಳು, ಸುಬ್ರಾಯಶಾಸ್ತ್ರಿಗಳಿಗೆ ಸಹಾ ಸಂಬಳ ಮಾಡಿಸಿದ್ದೇವೆ, ಅನುಗ್ರಹ ಮಾಡಬೇಕೂಂತ ಪಾದಸ್ಪರ್ಶಮಾಡಿ ಪುತ್ರನ ಕರಕೊಂಡು ಹೋಗಿ ಎರಡು ಘಳಿಗೆ ಕೂತು ಇದ್ದು ಅಲ್ಲಿಂದಾ ಶ್ರೀಗಳವರು ಇಳಿದ ಮನೆಗೆ ದಯಮಾಡಿಸಿದರು. ಆ ತರುವಾಯ ಖಾಸಗೀವಾರಿ ಪುನಹ ಮಠಕ್ಕೆ ಬಂದು ಫಲಮಂತ್ರಾಕ್ಷತೆ ತೆಗೆದುಕೊಂಡು ಮೈಸೂರಿಗಿ ಹೋಗಿಬರುತ್ತೇವೆಂತಾ ಅರಿಕೆ ಮಾಡಿಕೊಂಡು ದಯಮಾಡಿದರು.

## G. ಚೀಫ್ ಕಮೀಷನರ ಆಡಳಿತ ಕಾಲ

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ರಾಜ್ಯಭಾರದಲ್ಲಿ ತರೀಕೆರೆ ರಂಗಪ್ಪನಾಯಕನೆಂಬುವನು ದಂಗೆ ಯೆದ್ದನು. ಕೆಳದಿ ಪಾಳೆಯಗಾರರ ಉತ್ತರಾಧಿಕಾರಿಯೆಂದೊಬ್ಬನು ಹೊರಬಿದ್ದನು. ಇದರಿಂದಾಗಿ ಮೈಸೂರ ರಾಜ್ಯದ ಕೆಲವೆಡೆ ಗಲಭೆಗಳಾದವು. ಸ್ವತಃ ಮಹಾರಾಜರೇ ಸವಾರಿಹೊರಟು ಅದನ್ನಡಗಿಸಿದರು. ಮಹಾರಾಜರು ದಂಗೆಯ ನ್ನಡಗಿಸಲು ಸಮರ್ಥರಾಗಲಿಲ್ಲವೆಂಬ ದೋಷವನ್ನಾರೋಪಿಸಿ ಗವರ್ನರ್ ಜನರಲ್‌ರ ಆಜ್ಞೆಯಂತೆ ಬ್ರಿಟಿಷ್ ಕಮೀಷನರು ಕಂಪನಿ ಸರಕಾರದ ಪರವಾಗಿ ಮೈಸೂರು ರಾಜ್ಯಭಾರವನ್ನು ವಹಿಸಿದರು. ಅದು ಐವತ್ತು ವರ್ಷ (1831–1881) ಗಳ ಕಾಲ ನಡೆಯಿತು. ಆ ಕಾಲದ ಹದಿನಾಲ್ಕು ದಸ್ತೈವಜುಗಳನ್ನು ಈ ವಿಭಾಗದಲ್ಲಿ ಮುದ್ರಿಸಲಾಗಿದೆ. ಇದರಲ್ಲಿ ಎರಡು ಕೋರ್ಟು ತೀರ್ಪುಗಳಿವೆ.

ಮೊದಲಿನ ಮೂರು (ಸಂಖ್ಯೆ ೪೦೯–೪೧೦–೪೧೧) ನಿರೂಪಗಳು ಶ್ರೀಮಠಕ್ಕೆ ದೊರೆಯಬೇಕಾದ ಹಣ, ಹತ್ತು ಮಣ ಗಂಧ, ಸುಂಕ ವಿನಾಯಿತಿ, ಮತ್ತು ದೇಶಸಂಚಾರ ರಹದಾರಿಗಳ ಬಗ್ಗೆ ಕೊಟ್ಟ ಚೀಫ್ ಕಮೀಷನರ ಆಜ್ಞೆಗಳಾಗಿವೆ. ತರೀಕೆರೆ ತಾಲ್ಲೂಕ್ ದೇಮಪುರ ಜೋಡಿ ನಿರ್ಣಯಿಸಿ ಗ್ರಾಮಕ್ಕೆ ಮಠದ ಪ್ರತಿನಿಧಿ ನರಸಿಂಹ ಭಟ್ಟನಿಗೆ ನಗರ ತುಕಡಿ ಸೂಪರಿಂಟೆಂಡೆಂಟ್‌ರು ಕೊಟ್ಟ ಆಜ್ಞೆಯು ೪೧೨ನೆಯ ನಿರೂಪವಾಗಿದೆ.

ನಗರದ ತುಕಡಿ ಸೂಪರಿಂಟೆಂಡೆಂಟರು, ಶಿವಮೊಗ್ಗೆಗೆ ಶ್ರೀಮಠದ ಶ್ರೀ ಶ್ರೀಗಳವರು ಬಿರುದುಬಾವಲಿ ಸಮೇತ ದಯಮಾಡಿಸಲು ಶೃಂಗೇರಿಮಠದವರು ಮಾಡಿದ ತಕರಾರಿಗೆ ವಿರುದ್ಧವಾಗಿ ಕೊಟ್ಟ ಆರ್ಡರು ಮತ್ತು ದೇಶಸಂಚಾರದ ರಹದಾರಿಗೆ ಸಂಬಂಧಪಟ್ಟ ನಿರೂಪಗಳು ೪೧೩ ರಿಂದ೪೨೧ ರವರೆಗಿನವುಗಳಾಗಿವೆ.

ಶೃಂಗೇರಿ ಮಠದವರು, ಕೂಡಲಿ ಶೃಂಗೇರಿಮಠ ತುಂಡು ಮಠ ಇದಕ್ಕೆ ಬಿರುದು ಬಾವಲಿಗಳಿಲ್ಲ ಎಂಬುದಾಗಿ AD 1842ರಲ್ಲಿ ನಗರ ತುಕಡಿ ಸೂಪರಿಂಟೆಂಡೆಂಟರ ಕೋರ್ಟಿನಲ್ಲಿ ದಾವಾ ಹಾಕಿದರು. ಅವರು ಕೆಲವು ಮಟ್ಟಿಗೆ ವಿಚಾರಮಾಡಿ ಅದನ್ನು ನಗರದ ಮುನಸೀಫ್ ಕೋರ್ಟಿಗೆ ವಿಚಾರಣೆ ಮಾಡಲು ಕಳಿಸಿದರು ಮುನಸೀಫರು ಶ್ರೀ ಮಠದ ವಿರುದ್ಧ ಮಾಡಿದ ತೀರ್ಪಿನ ಮೇಲೆ ಮಠದವರು ಹುಜೂರ್ ಅದಾಲತ್ ಕೋರ್ಟಿಗೆ ಅಪೀಲು ಮಾಡಿದರು, ಆ ಕೋರ್ಟಿನವರು ಕೂಡ್ಲಿ ಶೃಂಗೇರಿಮಠವು ತುಂಡುಮಠವಲ್ಲ; ಸ್ವತಂತ್ರ ಮಠ; ಇದಕ್ಕೆ ಸಮಸ್ತ ರಾಜಮರ್ಯಾದೆ ಗಳೂ ಉಂಟು, ಎಂದು ತೀರ್ಪಿತ್ತರು. ಇದರ ಮೇಲೆ ಶೃಂಗೇರಿ ಮಠದವರು ಚೀಫ್‌ಕಮೀಷನ್ನರ ಕೋರ್ಟಿನಲ್ಲಿ ಅಪೀಲು ಹಾಕಿದರು ಅವರೂ ಕೂಡಲೀ ಶೃಂಗೇರಿ ಮಠದ ಪರವಾಗಿಯೇ ತೀರ್ಪಿತ್ತರು. ಈ ಅಂಶವನ್ನು ೪೨೧ ಮತ್ತು ೪೨೨ ನೆಯ ನ್ಯಾಯ ತೀರ್ಮಾನಗಳು ತಿಳಿಸುತ್ತವೆ.

1852 ರಲ್ಲಿ ಮೈಸೂರಿಗೆ ಶ್ರೀ ಶಂಕರ ಭಾರತೀ ಸ್ವಾಮಿಗಳು ದಯಮಾಡಿಸಿದಾಗ ಅಷ್ಟಗ್ರಾಮ ಡಿವಿಜನ್ ಸೂಪರಿಂಟೆಂಡೆಂಟ್ ರವರು ಕೊಟ್ಟ ರಹದಾರಿಯು ೪೨೩ ನೆಯದಾಗಿದೆ.

### H ಇತರೆ

ಹನುಮನಹಳ್ಳಿ ಪಾರಬಗಟ್ಟೆ ಮಾಡಾಳು ದಂದೂರು ಹೆಸರೂರು ಚಿಕ್ಕಕೂಡ್ಲಿ ಗ್ರಾಮಗಳಿಗೆ ಸಂಬಂಧ ಪಟ್ಟಂತೆ ರಾಜ್ಯದ ಅಧಿಕಾರಿಗಳು ಕೊಟ್ಟ ನಿರೂಪಗಳನ್ನು ಶ್ರೀ ಕೂಡಲೀ ಶಾರದಾಂಬನವರ ದೀಪಾರಾಧನೆ ಕಾಣಿಕೆ, ಮತ್ತು ಆಚಾರ ವಿಚಾರಗಳಿಗೆ ಸಂಬಂಧಪಟ್ಟ ನಿರೂಪಗಳನ್ನು ಈ ವಿಭಾಗದಲ್ಲಿ ಮುದ್ರಿಸಲಾಗಿದೆ.

---

## ಏಳನೆಯ ಭಾಗ

## ಮಹಾರಾಷ್ಟ್ರ ಸಂಸ್ಥಾನಗಳು

### A. I. ಛತ್ರಪತಿಗಳು (ಸಾತಾರೆ)

ವಿಜಯನಗರದ ಪತನಾನಂತರ ದಕ್ಷಿಣದಲ್ಲಿ ಪ್ರಬಲರಾದ ಮಹಮ್ಮದೀಯರಿಂದ ಉಂಟಾದ ದೇಶೋಪ ದ್ರವವನ್ನು ನಿವಾರಿಸಲು ಗೋಬ್ರಾಹ್ಮಣ ಪರಿಪಾಲಕರಾದ ಶಿವಾಜಿ ಮಹಾರಾಜರು ಅವತರಿಸಿ ಮಹಾರಾಷ್ಟ್ರ ರಾಜ್ಯ ಸ್ಥಾಪನೆಮಾಡಿದರು. A.D. 1664 ರಲ್ಲಿ ಗಾಗಾಭಟ್ಟರು ಶಿವಾಜಿಮಹಾಜರಿಗೆ ಕ್ಷತ್ರಿಯೋಚಿತ ಸಂಸ್ಕಾರಮಾಡಿ ಸುವರ್ಣಸಿಂಹಾಸನದಲ್ಲಿ ಪಟ್ಟಾಭಿಷೇಕ ನಡೆಯಿಸಿ ಛತ್ರಪತಿಗಳನ್ನಾಗಿಸಿದರು. ಶಿವಾಜಿಮಹಾರಾಜರ ಇಬ್ಬರು ಮಕ್ಕಳಿಂದ ಸಾತಾರೆ, ಕೊಲ್ಹಾಪುರ ಎಂಬ ಎರಡು ಸಂಸ್ಥಾನಗಳಾದವು. ಶಿವಾಜಿಯ ಮಗ ಸಾಂಬಾಜಿಯ ವಂಶವು ಸಾತಾರೆಯಲ್ಲಿ ಮುಂದುವರಿಯಿತು. ಸಾತಾರೆಯ ಛತ್ರಪತಿಗಳ ಎಂಟು ಸನ್ನದುಗಳನ್ನು ಇಲ್ಲಿ ಮುದ್ರಿಸಲಾಗಿದೆ.

ಮೊದಲನೆಯ ಸನ್ನದು (ಸಂಖ್ಯೆ–೪೩೫) ಕ್ಷತ್ರಿಯ ಕುಲಾವತಂಶ ರಾಜಾಶಂಭು ಛತ್ರಪತಿಯವರು ನರ ಗುಂದದಲ್ಲಿ ಶ್ರೀಗಳವರ ದರ್ಶನ ಪಡೆದು ಶ್ರೀಮಠಕ್ಕೆ ಎರಡುನೂರು ಹೊನ್ನು ವರ್ಷಾಶನ ಕೊಡಲು ಹಿರಮೂ ರಾವಘೋರ್ಪಡೆ ಇವರಿಗೆ ಕೊಟ್ಟ ಆಜ್ಞೆಯನ್ನು ತಿಳಿಸುತ್ತದೆ.

ಬಿದನೂರು ಮತ್ತು ಶ್ರೀರಂಗಪಟ್ಟಣದ ಸಂಸ್ಥಾನಿಕರಿಗೆ ರಾಜಾಶಾಹು ಛತ್ರಪತಿಯವರು ಶ್ರೀ ಸ್ವಾಮಿಗಳ ವರನ್ನು ತಾವು ಸತ್ಕರಿಸಿದ ವಿಚಾರ ತಿಳಿಸಿ ಅವರು ಅದರಂತೆ ಸತ್ಕರಿಸಬೇಕೆಂದು ತಿಳಿಸಿರುವ ಅಂಶವನ್ನು ಸಂಖ್ಯೆ ೪೩೬ ರಿಂದ ೪೩೯ ರವರೆಗಿನ ಲೇಖನಗಳು ತಿಳಿಸುತ್ತವೆ.

ಛತ್ರಪತಿಗಳ ಕಡೆಯ ಬಾಪುಜಿ, ಕೇಶವ ಶುಭೇದಾರರು, ಸುಂಕದರುಸುವಿನ ಮೇಲೆ ಒಂದು ಹೇರಿಗೆ ಎರಡುಹೊನ್ನಿನಂತೆ ವರ್ಷಾಶನ ಶ್ರೀ ಮಠಕ್ಕೆ ಕೊಟ್ಟಿದ್ದನ್ನು ೪೪೦ ಮತ್ತು ೪೪೧ನೆಯ ಸನ್ನದುಗಳು ತಿಳಿಸುತ್ತವೆ.

ಸಾತಾರೆಯ ಕೊನೆಯ ಅರಸರಾದ ಶಾಹುಜಿರಾಜೆ ಇವರು ಶ್ರೀ ಶ್ರೀಗಳವರು ತಮಗೆ ಸಂದರ್ಶನ ಕೊಡಲು ಪ್ರಾರ್ಥಿಸಿದ ವಿಜ್ಞಾಪನಾ ಪ್ರತಿಕೆಯು ೪೪೨ ನೆಯದಾಗಿದೆ.

### A-2 ಛತ್ರಪತಿಗಳು (ಕೊಲ್ಹಾಪುರ)

ಕೊಲ್ಹಾಪುರದ ಮಹಾರಾಜರಾದ ರಾಜಾ ಶಾಹೂ ಛತ್ರಪತಿಗಳು ಶ್ರೀ ಶಂಕರ ಭಾರತೀ ಶ್ರೀಗಳವರನ್ನು ಕೊಲ್ಹಾಪುರಕ್ಕೆ ಆಹ್ವಾನಿಸಿ ಅವರಿಗೆ ಕಂಕಣವಾಡಿ ತಾಲ್ಲೂಕಿನ ದೇವಪುರ ಹಟ್ಟಿ, ಕಟಕ ಭಾವಿ ಎಂಬ ಎರಡು ಗ್ರಾಮ ಗಳನ್ನು ದಾನವಾಡಿದ ವಿಷಯವನ್ನು ಸಂಖ್ಯೆ ೪೪೩, ೪೪೪, ೪೪೫ನೇ ಲೇಖನ, ದಾನ ಶಾಸನ ಮತ್ತು ನಿರೂಪಗಳು ತಿಳಿಸುತ್ತವೆ.

## B. ಪೇಶ್ವೆಗಳು—B.I. ಬಾಳಾಜೀ ಬಾಜೀರಾಯ (ನಾನಾ ಸಾಹೇಬ)ರ ಕಾಲ.

ಛತ್ರಪತಿ ಶಿವಾಜಿ ಮಹಾರಾಜರ ಮಗನಾದ ಸಾಂಭಾಜಿಯನ್ನು ಔರಂಗಜೇಬನು ಮುಸ್ಲಿಂ ಧರ್ಮಕ್ಕೆ ಸೇರಿಸಲು ಬಲಾತ್ಕರಿಸಿ ಅದಕ್ಕೊಪ್ಪದ್ದರಿಂದವನನ್ನು ಕೊಲ್ಲಿಸಿದನು. ಅವನ ಮಗನಾದ ಶಾಹುವನ್ನು ದಿಲ್ಲಿಗೆ ಕರೆದುಕೊಂಡು ಹೋದನು. ಔರಂಗಜೇಬನ ನಿಧನಾನಂತರ ಶಾಹುವು ದಿಲ್ಲಿಯಿಂದ ಹಿಂದಿರುಗಿ ಬಂದು ಸಾತಾರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರವನ್ನು ನಡೆಯಿಸಿದನು.

ಶಾಹು ಮಹಾರಾಜನಿಗೆ ಪಟ್ಟಗಟ್ಟಿ ಮಹಾರಾಷ್ಟ್ರ ರಾಜ್ಯದಲ್ಲಿನ ಅನಾಯಕತ್ವವನ್ನು ಹೋಗಲಾಡಿಸಿ ಸುವ್ಯವಸ್ಥೆಯನ್ನುಂಟುಮಾಡಿದ ಕೀರ್ತಿ ಅವನ ಮುಖ್ಯ ಮಂತ್ರಿಯೂ ಪೇಶ್ವೆಗಳಲ್ಲಿ ಮೊದಲನೆಯವನೂ ಆದ ಬಾಳಾಜೀ ವಿಶ್ವನಾಥನದು ಅವನ ಕಾಲ A.D. 1714 ರಿಂದ 1720.

ಅನಂತರ ಅವನ ಮಗನಾದ ಬಾಜೀರಾಯನು ಪುಣೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು A.D. 1721 ರಿಂದ 1740 ರವರೆಗೆ ಪೇಷ್ವೆಯಾಗಿದ್ದನು.

ಬಾಜೀರಾಯನ ಜ್ಯೇಷ್ಠ ಪುತ್ರನಾದ ಬಾಳಾಜೀ ಬಾಜೀರಾಯನು 1740 ರಿಂದ 1761 ರವರೆಗೆ ಪೇಷ್ವೆ ಪದವನ್ನಲಂಕರಿಸಿದ್ದನು. ಇವನ ಕಾಲದಲ್ಲ "ದೇಕಾರ" ಎಂಬ ಹೆಸರಿನಿಂದ ಬ್ರಾಹ್ಮಣ ವಿದ್ವಾಂಸರಿಗೆ ವಿಶೇಷವಾದ ದಕ್ಷಿಣೆ ದೊರಕುತ್ತಿತ್ತು.

ಮೂರನೆಯ ಶಂಕರ ಭಾರತೀ ಶ್ರೀಗಳವರಿಗೆ ಸಾತಾರೆಯ ಶಾಹೂ ಛತ್ರಪತಿಯು ಮಾಡಿದ ಸತ್ಕಾರವನ್ನುಲ್ಲೇಖಿಸಿ ಪೇಷ್ವೆ ಬಾಳಾಜೀ ಬಾಜೀರಾಯನು ಬಿದನೂರು, ಶ್ರೀರಂಗಪಟ್ಟಣ, ಹರಪನ ಹಳ್ಳಿ ಮತ್ತು ಸೋದೆ ಸಂಸ್ಥಾನಿಕರಿಗೆ ಅಲ್ಲದೆ ಸರ್ವಾಧಿಕಾರಿ. ಕಳಲೆ ನಂಜರಾಜ ಇವರುಗಳಿಗೆ ಬರೆದ ಪತ್ರಗಳು. ೪೪೬ ರಿಂದ ೪೫೭ರ ವರೆಗಿನವುಗಳಾಗಿವೆ.

ಹರಪನ ಹಳ್ಳಿ ತಾಲ್ಲೂಕು ಮಣ್ಣಮೈಲಾರ ಮತ್ತು ಕಾಟವಾನ ಹಳ್ಳಿ ಗ್ರಾಮಗಳನ್ನು ಪುನಃ ದಾನಮಾಡಿದ ವಿಚಾರವು ೪೫೭ ರಿಂದ ೪೫೮ ರವರೆಗಿನ ಸನ್ನದುಗಳಿಂದ ತಿಳಿಯುತ್ತದೆ.

೪೪೬ ಮತ್ತು ೪೫೮ ನೆಯ ಲೇಖನಗಳು ದೇಶ ಸಂಚಾರದ ರಹದಾರಿಗಳಾಗಿವೆ.

ಮೈಲಾರದ ಉಪಗ್ರಾಮಗಳಲ್ಲೊಂದಾದ ರಾಮಾಪುರವು ತನಗೆ ನಡೆಯುತ್ತಿತ್ತೆಂದು ಬಿದನೂರ ಕರ ಮಠದ ಜಂಗಮನು ಪೇಷ್ವೆ ಸರಕಾರದಲ್ಲಿ ಸುಳ್ಳು ಹೇಳಿ ಪಡೆದಿದ್ದ ಸನ್ನದನ್ನು ನಿರಾಕರಿಸಿ, ರಾಮಪುರ, ಲಹಲಾಪುರ, ಮಲ್ಲಾಪುರ ಮತ್ತು ಸೋಮಲಾಪುರಗಳೆಂಬ ನಾಲ್ಕು ಉಪಗ್ರಾಮಗಳೊಡನೆ ಮೈಲಾರ ಗ್ರಾಮವನ್ನು ಶ್ರೀ ಮಠಕ್ಕೆ ನಿರಾತಂಕವಾಗಿ ಮುಂದುವರಿಸಿಕೊಂಡು ಹೋಗಲು ಕೊಟ್ಟ ಆಜ್ಞೆಯನ್ನು ೪೫೯ ನೆಯ ನಿರೂಪವು ತಿಳಿಸುತ್ತದೆ.

ಪೇಷ್ವೆಯವರ ಮೊಕ್ಕಾಮು ಸವನೂರ ಪರಗಣೆಯ ಅರಳಿ ಹಳ್ಳಿಯಲ್ಲಿದ್ದಾಗ ಶ್ರೀ ಶಂಕರ ಭಾರತೀ ಶ್ರೀಗಳವರ ಪ್ರತಿನಿಧಿ ಬಿಷ್ಟಂಭಟ್ಟರು ಸಂದರ್ಶಿಸಿ ತಿಳಿಸಿದ್ದನ್ನನುಸರಿಸಿ ಬಾಗೂರು ಸೀಮೆಯ ಮಾರಬಗಟ್ಟೆ ಗ್ರಾಮವನ್ನು ಚಿತ್ರದುರ್ಗ ಸಂಸ್ಥಾನಿಕರು ಅವರು ಕೊಟ್ಟ ದಾನದಂತೆ ಮುಂದುವರಿಸಿಕೊಂಡು ಹೋಗುವಂತೆ ಏರ್ಪಡಿಸಬೇಕೆಂದು ಪೇಷ್ವೆಯವರು ತಮ್ಮ ಕಾರಭಾರಿ ವಿಸಾಜಿ ಕೃಷ್ಣ ಇವರಿಗೆ ಕೊಟ್ಟ ನಿರೂಪವು ೪೬೦ ನೆಯದಾಗಿದೆ.

ಹರಪನ ಹಳ್ಳಿ ಸಂಸ್ಥಾನಿಕ ಬಾಗಳಿ ಸೋಮಶೇಖರ ನಾಯಕರಿಗ ಸೋಮಲಾಪುರ ಗ್ರಾಮವನ್ನು ಮುಂದುವರಿಸಿಕೊಂಡು ಹೋಗಲು ಕೊಟ್ಟ ನಿರೂಪವು ೪೬೧ ನೆಯದಾಗಿದೆ.

## B 2. ಮಾಧವರಾವ ಬಲ್ಲಾಳರ ಆಳ್ವಿಕೆ

ಬಾಳಾಜೀ ಬಾಜೀರಾಯರ ಜ್ಯೇಷ್ಠ ಪುತ್ರ ಪೇಷ್ವೆ ಮಾಧವರಾಯರು A.D.1761 ರಿಂದ 1774 ರವರೆಗೆ ಸಾತಾರೆಯ ಛತ್ರಪತಿ ರಾಜಾರಾಮನ ಪ್ರಧಾನನಾಗಿ ರಾಜ್ಯಭಾರ ಮಾಡಿದರು.

ಮೂರನೆಯ ಶ್ರೀ ಶಂಕರ ಭಾರತೀ ಶ್ರೀಗಳವರು ಯವನರ ಉಪದ್ರವದಿಂದ ಕರ್ನಾಟಕ ಪ್ರಾಂತ ಬಿಟ್ಟು ಮಹಾರಾಷ್ಟ್ರ ಪ್ರಾಂತಕ್ಕೆ ಬಂದದ್ದನ್ನು ಸ್ವಾಗತಿಸಿ ತಮ್ಮ ಆಶೀರ್ವಾದದಿಂದ ಯವನ ಶಾಸನ ನಾಡುವೆನೆಂದು ವಿಜ್ಞಾಪಿಸಿರುವ ಅಂಶವು ೪೬೨ ನೇ ಲೇಖನದಿಂದ ತಿಳಿಯುತ್ತದೆ.

ಶ್ರೀ ಸ್ವಾಮಿಗಳಿಗೆ ಧಾರವಾಡ, ಕೊಪ್ಪಳ

ಕೊಲ್ಲಾಪುರ, ಬಂಕಾರಿಪುರಗಳಲೂ ಸತ್ಕರಿಸುವ ವಿಷಯಕ್ಕೂ ಮತ್ತು ಸಂಚಾರ ಕಾಲದಲ್ಲಿ ಮಾರ್ಗ ಮಧ್ಯೆ ಮಾಡತಕ್ಕ ಏರ್ಪಾಡುಗಳಿಗೂ ಕೊಟ್ಟ ನಿರೂಪಗಳು. ೪೬೩ ರಿಂದ ೪೬೬ ರವರೆಗಿನವುಗಳಾಗಿವೆ.

ಕರ್ನಾಟಕ ಪ್ರಾಂತದ ಅಂದಿನ ಮತ್ತು ಮುಂದಿನ ಅಧಿಕಾರಿಗಳಿಗೆ ಶ್ರೀಮಠಕ್ಕೆ ನಡೆಯುವ ಗ್ರಾಮ ಭೂಮಿಗಳು, ಸುಂಕದ ರುಸುಮು ಮತ್ತು ಕಾಣಿಕೆಗಳನ್ನು ಸಾರೋದ್ಧಾರವಾಗಿ ನಡೆಯಿಸಿಕೊಂಡು ಹೋಗಲು ಕೊಟ್ಟ ನಿರೂಪವು ೪೬೭ ನೆಯದಾಗಿದೆ.

೪೬೮ ನೆಯ ನಿರೂಪವು ರಾಯದುರ್ಗ ಸಂಸ್ಥಾನಿಕರಾದ ಶಿವಪ್ಪನಾಯಕರಿಗೆ ಶ್ರೀಮಂತ ಮಾಧವರಾಯರು ಮೇಲೆ ಕಂಡಂತೆ ಬರೆದುದಾಗಿದೆ.

ನವಾಬ ಹೈದರಾಲಿಖಾನ ಬಹದ್ದೂರ್ ಇವರಿಗೆ ಶ್ರೀಮಂತ ಮಾಧವರಾಯರು ಶ್ರೀಮಠಕ್ಕೆ ಪೂರ್ವಾರಭ್ಯ ನಡೆಯುತ್ತಿದ್ದ ಧರ್ಮಾದಾಯಗಳನ್ನು ಯಥಾಪ್ರಕಾರ ಮುಂದುವರೆಸಿಕೊಂಡು ಹೋಗಲು ಬರೆದ ಲೇಖನ ೪೬೯ ನೆಯದು.

ವಿಜಾಪುರದ ಬಾದಶಹರಾದ ಅಲಿ ಆದಿಲ್‌ಶಹರು ಉಕ್ಕಲಿಪರಗಣೆಯ ಯಂಬತ್ತಾನಾಳು ಗ್ರಾಮವನ್ನು ದಾನಕೊಟ್ಟು ನಡೆಯಿಸಿಕೊಂಡು ಬಂದಂತೆ ಮುಂದುವರೆಸಿಕೊಂಡು ಹೋಗಲು ಆಜ್ಞೆಯನ್ನು ಕೊಟ್ಟಿರುವ ಅಂಶವನ್ನು ಶ್ರೀ ಶಂಕರಭಾರತೀ ಶ್ರೀಗಳವರಿಗೆ ವಿಜ್ಞಾಪಿಸಿದುದನ್ನು ಅಲ್ಲದೆ ಆ ಆಜ್ಞೆಯನ್ನೂ ೪೭೦ ಮತ್ತು ೪೭೩ನೆಯ ಲೇಖನಗಳು ತಿಳಿಸುತ್ತವೆ. ಹರಪನಹಳ್ಳಿ ಸಂಸ್ಥಾನಿಕರಾದ ಬಾಗಳಿ ಬಸಪ್ಪನಾಯಕರಿಗೆ ಶ್ರೀಮಠಕ್ಕಿತ್ತ ದಾನಧರ್ಮಗಳನ್ನು ಸಾರೋದ್ಧಾರವಾಗಿ ನಡೆಯಿಸಿಕೊಂಡು ಹೋಗಲು ಕೊಟ್ಟ ನಿರೂಪವು ೪೭೨ ನೆಯದಾಗಿದೆ.

## B 3 ಸವಾಯಿಮಾಧವರಾಯ ನಾರಾಯಣರ ಆಳ್ವಿಕೆ

ಶ್ರೀಮಂತ ಪೇಷ್ವೆ (ದೊಡ್ಡ) ಮಾಧವರಾಯರು ಕ್ಷಯರೋಗದಿಂದ ಅಕಾಲ ಮೃತ್ಯುವಿಗೆ ತುತ್ತಾದರು. ಅವರಿಗೆ ಮಕ್ಕಳಿಲ್ಲದ್ದರಿಂದ ಅವರ ತಮ್ಮ ನಾರಾಯಣರಾಯರು ಪೇಷ್ವೆಗಳಾದರು. ಶ್ರೀಮಂತ ಬಾಳಾಜೀಬಾಜೀರಾಯರ ತಮ್ಮನಾದ ರಘುನಾಥರಾಯನು ಅವನ ಪತ್ನಿ ಆನಂದೀ ಬಾಯಿಯ ಪ್ರೇರಣೆಯಂತೆ ನಾರಾಯಣರಾಯನನ್ನು ಕೊಲ್ಲಿಸಿದನು. ರಘುನಾಥರಾಯನು ಕರ್ನಾಟಕದ ಮೇಲೆ ದಂಡೆತ್ತಿ ಹೋದ ಸಂದರ್ಭವನ್ನುಪಯೋಗಿಸಿಕೊಂಡು ಪುಣೆಯ ಬಾರಭಾಯಿಗಳೆಂಬ ಒಂದು ಗುಂಪಿನವರು ಗರ್ಭಿಣಿಯಾಗಿದ್ದ ಶ್ರೀಮಂತ ನಾರಾಯಣರಾಯನ ಹೆಂಡತಿ ಗಂಗಾಬಾಯಿಯನ್ನು ಪೇಷ್ವೆ ಪಟ್ಟಕ್ಕೇರಿಸಿ ಅವಳ ಪ್ರಸವ ಕಾಲವನ್ನು ನಿರೀಕ್ಷಿಸುತ್ತಿದ್ದರು. ನಿರೀಕ್ಷಣೆಯಂತೆ ಪುತ್ರಜನನವಾಗಿ ಅವನೇ ಸವಾಯಿಮಾಧವರಾಯನೆಂಬ ಹೆಸರಿನಿಂದ ಪೇಷ್ವೆಯಾದನು.

ಶ್ರೀಮಠದ ವೃತ್ತಿಯನ್ನು ಪೇಷ್ವೆಯ ಅನುಯಾಯಿಗಳು ವಿಚ್ಛೇದಗೊಳಿಸಿದ್ದನ್ನು ಅವಿಚ್ಛಿನ್ನವಾಗಿ ಮುಂದು ವರಿಸುವಂತೆ ತನ್ನ ಅನುಯಾಯಿಗಳಿಗೆ ಶಿಕ್ಷಾರೂಪವಾದ ಪತ್ರವನ್ನು ಬರೆದಿರುವೆನೆಂದು ನಾಲ್ಕನೆಯ ಶ್ರೀಶಂಕರ ಭಾರತಿಗಳಿಗೆ ವಿಜ್ಞಾಪಿಸಿರುವದು ೪೭೩ ನೆಯ ಲೇಖನದಿಂದ ತಿಳಿಯುತ್ತದೆ.

ಪೂರ್ವದಿಂದ ಶ್ರೀಮಠಕ್ಕೆ ನಡೆಯುತ್ತಿರುವ ಗ್ರಾಮಭೂಮಿಗಳನ್ನು ಯಥಾಪ್ರಕಾರ ನಡೆಯಿಸಿಕೊಂಡು ಬರಲು ತ್ರ್ಯಂಬಕರಾವ ಯಶವಂತ ಇವರಿಗೆ ಕೊಟ್ಟ ಆಜ್ಞೆಯು ೪೭೪ಯದಾಗಿದೆ.

## B. 4. ಬಾಜೀರಾವ ರಘುನಾಥರ ಆಳ್ವಿಕೆ

ಶ್ರೀಮಂತ (ಸವಾಯಿ) ಮಾಧವರಾವ ನಾರಾಯಣನು ಹುಚ್ಚುಹಿಡಿದು ನಿಧನವನ್ನೈದಿದ್ದರಿಂದ, ಬ್ರಿಟಿಷರ ಸಹಾಯದಿಂದ ಶ್ರೀಮಂತ ರಘುನಾಥರಾಯನ ಮಗನಾದ ಎರಡನೇ ಬಾಜೀರಾಯನು ಪೇಷ್ವೆಪಟ್ಟಕ್ಕೇರಿದನು.

ಆರನೆಯ ಶ್ರೀನರಸಿಂಹಭಾರತೀ ಶ್ರೀಗಳವರನ್ನು ಪುಣೆಗೆ ಬರಲು ಆಹ್ವಾನ ಮಾಡಿ ಅವರಿಗೆ ಮಾರ್ಗ ದಲ್ಲೊದಗಿಸಬೇಕಾದ ಸೌಕರ್ಯಗಳ ಬಗ್ಗೆ ರಹದಾರಿ ಕೊಟ್ಟದ್ದು ಬಾಜೀರಾಯರ (೪೭೫–೪೭೬) ಪತ್ರಗಳಿಂದ ತಿಳಿಯುತ್ತದೆ.

## C. ನಾಗಪುರದ ರಘೂಜಿ ಭೋಸಲೆ

ಸಾತಾರೆಯ ಛತ್ರಪತಿಗಳ ಅಷ್ಟಪ್ರಧಾನರಲ್ಲಿ ನಾಗಪುರದ ರಘೂಜಿಯು ಪ್ರಮುಖನಾಗಿ "ಸೇನಾ ಸಾಹೇಬ ಸುಭೆ" ಎಂಬ ಪದವಿಯನ್ನಲಂಕರಿಸಿದ್ದನು. ಛತ್ರಪತಿಗಳಂತೆಯೇ ಭೋಸಲೆ ವಂಶಜನಾದ್ದರಿಂದ ಹೆಚ್ಚಿನ ಗೌರವವೂ ಇದ್ದಿತು. ರಘೂಜಿಯ ಪತ್ರಗಳಲ್ಲಿ ಒಂಭತ್ತನ್ನು ಮುದ್ರಿಸಲಾಗಿದೆ.

ಮಹಮ್ಮದೀಯರು ಶ್ರೀಮಠದ ಶಿಷ್ಯನಾದ ವಿಶ್ವನಾಥನೆಂಬ ಬ್ರಾಹ್ಮಣ ಕುಮಾರನನ್ನು ಬಲಾತ್ಕಾರದಿಂದ ಜಾತಿಕೆಡಿಸಿ ತಮ್ಮೊಳಗೆ ಸೇರಿಸಿಕೊಂಡಿದ್ದಾಗ ರಘೂಜಿಭೋಸಲೆ, ಫತ್ತೇಸಿಂಗ್ ಭೋಸಲೆ, ಮುರಾರಿರಾವ ಘೋರ್ಪಡೆ ಇವರುಗಳು ಯುದ್ಧದಲ್ಲಿ ಮಹಮ್ಮದೀಯರಿಂದ ಅವನನ್ನು ಬಿಡಿಸಿ ಶುದ್ಧಿಗೊಳಿಸಲು ನಾಲ್ಕನೆಯ ಶ್ರೀ ಶಂಕರಭಾರತೀ ಶ್ರೀಗಳವರ ಸನ್ನಿಧಾನಕ್ಕೆ ಕಳುಹಿಸಿಕೊಡುತ್ತಾರೆ. ಈ ಅಂಶವು ೪೭೭–೪೭೮ ನೆಯ ಪತ್ರಗಳು ಮತ್ತು ಮುರಾರಿರಾವ್ ಘೋರ್ಪಡೆಯ (ಅ. ನಂ. ೫೯೦) ಪತ್ರದಿಂದ ಸಹ ತಿಳಿಯುತ್ತದೆ. ಶ್ರೀ ಸ್ವಾಮಿಗಳವರು

> ಮಾಸಂ ಕಾರಾಗೃಹೇ ವಾಸೋ ನೌಭಿರ್ಯಾತ್ರಾ ದಿನತ್ರಯಂ ।
> ಮ್ಲೇಚ್ಛಾಶ್ರಮವಾಸಸ್ತಥಾ ಪಕ್ಷಂ ಯೋ ವರ್ತೇತ್ಸತು ಪಾತಕೀ ॥
>
> ಬಲಾದ್ದಾಸೀಕೃತಾ ಯೇ ಚ ಮ್ಲೇಚ್ಛಚಾಂಡಾಲದಸ್ಯುಭಿಃ ।
> ಅಶುಭಂ ಕಾರಿತೇ ತಾಃ ಕರ್ಮ ಗವಾದಿಪ್ರಾಣಿಹಿಂಸನಮ್ ॥
>
> ಉಚ್ಛಿಷ್ಟಮಾರ್ಜನಂ ತೇಷಾಂ ತಥಾ ತಸ್ಯೈವ ಭಕ್ಷಣಮ್ ।
> ತತ್ಸ್ತ್ರೀಣಾಂ ಚ ತಥಾ ಸಂಗಃ ತಾಭಿಶ್ಚ ಸಹ ಭೋಜನಮ್ ॥
>
> ಮಾಸೋಷಿತೇ ದ್ವಿಜಾತೌ ತು ಪ್ರಾಜಾಪತ್ಯಂ ವಿಶೋಧನಮ್ ।
> ಪ್ರಾಜಾಪತ್ಯಂ ಚ ಚಾಂದ್ರಂ ಚ ಚರೇತ್ಸಂವತ್ಸರೋಷಿತೇ ॥

(ಒಂದು ತಿಂಗಳು ಬಂದೀವಾಸ, ಮೂರುದಿನ ನೌಕಾಯಾನ, ಹದಿನೈದುದಿನಗಳ ಕಾಲ ಮ್ಲೇಚ್ಛಸಹವಾಸಗಳನ್ನು ಮಾಡಿದರೆ ಅವನು ಪಾಪಿಯಾಗುವನು.

ಮ್ಲೇಚ್ಛರು, ಚಂಡಾಲರು, ಮತ್ತು ಕಳ್ಳರಿಂದ ಬಲಾತ್ಕಾರವಾಗಿ ದಾಸರಾಗಿಸಲ್ಪಟ್ಟವರು ಗೋವು ಮುಂತಾದ ಪ್ರಾಣಿಹಿಂಸೆಯನ್ನೂ ಮಾಡಿಸಲ್ಪಟ್ಟವರು ಆ ದುಷ್ಟರ ಎಂಜಲು ತೆಗೆಯುವದು ಅದನ್ನೂ ತಿನ್ನುವುದು, ಅವರ ಸ್ತ್ರೀಸಂಗಮಾಡುವುದು ಅವರೊಡನೆ ತಿನ್ನುವುದು ಇತ್ಯಾದಿಗಳನ್ನು ಒಂದು ತಿಂಗಳಕಾಲ ಮಾಡಿದ ದ್ವಿಜನಿಗೆ ಪ್ರಾಜಾಪತ್ಯಕೃಚ್ಛ್ರವೆಂಬ ಪ್ರಾಯಶ್ಚಿತ್ತವನ್ನಾಚರಿಸಿದರೆ ಶುದ್ಧಿ, ಒಂದು ಸಂವತ್ಸರಕಾಲ ಈ ಪಾಪವನ್ನಾಚರಿಸಿದವನಿಗೆ ಪ್ರಾಜಾಪತ್ಯಕೃಚ್ಛ್ರ ಮತ್ತು ಚಾಂದ್ರಾಯಣ ವ್ರತಗಳಿಂದ ಶುದ್ಧಿ.) ಎಂಬ ಗೌತಮ ಸ್ಮೃತಿಯನ್ನನುಸರಿಸಿ ಅವನ ತಾಯಿಯ ಮುಖದಿಂದ ಎಲ್ಲ ವಿಷಯಗಳನ್ನೂ ಕೇಳಿ ತಿಳಿದು ಉಕ್ತ ಪ್ರಾಯಶ್ಚಿತ್ತದಿಂದ ಅವನನ್ನು ಶುದ್ಧಿಗೊಳಿಸುತ್ತಾರೆ.

ಸಂಖ್ಯೆ ೪೭೯ ರಿಂದ ೪೮೫ ಪೂರ್ತ, ನಾಗಪುರ ಪ್ರಾಂತದ ವಿವಿಧ ಸ್ಥಳಗಳಲ್ಲಿ ಶ್ರೀಮಠಕ್ಕೆ ಶಿಷ್ಯರು ಕಾಣಿಕೆ ಸಲ್ಲಿಸಲು ರಘೂಜಿ ಭೋಸಲೆಯು ಕೊಟ್ಟ ನಿರೂಪಗಳಾಗಿವೆ.

## D. ಘೋರ್ಪಡೆ

### D-1. ಹಿಂದೂರಾವ ಘೋರ್ಪಡೆ

ಹಿಂದೂರಾವ ಘೋರ್ಪಡೆಯು ಮರಾಠಾ ರಾಜರ ಪರವಾಗಿ ದಕ್ಷಿಣ ದೇಶಕ್ಕೆ ಬಂದು ರಾಜ್ಯ ಕಟ್ಟಿದನು. ಇವನ ತಂದೆಯ ಹೆಸರು ಭೈರೋಜಿರಾವ್ ಎಂದಿದ್ದು ಛತ್ರಪತಿಗಳಿಂದ ಹಿಂದೂರಾವ್ ಮಮಲಕತಮದಾರ್ ಎಂಬ ಬಿರುದು ಕೊಡಲ್ಪಟ್ಟಿತು. ಇವನ ಹೆಸರು ಸಿದ್ಧೋಜಿರಾವ್ ಎಂದಿದ್ದು ತಂದೆಯ ಬಿರುದನ್ನೇ ಇವನೂ ಧರಿಸಿದನು. ಜರಿಮಲೆ ಪಾಳೆಯಗಾರರಿಂದ ಸಂಡೂರನ್ನು ಗೆದ್ದು ಅಲ್ಲಿ ಇವನು A.D. 1728ರಲ್ಲಿ ರಾಜ್ಯಸ್ಥಾಪನೆ ಮಾಡಿದನು ಇವನ ಪತ್ರಗಳಲ್ಲಿ (೪೮೬ ರಿಂದ ೫೦೪ ಪೂರ್ತ) ಹತ್ತೊಂಭತ್ತು ಪತ್ರಗಳನ್ನು ಮುದ್ರಿಸಲಾಗಿದೆ. ಗುತ್ತಲ ಪ್ರಾಂತದಿಂದ ಐವತ್ತು ಹೊನ್ನು ಶ್ರೀಮಠಕ್ಕೆ ವರ್ಷಾಶನ ಮಾಡಿಕೊಟ್ಟದ್ದನ್ನು ೪೮೬, ೪೮೭, ೪೮೮ ನೇ ಲೇಖನಗಳು ತಿಳಿಸುತ್ತವೆ.

ತನ್ನ ಸ್ವಕಾರ್ಯಕ್ಕಾಗಿ ಶ್ರೀ ಸ್ವಾಮಿಗಳ ಕಡೆಯಿಂದ ೫೨೫ ಹೊನ್ನು ಸಾಲವಾಗಿ ಪಡೆದಿದ್ದು ಅದನ್ನು ಗುತ್ತಲದ ದೇಸಾಯಿ ಮೂಲಕವಾಗಿ ಅಥವಾ ತಿಂಗಳು ತಿಂಗಳು ಕಂತುರೂಪವಾಗಿ ಪಾವತಿ ಮಾಡುವದಾಗಿ ಬರೆದುಕೊಂಡ ಲೇಖನ ೪೮೯ನೆಯದು. ೪೯೦, ೪೯೧, ೪೯೨ ನೆಯ ಲೇಖನಗಳು ಗುತ್ತಲಪ್ರಾಂತದ ವರ್ಷಾಶನ ೫೫ ಹೊನ್ನು ಕೊಡುವುದನ್ನು ತಿಳಿಸುತ್ತವೆ.

ಸ್ವಕಾರ್ಯಕ್ಕಾಗಿ ೧೫೦ ಹೊನ್ನು ಸಾಲಪಡೆದದ್ದು ೪೯೩ ನೇ ಲೇಖನದಿಂದ ತಿಳಿಯುತ್ತದೆ.

ಚಿತ್ರದುರ್ಗದ ತಹ ಆದ ಒಡನೆ ೫೦೦ ಹೊನ್ನು ಶ್ರೀ ಸ್ವಾಮಿಗಳಿಗೆ ಸಮರ್ಪಿಸುವೆನೆಂದು ಬರೆದ ಪ್ರಮಾಣ ಪತ್ರವು ೪೯೪ನೆಯದಾಗಿದೆ.

ಸುಂಕಾಪುರದ ಚೌಥಾಯಿಯನ್ನು ಅದರ ಇನಾಂದಾರರಾದ ಶ್ರೀ ಸ್ವಾಮಿಗಳಿಗೇ ನಡೆಯಿಸಲು ಕೊಟ್ಟ ಆಜ್ಞಾಪತ್ರ ೪೯೫ನೆಯದಾಗಿದೆ.

ಹೊಸದಾಗಿ ಕೊಟ್ಟ ಹನ್ನೆರಡು ಹೊನ್ನು ಸೇರಿಸಿ ವರ್ಷಾಶನ ಕೊಡಲು ಗುತ್ತಲದ ದೇಸಾಯಿಗೂ, ಮಾಮೂಲಿನಂತೆ ಕೊಡಲು ತರೀಕೆರೆ ಹೇಜೀಬನಿಗೂ ಬರೆದ ಲೇಖನಗಳು ೪೯೬–೯೭ ನೆಯವುಗಳು.

ಸುಂಕಾಪುರದ ಚೌಥಾಯಿಯನ್ನು ಶ್ರೀ ಸ್ವಾಮಿಗಳಿಗೇ ಕೊಟ್ಟ ದಾನಪತ್ರ, ಆಜ್ಞಾಪತ್ರಗಳು ೪೯೮–೯೯ ಮತ್ತು ೫೦೦ ನೆಯವು.

ಶ್ರೀ ಸ್ವಾಮಿಗಳ ಸಂಚಾರಸೌಲಭ್ಯ ಕಲ್ಪಿಸಲೂ ಸಂಕೇಶ್ವರ ಸ್ವಾಮಿಗಳಿಂದ ಸಂಭವಿಸಿದ ಜಗಳವನ್ನು ಪರಿಹರಿಸಲೂ ಕೊಟ್ಟ ಆಜ್ಞಾಲೇಖನಗಳು ೫೦೧ ರಿಂದ ೫೦೪ ಪೂರ್ತಿಯಾಗಿವೆ.

## D-2. ಮುರಾರಿರಾವ ಹಿಂದೂರಾವ ಘೋರ್ಪಡೆ

ಹಿಂದೂರಾವ ಘೋರ್ಪಡೆಯ ಜ್ಯೇಷ್ಠಪುತ್ರನಾದ ಮುರಾರಿರಾಯನು ಅತ್ಯಂತ ಶೂರನಾಗಿದ್ದು ದಕ್ಷಿಣದಲ್ಲಿ ಅನೇಕ ಯುದ್ಧಗಳಲ್ಲಿ ಭಾಗಿಯನಾಗಿ ಕೀರ್ತಿಶಾಲಿಯಾಗಿದ್ದನು. ಗುತ್ತಿಯನ್ನು ತನ್ನ ರಾಜಧಾನಿಯನ್ನಾಗಿಸಿಕೊಂಡು ರಾಜ್ಯಭಾರಮಾಡುತ್ತಿದ್ದನು.

ಪೆನುಗೊಂಡೆಸೀಮೆಯ ಉಟಕೂರ ಪರಗಣೆಯಲ್ಲಿ ಶ್ರೀಮಠಕ್ಕೆ ನಡೆಯುತ್ತಿದ್ದ ಜಾಲಕುಂಟೆ ಗ್ರಾಮದ ಉತ್ಪತ್ತಿಯನ್ನು ಅಲ್ಲಿನ ಕುಲಕರ್ಣಿ ವೆಂಕಟಪತಿಯು ತಾನೇ ನುಂಗುತ್ತಿದ್ದುದನ್ನು ತಿಳಿದು ಅದನ್ನು ಹಿಂದಿರುಗಿ ಮಠಕ್ಕೆ ಕೊಡುವಂತೆ ಮಾಡಿದ ತಾಕೀದಿಯು ೫೦೫ನೆಯದಾಗಿದೆ. ೫೦೮ ಮತ್ತು ೫೦೯ನೆಯ ಲೇಖನಗಳು ಇದೇ ವಿಷಯಕ್ಕೆ ಸಂಬಂಧಿಸಿರುತ್ತವೆ.

೫೦೬ ಮತ್ತು ೫೦೭ನೆಯ ಲೇಖನಗಳು ತರೀಕೆರೆ, ಗುತ್ತಲ ಮತ್ತು ಸವಣೂರಿನ ವರ್ಷಾಶನದ ತಾಕೀದಿಗಳಾಗಿವೆ.

ಯವನರು ಜಾತಿಕೆಡಿಸಿದ ವಿಶ್ವನಾಥ ಬ್ರಾಹ್ಮಣ ಕುಮಾರನನ್ನು ಶುದ್ಧಿಗೊಳಿಸುವ ವಿಚಾರವು ೫೧೦ ನೆಯ ಲೇಖನದಲ್ಲಿದೆ.

## D-3. ದೌಲತರಾವ ಹಿಂದೂರಾವ ಘೋರ್ಪಡೆ

ಹಿಂದೂರಾವ ಘೋರ್ಪಡೆಯ ಎರಡನೆಯ ಮಗನಾದ ದೌಲತರಾಯನು ಗಜೇಂದ್ರಗಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರಮಾಡಿದನು.

ಸುಂಕಾಪುರದಲ್ಲಿ ಎಂಟು ಹೊನ್ನು ಮತ್ತು ಸವಣೂರಲ್ಲಿ ನೇಮಕ ಮಾಡಿಕೊಟ್ಟಿದ್ದ ಹಣ ಶ್ರೀಸ್ವಾಮಿಗಳಿಗೆ ತಲ್ಪಿಸಲು ಕೊಟ್ಟ ತಾಕೀದಿಗಳು ೫೧೧-೧೨-೧೩ನೆಯ ಸಂಖ್ಯೆಯವುಗಳಾಗಿವೆ.

ನಾಲ್ಕನೆಯ ಶ್ರೀ ಶಂಕರಭಾರತೀ ಶ್ರೀಗಳವರಿಗೆ ಗಜೇಂದ್ರಗಡ ಮತ್ತು ಮಲಿಕವಾಡಗಳಲ್ಲಿ ಜಮೀನು ದಾನ ಕೊಟ್ಟದ್ದನ್ನು ೫೧೪ ಮತ್ತು ೫೧೫ನೆಯ ಲೇಖನಗಳು ತಿಳಿಸುತ್ತವೆ.

ನವಲಗುಂದದ ಬಾಬತ್ತು ಐವತ್ತು ರೂಪಾಯಿಗಳನ್ನು ಅಲ್ಲಿನ ತಹ ಆದ ಒಡನೆ ತಲ್ಪಿಸುವುದಾಗಿ ಶ್ರೀಸ್ವಾಮಿಗಳಿಗೆ ಬರೆದುಕೊಂಡ ವಿಜ್ಞಾಪನಾ ಪತ್ರಿಕೆಯು ೫೧೬ನೆಯ ಸಂಖ್ಯೆಯದಾಗಿದೆ.

[ಘೋರ್ಪಡೆ ಮನೆತನದವರ ಇನ್ನೂ ಅನೇಕ ಲೇಖನಗಳಿದ್ದು ಪುಸ್ತಕವು ವಿಸ್ತೃತವಾಗುವದೆಂಬ ಕಾರಣದಿಂದ ಅವುಗಳನ್ನು ಈಗ ಮುದ್ರಿಸದೆ ಬಿಟ್ಟಿದೆ.]

## E-1 ಭಾವೆ (ನರಗುಂದ ಸಂಸ್ಥಾನ)

ಪೇಶ್ವೆಗಳು ಸಾತಾರೆ ಛತ್ರಪತಿಗಳ ಪ್ರಭುತ್ವದಲ್ಲಿ ಪ್ರಧಾನ ಪದವಿಯನ್ನು ಹೊಂದಿ ಪುಣೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮಹಾರಾಷ್ಟ್ರ ದೇಶಕ್ಕೆ ಮಾತ್ರವಲ್ಲದೆ ಉತ್ತರದಲ್ಲಿ ದಿಲ್ಲಿಯವರೆವಿಗೂ ದಕ್ಷಿಣದಲ್ಲಿ ಮಧುರೆ ರಾಮೇಶ್ವರಗಳವರೆವಿಗೂ ತಮ್ಮ ಪ್ರಭುತ್ವದ ವ್ಯಾಪ್ತಿಯನ್ನುಂಟುಮಾಡಿ ಅಲ್ಲಲ್ಲಿ ತಮ್ಮ ಪ್ರತಿನಿಧಿಗಳನ್ನಿಟ್ಟಿದ್ದರು.

ಹಾಗೆ ನಿಯಮಿಸಲ್ಪಟ್ಟ ಅವರ ಪ್ರತಿನಿಧಿಗಳಲ್ಲಿ "ಭಾವೆ" ಎಂಬ ಮನೆತನದವರು ನರಗುಂದವನ್ನು ತಮ್ಮ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡು ಕರ್ನಾಟಕಪ್ರಾಂತದ ಕೆಲವು ಭಾಗದ ಆಡಳಿತಾಧಿಕಾರಿಗಳಾಗಿದ್ದರು. ಇವರು ಚಿತ್ಪಾವನ ಬ್ರಾಹ್ಮಣರು.

ಕರ್ನಾಟಕ ಪ್ರಾಂತ ಸರಸುಭೆಯ ಪ್ರಭುಗಳಾದ ನಾರಾಯಣರಾವ ವೆಂಕಟೇಶರವರು ಮೂರನೆಯ ಶಂಕರ ಭಾರತೀ ಶ್ರೀಗಳವರಿಗೆ ಬಂಕಾಪುರಪ್ರಾಂತದ ಕಲಘಟಗಿ ಸಮ್ಮತ್ತಿನ ಸೂಳೀಕಟ್ಟೆಗ್ರಾಮವನ್ನು ನೂತನ ಇನಾಮಾಗಿ ದಾನಕೊಟ್ಟದ್ದನ್ನು ಮತ್ತು ಅದಕ್ಕೆ ಸಂಬಂಧಪಟ್ಟಂತೆ ಆಜ್ಞಾಪತ್ರ ಹೊರಡಿಸಿದ್ದನ್ನು ಸಂಖ್ಯೆ ೫೧೭ ಮತ್ತು ೫೧೮ ನೆಯ ಲೇಖನಗಳು ತಿಳಿಸುತ್ತವೆ.

ಶ್ರೀ ಸ್ವಾಮಿಗಳವರು ನರಗುಂದದಲ್ಲಿ ದರ್ಶನಕೊಟ್ಟಾಗ ಅವರು ದೊಡ್ಡವರು ಮತ್ತು ಜಗದ್ಗುರುಗಳಾದ್ದರಿಂದ ಅವರಿಗೆ ಸೇವೆಸಲ್ಲಿಸಬೇಕೆಂಬ ಉದ್ದೇಶದಿಂದ ಅವರಿಗೆ ಸುಂಕದ ರುಸುಮಿನಲ್ಲಿ ಒಂದು ಹೇರಿಗೆ ಎರಡು ರೂಪಾಯಿಗಳಂತೆ ನರಗುಂದಮಹಲು, ರಾಮದುರ್ಗಮಹಲು ಮುಂತಾದೆಡೆಗಳಲ್ಲಿ ಸಲ್ಲಿಸಬೇಕಾಗಿ ಕೊಟ್ಟ ಆಜ್ಞೆಯನ್ನು ೫೧೯ ಮತ್ತು ೫೨೦ ನೆಯ ಪತ್ರಗಳು ತಿಳಿಸುತ್ತವೆ.

ಶ್ರೀ ಸ್ವಾಮಿಗಳು ನರಗುಂದಕ್ಕೆ ಬಂದು ದರ್ಶನಕೊಡಬೇಕೆಂಬ ಪ್ರಾರ್ಥನೆ ಮತ್ತು ನರಗುಂದದಲ್ಲಿ ಮಠ ಕಟ್ಟಲು ಸ್ಥಳ ದಾನಮಾಡಿದ ಸಂಗತಿಗಳನ್ನು ೫೨೧ ಮತ್ತು ೫೨೨ ನೆಯ ಪತ್ರಗಳು ತಿಳಿಸುತ್ತವೆ.

ನರಗುಂದದ ಕೊನೆಯ ರಾಜರು ದತ್ತಕ ವಿರೋಧಪ್ರಕರಣದಲ್ಲಿ ಬ್ರಿಟಿಷರ ವಿರುದ್ಧ ದಂಗೆಹೂಡಿ ರಾಜ್ಯ ಕಳೆದು ಕೊಂಡದ್ದು "ನರಗುಂದದ ಬಂಡಾಯ" ಎಂಬ ಹೆಸರಿನಿಂದ ಚರಿತ್ರ ಪ್ರಸಿದ್ಧವಾಗಿದೆ.

## E-2 ಭಾವೆ (ರಾಮದುರ್ಗ ಸಂಸ್ಥಾನ)

ನರಗುಂದ ಮತ್ತು ರಾಮದುರ್ಗಸಂಸ್ಥಾನಗಳು ಅಣ್ಣತಮ್ಮಂದಿರಿಂದ ಮುಂದುವರಿಯಲ್ಪಟ್ಟವು. ನರಗುಂದ ಸಂಸ್ಥಾನಿಕರ ತಮ್ಮನೇ ರಾಮದುರ್ಗಸಂಸ್ಥಾನದ ರಾಜನಾದನು.

ರಾಮದುರ್ಗಸಂಸ್ಥಾನಕ್ಕೆ ಬಂದು ದರ್ಶನಕೊಡಲು ಆರನೆಯ ಶ್ರೀ ಶಂಕರಭಾರತಿಗಳನ್ನು ಪ್ರಾರ್ಥಿಸಿದ್ದು ಮತ್ತು ರಾಜಶ್ರೀ ರಾಮರಾವಸಾಹೇಬರಿಗೆ ಮೊಖತ್ಯಾರೀ ಕೊಡುವ ಸಮಾರಂಭಕ್ಕೆ ಶ್ರೀ ಸ್ವಾಮಿಗಳ ಸ್ವಾರಿ ಬರಬೇಕೆಂದು ಏಳನೆಯ ಶಂಕರಭಾರತೀ ಶ್ರೀ ಶ್ರೀಗಳವರಿಗೆ ವಿಜ್ಞಾಪಿಸಿದ್ದು ೫೨೩ ಮತ್ತು ೫೨೪ನೆಯ ವಿಜ್ಞಪ್ತಿ ಪತ್ರಿಕೆಗಳಿಂದ ತಿಳಿಯಬರುತ್ತದೆ.

## F. ಪಟವರ್ಧನರು

ಪೇಶ್ವೆಬಾಳಾಜೀ ಬಾಜೀರಾಯನ ಆಶ್ರಯದಲ್ಲಿ ಹರಿಭಟ್ಟ ಪಟವರ್ಧನ ಎಂಬುವರು ಪ್ರಸಿದ್ಧರಾದರು. ದೂರ್ವೆಯ ರಸವನ್ನು ಸೇವಿಸಿ ಗಣಪತಿಯ ಉಪಾಸನೆಯನ್ನುಮಾಡಿ ಅನುಗ್ರಹವನ್ನು ಸಂಪಾದಿಸಿದ್ದರು. ಅವರ ಏಳುಜನ ಮಕ್ಕಳೂ ಸರದಾರರಾಗಿ ಪೇಶ್ವೆಯವರ ರಾಜ್ಯವಿಸ್ತರಣೆಯಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದರು. ಅನಂತರ ಕಾಲದಲ್ಲಿ ಜಮಖಂಡಿ, ಸಾಂಗಲಿ, ಮಿರಜ, ತಾಸಗಾಂವ, ಕುರಂದವಾಡ ಪ್ರಭುತ್ವಗಳು ಈ ಸಂತತಿಯವರಿಂದಲೇ ಸ್ಥಾಪಿಸಲ್ಪಟ್ಟವು. ಪಟವರ್ಧನಸರದಾರರು ಶ್ರೀಮಠಕ್ಕೆ ಶಿಷ್ಯರಾಗಿದ್ದು ನಾನಾವಿಧವಾಗಿ ಸೇವೆ ಸಲ್ಲಿಸಿರುವರು. [ಈ ಸಂಗ್ರಹದಲ್ಲಿ ಪಟವರ್ಧನರ ಹದಿನೆಂಟು ಪತ್ರಗಳನ್ನು (೫೨೫ ರಿಂದ ೫೪೨) ಮುದ್ರಿಸಲಾಗಿದೆ].

ಶ್ರೀಗೋಪಾಳರಾವ ಗೋವಿಂದ ಇವರು ವೆಂಕಾಜಿಬಾಬಾ ಇವರಿಗೆ ಮತ್ತು ರಾಯದುರ್ಗ ಸಂಸ್ಥಾನಿಕರಾದ ವೆಂಕಟಪತಿನಾಯಕರಿಗೆ ಅಲ್ಲದೆ ಕೃಷ್ಣಪ್ಪನಾಯಕರಿಗೆ ಪತ್ರಬರೆದು ಶ್ರೀಸ್ವಾಮಿಗಳವರಿಗೆ ಆ ಸಂಸ್ಥಾನಿಕರು ಕೊಟ್ಟ

ಕಡದರಕುಂಜೆ ಗ್ರಾಮವು ಅವರಿಗೆ ಅಷ್ಟು ಉಪಯೋಗಕರವಾಗಿಲ್ಲ, ಬೇರೆ ಗ್ರಾಮವನ್ನು ದಾನವಾಡಿ, ಸ್ವಾಮಿಗಳು ಎಲ್ಲರ ಗುರುಗಳು, ಅವರಿಗೆ ಕೊಟ್ಟರೆ ನಿಮ್ಮ ಕಲ್ಯಾಣವೇ ಇದೆ—ಎಂದು ಬರೆದಿರುವ ವಿಚಾರವನ್ನು ೫೨೫-೨೬-೨೭ ನೇ ಲೇಖನಗಳು ತಿಳಿಸುತ್ತವೆ.

ಶ್ರೀಮಂತ ಬಾಳಾಜೀ ಬಾಜೀರಾಯರು ಶ್ರೀ ಸ್ವಾಮಿಗಳವರಿಗೆ ಪುನರುದ್ಧಾರ ಮಾಡಿಕೊಟ್ಟ ನಾಲ್ಕು ಉಪ ಗ್ರಾಮಗಳೊಡನೆ ಸೇರಿದ ಮೈಲಾರಗ್ರಾಮದ ಮಜರೆ ಸೋಮಲಾಪುರದ ಗಡಿಯಲ್ಲಿರುವ ಹಿರೇಕುರವತ್ತಿಕರರು ಉಪದ್ರವ ಕೊಡುತ್ತಿದ್ದದ್ದನ್ನು ನಿವಾರಿಸಲು ಮತ್ತು ಆ ಸಂಬಂಧದಲ್ಲಿ ಹರಪನಹಳ್ಳಿ ಸೋಮಶೇಖರ ನಾಯಕರು ಪಡೆದಿರುವ ಏಳುನೂರು ಹೊನ್ನುಗಳನ್ನು ಹಿಂದಿರುಗಿ ಕೊಡಲು ನಾಯಕರಿಗೆ ಗೋಪಾಳ ಗೋವಿಂದರು ಆಜ್ಞೆ ಮಾಡಿರುವ ಅಂಶವು ೫೨೮ ನೇ ಲೇಖನದಿಂದ ತಿಳಿಯುತ್ತದೆ.

ಮಿರಜ್ ಸಂಸ್ಥಾನದ ಮೂಲಪುರುಷರಾದ ಗಂಗಾಧರ ಗೋವಿಂದ ಇವರು ಲಕ್ಷ್ಮೇಶ್ವರ ತಾ. ಗಡ್ಡಿ ಬಸಾಪುರ ಗ್ರಾಮವು ಶ್ರೀಮಠಕ್ಕೆ ನಡೆಯುತ್ತಿರುವದನ್ನು ಹಿಂದಿನ ದಾಖಲೆಯಂತೆ ಸಾರೋದ್ಧಾರವಾಗಿ ಮುಂದು ವರೆಸಲು ಶ್ರೀ ಸ್ವಾಮಿಗಳು ಚಿಂತಾಮಣಿ ಭಟ್ಟರಿಗೆ ಕೊಟ್ಟ ಮಠಾಧಿಕಾರವನ್ನು ಅವರು ನಡೆಯಿಸುವದಕ್ಕೆ ಸಹಾಯ ಮಾಡಲು ಬಾಪೂಜಿ ಥೋಂಡದೇವ ಇವರಿಗೆ ಬರೆದ ಲೇಖನವು ೫೨೯ ನೆಯದಾಗಿದೆ.

ಟಿಪ್ಪೂಸುಲ್ತಾನರ ಕಾರಭಾರಿ ಹರಿದಾಸ ಪಂತರು ನಡೆಯಿಸಿಕೊಂಡು ಬಂದಂತೆ ಶ್ರೀಮಠಕ್ಕೆ ಗಡ್ಡಿ ಬಸಾಪುರ ಗ್ರಾಮವನ್ನು ಸಾರೋದ್ಧಾರವಾಗಿ ನಡೆಯಿಸುವ ವಿಷಯ ಮತ್ತು ಹುಬ್ಬಳ್ಳಿ ಜಂಗಮಗುರುಗಳು ನವೀನ ಬಿರುದು ಬಾವಲಿಗಳನ್ನು ಉಪಯೋಗಿಸದಂತೆ ಬಾಪೂಜೀಪಂತ ಪರಚುರೆ ಇವರಿಗೆ ತಾಕೀದ ಪತ್ರಕೊಟ್ಟ ವಿಷಯ ವನ್ನು ೫೩೦-೫೩೧ ನೆಯ ವಿಜ್ಞಾಪನ ಪತ್ರಿಕೆಗಳು ತಿಳಿಸುತ್ತವೆ.

ಜಮಖಂಡೀ ಸಂಸ್ಥಾನದ ಮೂಲಪುರುಷರಾದ ಪರಶುರಾಮ (ಭಾವು) ರಾಮಚಂದ್ರ ಇವರು ಪಟವರ್ಧನ ಸರದಾರರಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿ ಪ್ರಸಿದ್ಧರಾದವರು. ಇವರು ತಿಮ್ಮಲಾಪುರ, (ನಿಟ್ಟೂರು) ಬಸಾಪುರ, ಮಾಚೇನಹಳ್ಳಿ, ನಣ್ಣಕ್ಕಿ ಓಬಳಾಪುರ, ಮೈಲಾರ (ನಾಲ್ಕು ಉಪಗ್ರಾಮ ಸಹಿತ) ಮತ್ತು ಕಟದರಕುಂಟೆ ಗ್ರಾಮ ಗಳನ್ನು ಪೂರ್ವದಂತೆ ಮುಂದುವರೆಸಿಕೊಂಡು ಹೋಗಲು ಸಂಬಂಧಪಟ್ಟ ಅಧಿಕಾರಿಗಳು ಮತ್ತು ಸಂಸ್ಥಾನಿಕರಿಗೆ ಕೊಟ್ಟ ತಾಕೀದಿ ಪತ್ರಗಳು ೫೩೨ ರಿಂದ ೫೩೭ ಪೂರ್ತ ಆರು ಲೇಖನಗಳಾಗಿವೆ.

ಶ್ರೀಸ್ವಾಮಿಗಳು ಸವಣೂರಿನಲ್ಲಿ ಚಾತುರ್ಮಾಸ್ಯ ಮಾಡುವ ಸಂದರ್ಭದಲ್ಲಿ ಸ್ಥಳ ಮತ್ತು ಖರ್ಚಿನ ಸೌಕರ್ಯಗಳನ್ನು ಮಾಡಲು ಬಾಳಕೃಷ್ಣಪಂತರಿಗೆ ಕೊಟ್ಟ ಆಜ್ಞೆಯನ್ನು ೫೩೮ ನೆಯ ಲೇಖನವು ತಿಳಿಸುತ್ತದೆ.

ಸಾಂಗ್ಲಿ ಸಂಸ್ಥಾನದ ಮಹಾರಾಜರಾದ ಚಿಂತಾಮಣರಾವ ಪಾಂಡುರಂಗರವರು ಬೊಂಬಾಯಿಯ ಗವರ್ನರರಾದ ಸರ್ ವೇಕೌಂಟ ಫಾಕಲೆಂಡರವರಿಗೆ 'ಕೂಡಲಿ ಸ್ವಾಮಿಗಳಿಗೆ ಮಾತ್ರ ಅಡ್ಡಪಲ್ಲಕ್ಕಿ ಗೌರವವಿದೆ. ಬೇರೆ ಯಾರಿಗೂ ಇಲ್ಲ' ಎಂಬ ವಿಷಯದಲ್ಲಿ ಬರೆದ ವಿಸ್ತಾರವಾದ ಪತ್ರವು ೫೩೯ ನೆಯದಾಗಿದೆ.

ಧುಂಡಿರಾವ ಮತ್ತು ಗಣಪತಿರಾವ ಇವರ ವಿವಾಹ ಮಹೋತ್ಸವದ ಸಂದರ್ಭದಲ್ಲಿ ಸಾಂಗ್ಲಿ ಸಂಸ್ಥಾನದ ಮಹಾರಾಜರಾದ ಚಿಂತಾಮಣರಾವ ಪಾಂಡುರಂಗ ಇವರು ಶ್ರೀಶ್ರೀಗಳವರಿಗೆ ಕೊಟ್ಟ ಆಹ್ವಾನವನ್ನು ೫೪೦ ನೆಯ ಪತ್ರವು ತಿಳಿಸುತ್ತದೆ.

ಸಪ್ತಮ ನರಸಿಂಹಭಾರತೀ ಶ್ರೀಗಳವರನ್ನು ಶ್ರೀಧುಂಡಿರಾವ ಚಿಂತಾಮಣಿ ಪಟವರ್ಧನರು ಸಾಂಗ್ಲಿಗೆ ಆಹ್ವಾನಿಸಿರುವುದನ್ನು ೫೪೧ ನೆಯ ವಿಜ್ಞಾಪನಪತ್ರಿಕೆ ತಿಳಿಸುತ್ತದೆ.

ಷಷ್ಠ ಶಂಕರಭಾರತೀ ಸ್ವಾಮಿಗಳವರು 1865ರಲ್ಲಿ ಜಮಖಂಡೀ ಸಂಸ್ಥಾನದ ಕುಂದಗೋಳ ತಾಲ್ಲೂಕು ಸಾಂಶಿಯಲ್ಲಿ ಹುಣಸಪ್ಪಗೌಡರ ಏರ್ಪಾಡಿನಂತೆ ನವರಾತ್ರಿ ಉತ್ಸವವನ್ನು ಕೈಕೊಂಡಾಗ ಪರಸಮಯಿಗಳು ಗಲಭೆ ನಡೆಯಿಸಿದಾಗ ರಾಮಚಂದ್ರರಾವ ಅಪ್ಪಾಸಾಹೇಬ ಪಟವರ್ಧನ, ಜಮಖಂಡಿ ರಾಜಾಸಾಹೇಬರವರು ಗಲಭೆಯ ಪ್ರಕರಣವನ್ನು ವಿಚಾರಿಸಿ ಕೊಟ್ಟ ದಫ್ತರೀ ಹುಕುಂ ೫೪೨ನೆಯದಾಗಿದೆ.

## G. ಛತ್ರಪತಿ ಮತ್ತು ಪೇಶವೆ ಕಡೆಯ ಅಧಿಕಾರಿಗಳು

ಛತ್ರಪತಿ ಮತ್ತು ಪೇಶವೆ ಕಡೆಯ ಅಧಿಕಾರಿಗಳು ಭಾರತದ ದಕ್ಷಿಣೋತ್ತರ ಪ್ರದೇಶಗಳಲ್ಲಿ ಮಹಾರಾಷ್ಟ್ರದ ಪ್ರಭುತ್ವದ ಪರವಾಗಿ ಪ್ರಾತಿನಿಧ್ಯವನ್ನು ನಿರ್ವಹಿಸುತ್ತಿದ್ದರು. ಆ ಸಂದರ್ಭದಲ್ಲಿ ಅವರುಗಳು ಆಯಾಯ ಸ್ಥಳಾಧಿಕಾರಿಗಳಿಗೆ ಶ್ರೀಮಠದ ಅನುಕೂಲ್ಯಕ್ಕಾಗಿ ಕೊಟ್ಟ ನಿರೂಪಲೇಖನಗಳು ಅನೇಕವಾಗಿವೆ. ಅವುಗಳಲ್ಲಿ ಪ್ರಕೃತ ಸಂಗ್ರಹವು ವಿಸ್ತಾರವಾಗದಿರಲು ಕೆಲವನ್ನು ಮಾತ್ರ ಮುದ್ರಿಸಿದೆ.

ಶ್ರೀ ಸ್ವಾಮಿಗಳು ಸಾತಾರೆದೇಶಕ್ಕೆ ಸಂಚಾರಾರ್ಥ ದಯಮಾಡಿಸಿದ ಸಂದರ್ಭದಲ್ಲಿ ಮಾಡಬೇಕಾದ ಸೌಕರ್ಯ ಮತ್ತು ಪಂಢರಪುರದಲ್ಲಿ ಸ್ವಾಮಿಗಳಿಗೆ ಪಾದಪೂಜಾದಿಗಳನ್ನು ಮಾಡುವ ವಿಷಯದಲ್ಲಿ ಕೊಟ್ಟ ನಿರೂಪಗಳು ೫೪೩–೫೪೪ನೆಯವುಗಳಾಗಿವೆ.

ರಾಮಚಂದ್ರಬಾಬಾಜಿ ಹಿಮ್ಮತ ಇವರು ತೃತೀಯ ಶಂಕರಭಾರತೀಸ್ವಾಮಿಗಳಿಗೆ ಬಗ್ಗಡನಹಾಳು ಜಮೀನು ದಾನಕೊಟ್ಟದ್ದನ್ನು ೫೪೫ ನೆಯ ದಾನಪತ್ರವು ತಿಳಿಸುತ್ತದೆ.

ವೆಂಕಾಜಿ ಶ್ರೀನಿವಾಸ ಸುಭೇದಾರರು ನವಲಗುಂದದಲ್ಲಿ ಪೂರ್ವಾರಭ್ಯ ನಡೆಯುತ್ತಿದ್ದ ಜಮೀನನ್ನು ಮುಂದು ವರೆಸುವಂತೆ ಮಾಡಿದ ಏರ್ಪಾಡನ್ನು ತೃತೀಯ ಶಂಕರಭಾರತೀಸ್ವಾಮಿಗಳಿಗೆ ವಿಜ್ಞಾಪಿಸಿರುವುದು ೫೪೬ ನೆಯ ವಿಜ್ಞಾಪನಪತ್ರಿಕೆಯಿಂದ ತಿಳಿಯುತ್ತದೆ.

ದೇವರಹಳ್ಳಿ, ಮಲನಾಯಕನಕಟ್ಟೆ ಮುಂತಾದ ಸ್ಥಳಗಳಲ್ಲಿ ಮೊಗಲ ಸರ್ಕಾರದ ಸನದಿನಂತೆ ಪೂರ್ವಾರಭ್ಯ ನಡೆಯುತ್ತಿರುವ ಜಮೀನುಗಳನ್ನು ಮುಂದುವರೆಸಲು ಲಕ್ಷ್ಮಣಹರಿ ಇವರು ಬರೆದ ಲೇಖನವು ೫೪೭ ನೆಯದಾಗಿದೆ.

ಅಥಣಿಯ ಭೋಜರಾಜ ಸಿದ್ಧರಾಜ ದೇಸಾಯಿ ಇವರಿಗೆ ತ್ರ್ಯಂಬಕರಾವ ಲಕ್ಷ್ಮಣ ಇವರು ಶ್ರೀಸ್ವಾಮಿಗಳು ಮೈಸೂರು ಪ್ರಾಂತದಲ್ಲಿ ಹೈದರಲಿಯ ದಂಗೆಯುಂಟಾದ್ದರಿಂದ ಅಥಣಿಗೆ ಬಂದು ತಂಗಿರುವುದರಿಂದ 'ನೀವು ಅವರಿಗೆ ಎಲ್ಲ ಸೌಕರ್ಯ ಮಾಡಿಕೊಡಬೇಕೆಂದು ಬರೆದ ಲೇಖನವು ೫೪೮ ನೆಯದಾಗಿದೆ.

ಶ್ರೀಮಠಕ್ಕೆ ರತ್ನಗಿರಿ ಸಂಸ್ಥಾನಿಕರಾದ ರಾಯಪ್ಪರಾಜರು ಮಾಯಗೊಂಡನಹಳ್ಳಿ ಎಂಬ ಗ್ರಾಮವನ್ನು ದಾನಮಾಡಿದ್ದು ಅನಂತರ ಮಧುಗಿರಿ ಸಂಸ್ಥಾನಿಕರು ರತ್ನಗಿರಿಯನ್ನು ಗೆದ್ದ ಮೇಲೂ ಆ ದಾನವನ್ನು ನಡೆಸಿದರು. ತದನಂತರ ರತ್ನಗಿರಿ ಮತ್ತು ಮಧುಗಿರಿ ಸಂಸ್ಥಾನಿಕರ ನಡುವೆ ಉಂಟಾದ ಯುದ್ಧಸಂದರ್ಭದಲ್ಲಿ ಆ ಗ್ರಾಮವು ಹಾಳಾಯಿತು. ಆ ನಂತರ ಹೈದರಾಲಿಯ ಅಮಲಿನಲ್ಲಿಯೂ ಆ ಗ್ರಾಮವು ಪಾಳುಬಿದ್ದೇಇತ್ತು. ಈಗ ಸ್ವರಾಜ್ಯ (ಮಹಾರಾಷ್ಟ್ರ ಪ್ರಭುತ್ವ) ಬಂದಿದೆ. ಆದ್ದರಿಂದ ರತ್ನಗಿರಿಕರರ ದಾನಪತ್ರವನ್ನು ನೋಡಿ ಆ ಗ್ರಾಮವನ್ನು ಮುಂದು ವರೆಸಬೇಕೆಂದು ಮಧುಗಿರಿ ತಾಲ್ಲೂಕಿನ ಸುಭೇದಾರರಾದ ಲಕ್ಷ್ಮಣ ಬಲ್ಲಾಳರ ವಿಜ್ಞಾಪನ ಪತ್ರಿಕೆ ಮತ್ತು ನಿರೂಪ ಗಳು ೫೪೯ ಮತ್ತು ೫೫೦ ನೆಯವುಗಳಾಗಿವೆ.

ಪೇಶ್ವೆಯವರಲ್ಲಿ ಕೊನೆಯವರಾದ ಶ್ರೀಮಂತ ಬಾಜೀರಾವ ರಘುನಾಥರ ಸರ್ವಾಧಿಕಾರಿಯಾಗಿದ್ದ ಸದಾಶಿವ ಮಾಣಕೇಶ್ವರನು ಸವಣೂರು ದೇಶಾಧಿಕಾರಿಯಾದ ಹರಿಪಂತನು ಮಠೀಯ ದ್ರವ್ಯವನ್ನು ಅಪಹರಿಸಿದ್ದನ್ನು

ಹಿಂದಿರುಗಿ ಕೊಡಲು ಆಜ್ಞೆ ಮಾಡಿದ್ದನ್ನು ವಿಜ್ಞಾಪಿಸಿರುವ ಸಂಸ್ಕೃತ ಪತ್ರವು ೫೫೧ ನೆಯದಾಗಿದ್ದು, ಅದರನಂತರ ಎರಡು (೫೫೨-೫೫೩) ನಿರೂಪ ವಿಜ್ಞಾಪನ ಪತ್ರಿಕೆಗಳೂ ಅದೇ ಅಂಶವನ್ನು ತಿಳಿಸುತ್ತವೆ.

ಹೀಗೆ ೪೩೫ ರಿಂದ ೫೫೩ ರವರೆಗಿನ ೧೧೯ ಲೇಖನಗಳು ಮಹಾರಾಷ್ಟ್ರ ಸಂಸ್ಥಾನಗಳಿಗೆ ಸಂಬಂಧಪಟ್ಟಂತೆ ಪ್ರಕಟಿಸಲ್ಪಟ್ಟಿದ್ದು ಛತ್ರಪತಿ, ಪೇಶವೆ, ಭೋಸಲೆ, ಘೋರ್ಪಡೆ, ಭಾವೆ ಮತ್ತು ಪಟವರ್ಧನರ ಅಲ್ಲದೇ ಇತರ ತದೀಯ ಅಧಿಕಾರಿಗಳ ನಿಕಟ ಸಂಪರ್ಕವು ಶ್ರೀಮಠಕ್ಕಿದ್ದುದನ್ನೂ ಮತ್ತು ಅವರ ಭಕ್ತಿ-ಶ್ರದ್ಧೆಗಳನ್ನೂ ವ್ಯಕ್ತಪಡಿಸುತ್ತವೆ.

ಗೌವರ್ನರ ಜನರಲ್ ಲಾರ್ಡ ಕಾರ್ನವಾಲೀಸರ ಆಜ್ಞೆಯಂತೆ ಮೈಸೂರು, ಕನ್ನಡ ಮತ್ತು ಕೊಡಗು ಪ್ರಾಂತಗಳ ಪ್ರವಾಸವನ್ನು ಕೈಕೊಂಡಿದ್ದ ಸರ್ ಫ್ರಾಂಸಿಸ್ ಬುಚನನ್ ಎಂಬುವನು ತನ್ನ ಪ್ರವಾಸಗ್ರಂಥವಾದ ಮೈಸೂರು, ಕೆನರಾ ಅಂಡ್ ಕುರ್ಗ ಎಂಬ ದಿನಚರಿಪುಸ್ತಕವಲ್ಲಿ ಈ ಮಠಕ್ಕಿದ್ದ ಮಹಾರಾಷ್ಟ್ರ ಪ್ರಭುಗಳ ಸಂಪರ್ಕ ತತ್ಫಲವಾಗಿ ಉಂಟಾಗಿದ್ದ ಶ್ರೀಮಠದ ಸಂಪದಭಿವೃದ್ಧಿ ಮತ್ತು ಶ್ರೀಮಠದಿಂದ ದೊಡ್ಡ ಕ್ಷಾಮಕಾಲದಲ್ಲಿ ಮಾಡಲ್ಪಟ್ಟ ಅನ್ನದಾನ ಮುಂತಾದುವುಗಳನ್ನು ಈ ಮುಂದೆ ಕಾಣಿಸುವಂತೆ ಉಲ್ಲೇಖಿಸಿರುವನು:—

Among these, the most conspicuous of whom I have heard is the Swami of Kudali. About 400 years ago, the first founder of this Matam was appointed management of all the Smartas of the Marattah nation. These all continue to consider his successors as their Gurus; and the present opulence and power of the Marattah Brahmans have raised the Mata of Kudali to a greater splendour than that of Sringa-giri.

* * * * * *

I procured from the Brahmans of Kudali a copy of an inscription engraven on a copper-plate, and belonging to the Swami. It is dated Sal. 1043, in the reign of Purandara Raja, of the Cadumba family at Banawasi; and a copy has been given to the Government in Bengal.

* * * * * *

I found, that the Guru or Swami was at Hara-punya-hully, employed in begging, as it is called. He had with him all his principle disciples; so that the Brahmans who remained at Kudali were not men of great intelligence; but they gave me a copy in the Marattah character, of the Sankara Acharya Cheritra, or an account of the life and actions of that very celebrated personage. It is esteemed all book of great authority, and has been delivered to the Bengal Government.

* * * * * *

"These ruffians did not even spare the Kudali Swami, who is the Guru of all the Marattah Brahmans of the Smarta sect, and who is by them considered as an *actual incarnation of the deity.* His Matam, or college, was plundered and burnt; but this cost of the Peshwa dear. The enraged Swami held out threats of instant excommunication, and was only pacified by a present of 4,00,000 Rupees."

* * * * * *

"The Swami is said to have been of great use in the famine, and to have employed the utmost of his influences in collecting money to support the starving wretches. He daily fed 3,000 Brahmans, and other religious mendicants; for, according to the Hindu doctrine, it is the charity which is bestowed on religious men that chiefly procures favour in the eyes of the gods. In his distributions the Swami is said to have expended six Lakhs of Rupees, or 60,441.13 s. 4d, most of which was collected in the Marattah States."

ಇವರುಗಳ ಪೈಕಿ ಅತಿ ಸ್ಪಷ್ಟವಾಗಿ ಕೇಳಬರುತ್ತಿದ್ದ ಹೆಸರೆಂದರೆ ಕೂಡಲಿ ಸ್ವಾಮಿಗಳವರದು. ಸುಮಾರು ನಾಲ್ಕುನೂರು ವರ್ಷಗಳಹಿಂದೆ ಈ ಮಠದ ಸಂಸ್ಥಾಪಕರು ಮಹಾರಾಷ್ಟ್ರ ದೇಶದಲ್ಲಿನ ಎಲ್ಲ ಸ್ಮಾರ್ತರ ಮೇಲ್ವಿಚಾರಕರಾಗಿ ನೇಮಿಸಲ್ಪಟ್ಟರು. ಆ ಮಠದ ಉತ್ತರಾಧಿಕಾರಿಗಳನ್ನು ಇವರೆಲ್ಲರೂ ಅಲ್ಲಿಂದ ಮುಂದೆ ತಮ್ಮ ಗುರುಗಳೆಂದು ಪರಿಗಣಿಸತೊಡಗಿದರು. ಈಗಿನ ಮಹಾರಾಷ್ಟ್ರಬ್ರಾಹ್ಮಣರ ಉನ್ನತಿ ಮತ್ತು ಅಧಿಕಾರವು ಕೂಡಲಿಮಠದ ವೈಭವವನ್ನು ಶೃಂಗಗಿರಿಯದಕ್ಕಿಂತಲೂ ಹೆಚ್ಚಿಸಿವೆ.

* * * *

ಕೂಡಲಿಯಲ್ಲಿನ ಬ್ರಾಹ್ಮಣರಿಂದ ಸ್ವಾಮಿಗಳಿಗೆ ಸೇರಿದ ತಾಮ್ರಶಾಸನದ ಪ್ರತಿಯೊಂದನ್ನು ನಾನು ಪಡೆದೆ. ಅದು ಶಾ॥1043 ರಲ್ಲಿ ಬನವಾಸಿಯಲ್ಲಿ ಆಳುತ್ತಿದ್ದ ಕದಂಬರ ಅರಸು ಪುರಂದರರಾಜನ ಸಮಯದ್ದು. ಅದರ ಒಂದು ಪ್ರತಿಯು ಬಂಗಾಳ ಸರ್ಕಾರಕ್ಕೆ ಕೊಡಲ್ಪಟ್ಟಿತು.

* * * *

ಸ್ವಾಮಿಗಳು ಅಥವಾ ಗುರುಗಳು ಹರ ಪುಣ್ಯ ಹಳ್ಳಿಯಲ್ಲಿ ಭಿಕ್ಷಾಟನವೆಂಬುದನ್ನು ಮಾಡುತ್ತಿರುವುದಾಗಿ ನನಗೆ ತಿಳಿಯಿತು. ಅವರ ಮುಖ್ಯ ಶಿಷ್ಯರೆಲ್ಲ ಅವರ ಜೊತೆಯಲ್ಲಿ ಇದ್ದರು. ಆದ್ದರಿಂದ ಕೂಡಲಿಯಲ್ಲಿ ಉಳಿದಿದ್ದ ಬ್ರಾಹ್ಮಣರು ಅಷ್ಟೇನೂ ಬುದ್ಧಿವಂತರಾಗಿರಲಿಲ್ಲ. ಆದರೆ ಅವರು ನನಗೆ ಮಹಾರಾಷ್ಟ್ರಲಿಪಿಯಲ್ಲಿದ್ದ ಶಂಕರಾಚಾರ್ಯರ ಚರಿತ್ರೆ ಅಥವಾ ಆ ದಿವ್ಯವ್ಯಕ್ತಿಯ ಜೀವನ ಮತ್ತು ಕಾರ್ಯಗಳ ಪರಿಚಯದ ಒಂದು ಪ್ರತಿಯನ್ನು ಕೊಟ್ಟರು. ಅದು ಅತ್ಯಂತಗೌರವಯುಕ್ತವಾದ ಗ್ರಂಥವೆಂದು ಪರಿಗಣಿಸಲ್ಪಟ್ಟು ಬಂಗಾಳ ಸರ್ಕಾರಕ್ಕೆ ಕೊಡಲ್ಪಟ್ಟಿದೆ.

* * * *

ಈ ದಂಗೆಕೋರರು ಮಹಾರಾಷ್ಟ್ರಸ್ಮಾರ್ತಬ್ರಾಹ್ಮಣರಿಗೇ ಗುರುಗಳಾಗಿದ್ದ ಮತ್ತು ಅವರಿಂದ ಪರಮಾತ್ಮನ ಅಪರಾವತಾರವೆಂದೇ ಭಾವಿಸಲ್ಪಟ್ಟಿದ್ದ ಕೂಡಲಿ ಸ್ವಾಮಿಗಳನ್ನೂ ಸಹ ಬಿಡಲಿಲ್ಲ. ಕೂಡಲಿ ಮಠವು ಲೂಟಿ ಮಾಡಲ್ಪಟ್ಟು ಸುಡಲ್ಪಟ್ಟಿತು. ಆದರೆ ಇದರಿಂದ ಪೇಶ್ವೆಗೆ ಅಪಾರ ಖರ್ಚಾಯಿತು. ಉದ್ರೇಕಗೊಂಡಸ್ವಾಮಿಗಳು ತಕ್ಷಣವೇ ಬಹಿಷ್ಕಾರದ ಬೆದರಿಕೆಹಾಕಿ ನಾಲ್ಕುಲಕ್ಷರೂಪಾಯಿಗಳ ಕಾಣಿಕೆಯಿಂದ ಸಮಾಧಾನಮಾಡಲ್ಪಟ್ಟರು.

* * * *

ಸ್ವಾಮಿಗಳು ಬರಗಾಲದಲ್ಲಿ ಬಹಳ ಉಪಕಾರಿಗಳಾಗಿದ್ದರೆಂದೂ ಅನ್ನಾಹಾರವಿಲ್ಲದೆ ತೊಳಲುತ್ತಿದ್ದ ಜನರ ಸಹಾಯಕ್ಕಾಗಿ ತಮ್ಮ ಪೂರ್ಣ ಪ್ರಭಾವವನ್ನು ಬೀರಿ ಹಣ ಸಂಗ್ರಹಿಸಿದರೆಂದೂ ಹೇಳುತ್ತಾರೆ. ಧಾರ್ಮಿಕ ಜನರಿಗೆ ಮಾಡಿದ ದಾನವು ದೇವರ ದೃಷ್ಟಿಯಲ್ಲಿ ಅತ್ಯಂತ ಶ್ರೇಷ್ಠವಾದದ್ದೆಂದು ಪರಿಗಣಿಸಲ್ಪಟ್ಟಿರುವ ಹಿಂದೂ ತತ್ವಕ್ಕನುಸಾರವಾಗಿ ಸ್ವಾಮಿಗಳು ಪ್ರತಿದಿನ ಮೂರು ಸಾವಿರ ಬ್ರಾಹ್ಮಣರಿಗೂ ಮತ್ತಿತರ ಸಾಧುಸಂತರಿಗೂ ಅನ್ನಸಂತರ್ಪಣೆ

ನಡೆಸುತ್ತಿದ್ದರು. ಈ ಸಂತರ್ಪಣೆಗಾಗಿ ಸ್ವಾಮಿಗಳು ಆರು ಲಕ್ಷ ರೂಪಾಯಿಗಳು ಅಥವಾ 60.441.13s. 4d. ವ್ಯಯ ಮಾಡಿದರೆಂದೂ, ಇದರಲ್ಲಿ ಹೆಚ್ಚಿನ ಹಣವು ಮಹಾರಾಷ್ಟ್ರ ರಾಜ್ಯಗಳಲ್ಲಿ ಸಂಗ್ರಹಿಸಲ್ಪಟ್ಟಿತೆಂದೂ ಹೇಳಲ್ಪಟ್ಟಿದೆ.

* * * *

## ಎಂಟನೆಯ ಭಾಗ–ಬ್ರಿಟಿಷ್ ಚಕ್ರಾಧಿಪತ್ಯ (ಬೊಂಬಾಯಿ ಪ್ರಾಂತ)

ಕ್ರಿ. ಶ. 1816 ರಲ್ಲಿ ಪೇಶವೆಯುವರಲ್ಲಿ ಕೊನೆಯವರಾದ ಶ್ರೀಮಂತ ಬಾಜೀರಾವ ರಘುನಾಥರು ಬ್ರಿಟಿಷರನ್ನೆದುರಿಸಿ ಪರಾಜಿತರಾಗಿ ಬ್ರಿಟಿಷರ ಏರ್ಪಾಡಿನಂತೆ ಬ್ರಹ್ಮಾವರ್ತವನ್ನು ತನ್ನ ಮುಖ್ಯಸ್ಥಳವನ್ನಾಗಿ ಮಾಡಿಕೊಂಡರು. ಇದರಿಂದಾಗಿ ಬೊಂಬಾಯಿಪ್ರಾಂತವು ಬ್ರಿಟಿಷ್ ಚಕ್ರಾಧಿಪತ್ಯಕ್ಕೊಳಪಟ್ಟಿತು. ಆ ಕಾಲದ ಧಾರವಾಡ, ಕಾರವಾರ ಜಿಲ್ಲೆಗಳ ಕೆಲವು ಲೇಖನಗಳನ್ನು ಈ ಭಾಗದಲ್ಲಿ ಮುದ್ರಿಸಿದೆ.

### A ಧಾರವಾಡ ಜಿಲ್ಲೆ

ಧಾರವಾಡ ಶುಭೆಯ ಪೊಲಟಿಕಲ್ ಏಜೆಂಟ್ ಮತ್ತು ಸರಕಲೆಕ್ಟರನಾದ ಬೇಬರಸಾಹೇಬನು ಶ್ರೀ ಸ್ವಾಮಿಗಳಿಗೆ ವಿಜ್ಞಾಪನ ಪತ್ರಿಕೆ ಬರೆದು ನಸಿವಿ ಎಂಬ ಗ್ರಾಮವನ್ನು ಶ್ರೀಮಠಕ್ಕೆ ಹಿಂದಿನಂತೆ ಮುಂದುವರಿಸುವ ವಿಷಯದಲ್ಲಿ ಕಾಗದಪತ್ರಗಳಂತೆ ಫೈಸಲ್ ಮಾಡಲಾಗುವುದೆಂದೂ ಮತ್ತು, ಸ್ವಾಮಿಗಳು ಜನಗಳನ್ನು ಸನ್ಮಾರ್ಗಪ್ರವೃತ್ತರಾಗುವುದಕ್ಕೆ ಬುದ್ಧಿವಾದ ಹೇಳುವುದಕ್ಕಾಗಿ ದೇಶಸಂಚಾರಮಾಡುವುದು ವಿಹಿತಧರ್ಮವೇ ಆಗಿದೆ. ಸರ್ಕಾರದ ನೌಕರರು ತಮ್ಮ ವೇತನದ ¼ ಭಾಗಕ್ಕಿಂತ ಹೆಚ್ಚಿಲ್ಲದಂತೆ ಸ್ವಾಮಿಗಳಿಗೆ ಕಾಣಿಕೆ ಕೊಡುವಂತೆ ಏರ್ಪಡಿಸಿರುವುದಾಗಿ ತಿಳಿಸಿರುವ ಅಂಶವು ೫೫೪ ನೆಯ ಲೇಖನದಿಂದ ಗೊತ್ತಾಗುತ್ತದೆ.

ಶ್ರೀ ಸ್ವಾಮಿಗಳವರು ವಿಮಲನಿರ್ಮಲಸ್ಥಳದಲ್ಲಿರುವ ಪೂರ್ವಾಚಾರ್ಯರ ವೃಂದಾವನ ಸಂದರ್ಶಿಸಲು ಬೊಂಬಾಯಿ ಗವರ್ನರರು ಕೊಟ್ಟ ರಹದಾರಿಯು ೫೫೫ ನೆಯದಾಗಿದೆ.

ಧಾರವಾಡ ತುಕಡಿಯಲ್ಲಿನ ಹದಿಮೂರು ಗ್ರಾಮಗಳು ಮತ್ತು ವಿಜಾಪುರ ತುಕಡಿಯ ನಾಲ್ಕು ಗ್ರಾಮಗಳು ರಾಣೇಬೆನ್ನೂರು ತುಕಡಿಯು ನಾಲ್ಕು ಗ್ರಾಮಗಳು ಈ ರೀತಿ ಒಟ್ಟು 21 ಗ್ರಾಮಗಳ ಹಕ್ಕು ವರ್ತನೆಗಳನ್ನು ಮುಂದುವರಿಸಲು ಕೊಟ್ಟ ನಿರೂಪವು ೫೫೬ ನೆಯದಾಗಿದೆ.

೫೫೭ ನೆಯ ಲೇಖನವು ಶ್ರೀ ಸ್ವಾಮಿಗಳ ಸಂಚಾರಕ್ಕೆ ಕೊಟ್ಟರಹದಾರಿಯಾಗಿದೆ. ೫೫೮ ನೆಯ ಲೇಖನವು ಶ್ರೀ ಮಠಕ್ಕೆ ಅನೇಕ ಗ್ರಾಮಗಳಲ್ಲಿ ಬರುತ್ತಿದ್ದ ಸುಂಕದ ರುಸುಮಿನ ಬಗ್ಗೆ ಕೊಟ್ಟ ಆಜ್ಞೆಯಾಗಿದೆ.

ಮೈಸೂರು ಪ್ರಾಂತದಲ್ಲಿ 1831 ರಲ್ಲಿ ಉಂಟಾದ ಪಾಳೆಯಗಾರರ ದಂಗೆಯ ಸಂದರ್ಭದಲ್ಲಿ ಶ್ರೀಸ್ವಾಮಿಗಳು ಕೂಡಲಿಯಲ್ಲಿರಲಾರದೇ ಉದ್ದಗಟ್ಟಿಯಲ್ಲಿ ವಾಸಿಸಬೇಕಾದ ಸಂಭವವುಂಟಾದಾಗ ಅವರಿಗೆ ತಕ್ಕ ಅನುಕೂಲ್ಯ ಕಲ್ಪಿಸಲು ಧಾರವಾಡ ಕಲೆಕ್ಟರರು ಕೊಟ್ಟ ನಿರೂಪವು ೫೫೯ ನೆಯದಾಗಿದೆ.

ಶ್ರೀಗಳವರು ಕೃಷ್ಣಾನದಿಸ್ನಾನಕ್ಕಾಗಿ ದಯಮಾಡಿಸುವ ಸಂದರ್ಭದಲ್ಲಿ ಧಾರವಾಡ ಕಲೆಕ್ಟರರು ಕೊಟ್ಟ ರಹದಾರಿಯು ೫೬೦ ನೆಯದಾಗಿದೆ.

### B ಕಾರವಾರ ಜಿಲ್ಲೆ

ಸೋದೆ ಸಂಸ್ಥಾನದ ದಳವಾಯಿ ವೀರಭದ್ರಯ್ಯನವರು ಬನವಾಸಿ ಮಧುಕೇಶ್ವರದೇವಸ್ಥಾನದಿಂದ ೧೫ ವರಹ ಮತ್ತು ಬಕ್ಕಳದ ಸತ್ಯನಾಥೇಶ್ವರ ದೇವಸ್ಥಾನದಿಂದ ೨೧ ವರಹ ಶ್ರೀಮಠಕ್ಕೆ ತಸದೀಕನ್ನು

ಕೊಡಲು ಮಾಡಿದ ಏರ್ಪಾಡು, ಸಂಖ್ಯೆ : ೧೩೮–೧೩೯ ನೆಯ ನಿರೂಪಗಳಿಂದ ತಿಳಿಯಬಂದಿದೆ. ಈ ಎರಡ ತನದೀಕುಗಳು ದೇವಸ್ಥಾನಗಳ ಲೆಖ್ಖದಲ್ಲಿ ಶೃಂಗೇರಿಮಠಕ್ಕೆ ಎಂದು ಖರ್ಚುಹಾಕಲ್ಪಡುತ್ತಿದ್ದುದನ್ನು ಆಧಾರ ವಾಗಿಟ್ಟುಕೊಂಡು ಆ ತನದೀಕು ತಮಗೆ ಸಲ್ಲಬೇಕೆಂದು ಶೃಂಗೇರಿ ಮಠದವರು ವಿವಾದ ಹೂಡಿದ ಸಂದರ್ಭದಲ್ಲಿ ಜಿಲ್ಲಾ ಸಬ್-ಕಲೆಕ್ಟರ್ ಮಲಟೀಬ ಸಾಹೇಬರು ಕೊಟ್ಟ ತೀರ್ಪು ೫೬೧ ನೆಯದಾಗಿದೆ.

ಸೋದಾ ಸೀಮೆಯಲ್ಲಿ ದೀಪಾರಾಧನೆ ಕಾಣಿಕೆ ವಸೂಲಿಯು ಶ್ರೀ ಕೂಡಲೀ ಶೃಂಗೇರೀ ಮಠಮುದ್ರಾಧಿ ಕಾರಿಯ ಅಧಿಕಾರಕ್ಕೊಳಪಟ್ಟಿದ್ದು ಅವರು ಅದರಂತೆ ವಸೂಲು ಮಾಡುತ್ತಲಿದ್ದಾಗ ಶೃಂಗೇರಿಯ ಮಠಮುದ್ರಾಧಿ ಕಾರಿಯೆಂದು ಯಲ್ಲಂಭಟ್ಟನೆಂಬುವನು ಆ ದೀಪಾರಾಧನೆಕಾಣಿಕೆಯನ್ನು ವಸೂಲುಮಾಡಲು ಪ್ರವೃತ್ತನಾದಾಗ ಸೋದಾ ತಾಲ್ಲೂಕು ತಹಶೀಲ್‌ದಾರ ಬಾಲಕೃಷ್ಣರಾಯರು ಶ್ರೀ ಕೂಡ್ಲೀ ಶೃಂಗೇರೀಮಠದ ಪರವಾಗಿ ಕೊಟ್ಟ ತೀರ್ಪು ೫೬೨ನೆಯದಾಗಿದೆ.

ಶೃಂಗೇರಿ ಮಠಮುದ್ರಾಧಿಕಾರಿಯೆಂದು ದೀಪಾರಾಧನೆ ಕಾಣಿಕೆ ವಸೂಲಿಗೆ ಪ್ರಯತ್ನಪಡುತ್ತಿದ್ದ ಯಲ್ಲಂಭಟ್ಟ ನೆಂಬುವನನ್ನು ಜಾಮೀನಿನ ಮೇಲೆ ಬಿಡುಗಡೆಮಾಡುವ ವಿಷಯದಲ್ಲಿ ಕೊಟ್ಟ ನಿರೂಪವು ೫೬೩ನೆಯದಾಗಿದೆ.

ಹೀಗೆ ಶ್ರೀಮಠಕ್ಕೆ ಸಂಬಂಧಪಟ್ಟಂತೆ ಮಠದಲ್ಲಿ ಪೂರ್ವಕಾಲದಿಂದ ಶೇಖರಿಸಲ್ಪಟ್ಟ ಸಹಸ್ರಾರು ಸನದುಗಳಲ್ಲಿ ೫೬೩ ಸನದುಗಳನ್ನು ಮಾತ್ರ ಆರಿಸಿ ಈ "ಪ್ರಾಚೀನ ಶಾಸನ ಲೇಖನ ಸಂಗ್ರಹ"ದಲ್ಲಿ ಮುದ್ರಿಸಲಾಗಿದೆ.

ಸನ್ನದು ಪ್ರಕಾಶನಕ್ಕಾಗಿ ಶ್ರೀಜಗದ್ಗುರು ಶ್ರೀಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳವರ ಆಜ್ಞೆಯಂತೆ ಸಮಿತಿಯು ಏರ್ಪಟ್ಟು ಅದರಲ್ಲಿ ಈ ಕೆಳಗೆ ಕಂಡ ಮಹಾಶಯರು ಗೌರವಸದಸ್ಯರುಗಳಾಗಿ ಕೆಲಸಮಾಡಿದರು:—

ಶ್ರೀ ಬಿ. ವೆಂಕಟಶಾಮಣ್ಣ, ಬಿ.ಎ., ಎಲ್‌ಎಲ್.ಬಿ., ಅವರು (ಸಂಚಾಲಕರು)
,, ವಿದ್ವಾನ್ ಹೆಚ್. ಜಿ. ಶಿತಿಕಂಠಶರ್ಮರು
,, ಬಿ. ವಿ. ರಾಮಕೃಷ್ಣಮೂರ್ತಿ, ಬಿ.ಎ., ಎಲ್‌ಎಲ್.ಬಿ., ಅವರು
,, ಕೆ. ಭೀಮರಾಯರು
,, ಎಂ. ವೆಂಕೋಬರಾವ್, ಬಿ.ಎ.,ಎಲ್‌ಎಲ್.ಬಿ., ಅವರು
,, ಪ್ರಭಾಕರರಾವ್ ಶಿರೂರ್ ಅವರು
,, ಬಿ. ಕೆ. ಶಂಕರಪ್ಪನವರು.
,, ಶಂಕರನಾಯಕ್, ಬಿ.ಎ., ಅವರು.

ಇವರಲ್ಲದೇ ಆಸ್ಥಾನವಿದ್ವಾನ್ ಶ್ರೀ ಹಾನಗಲ್ಲ ಗಣೇಶಶಾಸ್ತ್ರಿಗಳು, ಇತಿಹಾಸ ಸಂಶೋಧನ ಪ್ರಸಕ್ತ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು, ಶ್ರೀ. ಸಿ. ನರಸಿಂಹಮೂರ್ತಿಗಳು ಮತ್ತು ಶ್ರೀ ಸಿ. ಖಂಡೇರಾಯರು ಸಮಿತಿಯ ಪ್ರಾರಂಭದಿಂದ ತಮ್ಮ ಅಮೋಘವಾದ ಸೇವೆಸಲ್ಲಿಸಿ ಈ ಪುಸ್ತಕ ಪ್ರಕಾಶನಕ್ಕೆ ಮೊದಲೇ ದಿವಂಗತರಾದ್ದು ದಕ್ಕಾಗಿ ಸಮಿತಿಯು ತನ್ನ ವಿಷಾದವನ್ನು ಸೂಚಿಸುತ್ತದೆ.

ಶ್ರೀ ಮಠದ ಆಡಳಿತವರ್ಗದವರು ಈ ಸಂಗ್ರಹ ಪ್ರಕಾಶನಕ್ಕೆ ಇತ್ತ ನೆರವಿಗಾಗಿ ಸಮಿತಿಯು ತನ್ನ ಕೃತಜ್ಞತೆ ಯನ್ನು ವ್ಯಕ್ತಪಡಿಸುತ್ತದೆ.

ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಈ ಸಂಗ್ರಹಕ್ಕೆ ತಮ್ಮ ಸಂಕ್ಷಿಪ್ತ ಮಧುರವಾದ ಮುನ್ನುಡಿಯನ್ನು ದಯಪಾಲಿಸಿದುದಕ್ಕಾಗಿ ಪ್ರಭುವರ್ಯರಿಗೆ ನಮ್ಮ ಕೃತಜ್ಞತೆಗಳು.

ಪ್ರಸ್ತಾವನೆಯ ಲೇಖನದಲ್ಲಿ ಸಂಪೂರ್ಣವಾದ ನೆರವು ವಿದ್ವಾನ್ ಶ್ರೀ ಹೆಚ್. ಜಿ. ಶಿತಿಕಂಠಶರ್ಮರದು. ಅದಕ್ಕಾಗಿ ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಮೈಸೂರು ಸರ್ಕಾರದ ಮೈಸೂರು ಶಾಖೆಯ ಮುದ್ರಣಾಲಯದ ಮುಖ್ಯಾಧಿಕಾರಿಗಳು ಮುದ್ರಣ ಕಾರ್ಯದಲ್ಲಿ ಕೊಟ್ಟ ಸಹಾಯ ಸಹಕಾರಗಳು ಅಭಿನಂದನಾರ್ಹವಾಗಿವೆ, ಮತ್ತು ಈ ಮುದ್ರಣಕಾರ್ಯದಲ್ಲಿ ಸಹಕರಿಸಿದ ಮುದ್ರಣಾಲಯದ ಎಲ್ಲ ಅಧಿಕಾರವರ್ಗಕ್ಕೂ ನಮ್ಮ ಹಾರ್ದಿಕ ಧನ್ಯವಾದಗಳು.

ಶ್ರೀಮಠದ ಐತಿಹಾಸಿಕ ಸತ್ಯಾಂಶಗಳನ್ನು ಆಧಾರಯುತವಾಗಿ ಪ್ರಕಾಶಪಡಿಸುವ ಈ 'ಪ್ರಾಚೀನ ಶಾಸನ ಲೇಖನ ಸಂಗ್ರಹ'ವನ್ನು ಶ್ರೀಮಜ್ಜಗದ್ಗುರು ಶ್ರೀಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳವರ ಪೀಠಾರೋಹಣದ ರಜತೋತ್ಸವ ಕಾಣಿಕೆಯಾಗಿ ಅರ್ಪಿಸುವ ಮೂಲಕ ಶ್ರೀಸಂಸ್ಥಾನದ ಶಿಷ್ಯಕೋಟಿಗೆ ಈ ಧಾರ್ಮಿಕ ಸಂಸ್ಥೆಯು ಹೇಗೆ ದೀರ್ಘಕಾಲದಿಂದ ಅನೇಕ ಹಿಂದೂ ಮತ್ತು ಮಹಮದೀಯ ರಾಜಮಹಾರಾಜರುಗಳ ಶ್ರದ್ಧಾಭಕ್ತಿಗಳಿಗೆ ಪಾತ್ರವಾಗುತ್ತ ಬಂದಿದೆಯೆಂಬುದನ್ನು ಪ್ರಕಾಶಪಡಿಸಿದಂತಾಗಿದೆ.

ಇದರ ಫಲವಾಗಿ ಈ ಧಾರ್ಮಿಕಸಂಸ್ಥೆಯು ಇನ್ನು ಮುಂದೆಯೂ ಉತ್ತರಾಧಿಕವಾಗಿ ಪ್ರಕಾಶಿಸಿ ಶಿಷ್ಯಕೋಟಿಯ ಶ್ರದ್ಧಾಭಕ್ತಿಗಳು ನಿರಂತರವಾಗಿ ಬೆಳಗುವಂತಾಗಲೆಂದು ಶ್ರೀಶಾರದಾ ಚಂದ್ರಮೌಳೀಶ್ವರರಲ್ಲಿ ಮತ್ತು ಶ್ರೀ ಶ್ರೀ ಗಳವರಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಬಿ. ವೆಂಕಟೇಶಾವಣ್ಣ,
ಸಂಚಾಲಕ,
ಸನ್ನದು ಪ್ರಕಾಶನ ಸಮಿತಿ,
ಶ್ರೀಜಗದ್ಗುರು ಶ್ರೀಕೂಡಲೀ ಶೃಂಗೇರೀ
ಮಹಾಸಂಸ್ಥಾನ.

18-4-1961
ಕೂಡಲಕ್ಷೇತ್ರ

WD 3046—GTBPM—250+50 copies —23-7-1965

॥ಶ್ರೀ ವಿದ್ಯಾಶಂಕರೋ ವಿಜಯತೇ॥

# ಶ್ರೀಮಜ್ಜಗದ್ಗುರು ಶ್ರೀ ಕೂಡ್ಲೀ—ಶೃಂಗೇರೀ ಸಂಸ್ಥಾನದ

# ಪ್ರಾಚೀನ ಶಾಸನ—ಲೇಖನ ಸಂಗ್ರಹ.

## ಒಂದನೆಯ ಭಾಗ—ಕದಂಬರ ಮತ್ತು ವಿಜಯನಗರದವರ ಕಾಲ.

### A. ಕದಂಬ ನೃಪರು.

೧. ತಾಮ್ರಶಾಸನ— ಶ್ರೀಮುಖ ಮಾಘ ಕೃ. ೧೪, ಶಾ. ಶ. ೧೦೭೫, ಕ್ರಿ. ಶ. 1154.

ಮುಂಭಾಗ—ಶ್ರೀ ವಿದ್ಯಾ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋ (ಕ್ಯ) ನಗರಾರಂಭ ಮೂಲಸ್ತಂಭಾಯ ಶಂಭವೆ....................

ಹರೇರ್ಲೀಲಾವರಾಹಸ್ಯ ದಂಷ್ಟ್ರೀದಂತಾಸಪಾತುವ (ಃ) ಹೇಮಾದ್ರಿಶಿಖರಾಯತ್ರ ಧಾತ್ರೀಛತ್ರಶ್ರಿಯಂದಧೌ........ ..........ಶ್ರೀಮತ್ಪರಮಗುರವೇಜಯಸಂಪದೋಗು...............ಸಂದೇಶ...........ಅದ್ವಿತೀಯ...........ವಂದೇಗುರುಪಾದುಕಾಂ—

ಶ್ರೀಗಜಪತ್ಯನೇಕೋಸ್ತು ಶ್ರೀ ಶಂಕರಶಾಸನ—ಅಸ್ತಿಸ್ವಸ್ತಿಮತೀಧರಾಸುವಿದಿತ ಶ್ರಿಂಗೇರಿಸಿಂಹಾಸನಂ ತತ್ರಸ್ವಸ್ತಿ ಸರಸ್ವತೀ ಗುರುವರ ಶ್ರೀ ಶಂಕರಾಂಶೋದ್ಭವಃ ಶ್ರೀವಿದ್ಯಾನಗರೇ ಪ್ರತಿಷ್ಠಿತ ಮಹಾಭೂಮಂಡಲಾಧೀಶ್ವರೋ ವಿದ್ಯಾರಣ್ಯಮುನೀಶ್ವರೋ ವಿಜಯತೇ ಗಂಗಾಧರಃ ಪಾತುವಃ। [1] ಪಂಚಾಶನ್ಮಿತಕೋಟಿಯೋಜನಭುವ+ ಗುರುಃ+॥ [2] ದ್ವಿಸಪ್ತಾಸತುಲೋಕಾಃ+ಜನ್ಯೈಃ+॥ [3] ಅಷ್ಟಾದಶಸಹಸ್ರಾಣಿರುಷಯಶೌನಕಾದಯಃ+ಶಂಕರಃ+॥ [4] ಜಯತಿವಿತತಕೀರ್ತಿಃರುದ್ರಶಕ್ತಿಃ+ ॥ [5] ಸೋಯಂಸರ್ವೇಶ್ವರೋಭಾತಿ+ಶಂಕರೋವಿಜಯಾಯತೇ+ಇತಿ ಶಂಕರವಿಜಯೇತ್ಯಾದ್ಯಮುಕ್ತಂ॥

ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಪೃಥಿವ್ಯಪ್ತೇಜೋವಾಯುರಾಕಾಶಾದಿ ಪಂಚವಿಂಶತಿ ತತ್ವಾಂಶ ಜೀವಪರ ಬ್ರಹ್ಮೈಕ್ಯ ಪೋಂಕಾರಾಲಯಸ್ಯೇತರಬ್ರಹ್ಮಸ್ರುಷ್ಟ ಜೆಂಬೂದ್ವೀಪಾವೃತ ಚತುಸ್ಸಮುದ್ರಮಧ್ಯ ಮೇರುಹಿಮಾಚಲ ಮಲಯ•ದರಿಮಹೇಂದ್ರ ಕಂನ್ಯತ್ರಿಕೂಟ ವಿಂಧ್ಯಸಹ್ಯ...........ಗ...........ವರಾಹಭದ್ರಬ್ರಹ್ಮ ನೀಲಾವರುಣ ಕ್ರಂನ್ಯಶೃಂಗ ಅಗಸ್ತ್ಯಾಚಲಾದಿ...........ಚತುರ ಆಂಧ್ರದ್ರಾವಿಡ ಹೈವತುಳು ಮಲೆಯಕಲರಕಲಾಮೂಲತ್ರೈಗರ್ತಕುರು ಗಾಂಧಾರ . . . . ಣಂ . . . ಕರ್ಣಾಟವಿಪ್ಪಯಮತ್ರಲಾಟ ಪಾಂಡ್ಯಪುಳಾಕ . ಕುರುತುರುಷ್ಕಸಿಂಹಳ ಗೌಡ ಕೇರಳ . ಕೊಂಕಣ ಅಂಗಕರಾಟ ಚೋಢ್ರರಪಾರ ಸಿಂಧುಮುಖ್ಯ ಸಹಸ್ರದೇಶ ಭಾಷಜ್ಞ ರಾಜಮಾನ್ಯ ಪ್ರಚಾ

---

• ಈ ಶಾಸನದಲ್ಲಿ ಅದ್ಯಂತವಾಗಿ ಬರೆಯಲ್ಪಟ್ಟ ಶ್ಲೋಕಗಳ ಪೂರಣವು ಕೆಲವು ಹಳೇಪ್ರತಿಗಳಲ್ಲಿ ಈ ಕೆಳಗೆ ಕಂಡಂತೆ ಇದೆ—

[1] ಪಂಚಾಶನ್ಮಿತಕೋಟಿಯೋಜನಭುವಂ ಕೇಪ್ಯೋಜಸಾಂಮ್ಯಸ್ಥಿತಿಂ ಮೇರೋರ್ದಕ್ಷಿಣಕರ್ಮಭೂಮಿಜನಪಾಂಸ್ತ್ರಾತುಂಚಕರ್ಮಾಪ್ತವಾನ್। ಅಷ್ಟಸ್ವಷ್ಟಯುತೋ ಹರೀನಹರಭೂಸ್ಥಾನೇಚ ಸಂಚಾರಿತೋ ತತ್ರಾನಂದ ಮಯೋ ವಿಭೂತಿರುಚಿರಃ ಶ್ರೀಶಂಕರಃ ಪಾತುವಃ ॥

[2] ದ್ವಿಸಪ್ತಾಃ ಸಲ್ಲೋಕಾಸ್ತದನು ಮನವೋಷ್ಟೌಚಭುವನಾಧಿಪಾರುದ್ರಾಸ್ತ್ವೇಕಾದಶದಶದಿಶೋದ್ವಾದಶಗಣಾಃ। ವಿವಸ್ವಂತಃ ಸ್ಸಂತೋವಸವ ಇಹತೇಷ್ಟೌಚನವಚಪ್ರಜಾಪತ್ಯಾಖ್ಯಾಸ್ತೇದ್ರಿತುಕಿಲಮರುದ್ಧಿರ್ಮುನಿಜನ್ಯೈಃ॥

[3] ಅಷ್ಟಾದಶಸಹಸ್ರಾಣಿ ಋಷಯಃ ಸನಕಾದಯಃ। ದೇವದ್ವಿಜಮನುಷ್ಯಾದಿ ದರ್ಶನಾನಂದ ಶಂಕರಃ ॥

[4] ಜಯತಿವಿತತಕೀರ್ತಿಃ ಸಚ್ಚಿದಾನಂದಮೂರ್ತಿಃ। ಶ್ರಿತಜನಪರಿಪೂರ್ತಿಃ ಧರ್ಮಕಾರೀಕ್ಷತಾರ್ತಿಃ। ನುತಜನಗತಚಿತ್ತಿಃ ವೈರಿಣಾಂದತ್ತತೃಪ್ತಿಃ ಶ್ರುತಿನಿಕರಸುಗೀತಿಃ ಭೂತಲೇ ರುದ್ರಶಕ್ತಿಃ॥

[5] ಸೋಯಂ ಸರ್ವೇಶ್ವರೋಭಾತಿಜಿತಕಲ್ಪದ್ರುಮೋನ್ನತಿಃ। ಬ್ರಹ್ಮಾಂಡಮಂಡಲೇಯಸ್ಯ ಶಂಕರೋವಿಜಯಾಯತೇ॥

ತುರ್ಯ—ಮಸ್ತಕಪ್ರಕಟ ಸತ್ಯಪ್ರಮಾಣ ಕಲಾಕೋಲಾಹಲ ಸತ್ಕಲಾರಾಜದ . . . . ಭಾರತೀಂದ್ರ ಗುರುಸ್ಥಾನಾಚಾರ್ಯ ವಸಿಷ್ಠ ವಿಶ್ವಾಮಿತ್ರ ಕಾಸ್ಯಪಾತ್ರಿ ದೇವಲ ನಾರದಾದಿ ದೇವಸ್ಥಾನಾ (ನಾ) ನುಷ್ಠಾನಾತ್ತ ಪ್ರಾಗಾದಿರಿಷಿ ಮುನಿಗಣಸ್ತುತ ಪ್ರಸ್ತುತಲಲಾಮತರದೇವತಾದ್ವಾತ್ರಿಂಶದಾಸನ ವಿದಿತಪ್ರಾಜ್ಞಸ್ವಾಧಿಷ್ಠಾನಾದಿ ಸಹಸ್ರಾರಾಂತ ವೃತ್ತಿ ಬಲಪ್ರತಾಪಜ್ಞಪುರಾಣಕಾಲಾದಿಕ ಗಣಯೋಗಮಹಾಯೋಗ ಬ್ರಹ್ಮಯೋಗ ಪರಿಣತದೇವ ದಾನವಾದಿ ಶಕ್ತಿಗಣೈಹ್ರೀ ಶ್ರೀ ಮಾತುಸ್ಥಾನ ಸ್ಥಿತಿಪ್ರದ ನಿಜಸ್ವರೂಪಜ್ಞ ನಿಗಮಾಗಮಕೂಟ ದೋಷಜ್ಞ ವೇದಾಂತ ಪ್ರಾಭಾಕರ ನ್ಯಾಯಗಣಿತ ಗಾಂಧರ್ವ ಛಂದೋನಿಘಂಟು ಕಾವ್ಯನಾಟಕಾಲಂಕಾರ ಅಕ್ಷರಲಕ್ಷಣ ಕಾಯಧಾರಣ ತಂತ್ರಮತ ರಕ್ಷಣ ಸಾಮುದ್ರಿಕ ಶಕುನ ಸೂಪಶಾಸ್ತ್ರ ಭರತಗಾಯನ ವಾದ ತರತ ಪರಾಜ ಚಿತ್ರಕಾಲಾದ್ಯನೇಕ ಪ್ರಶಾಧಿ ಸಕಲಶಾಸ್ತ್ರ ಶ್ರವಣ ಪಾರಂಗತ ಪರಕಾಯ ಪ್ರವೇಶ ವಶ್ಯಾದ್ಯಾಕರ್ಷಣಾದಿ ಚತುರಶೀತಿ ವಿದ್ಯಾಪತಿ ಶ್ರೀವಿಜಯ ಶಂಕರಭಾರತೀ ಗುರುಭಟ್ಟಾಚಾರ್ಯ ವಿಶ್ವರೂಪಾಚಾರ್ಯ ವೈಷ್ಣವಪ್ರಣವದಾಚಾರ್ಯ ರಾಮಾನುಜಾಗಮ ಶ್ರೀ ಭಗವದಾರಾಧ್ಯ ನೀಲಕಂಠಾರಾಧ್ಯ ವಜ್ರನಖರದೇವಾರಾಧ್ಯ ಪೆರಮಾಹಾಯಂತ್ರ . . . . ಶ್ರೀ ವಿಮತ ಸಂಮ್ಮತ ಸಮಂತಾರಾಧ್ಯ ಕಾಶೀವಾಸ ಬ್ರಹ್ಮಾಂಶ ಸರಸ್ವತೀ ಗುರು ಮಂಡನಮಿಶ್ರ ಕಲಕಾಲಜ್ಞ ಸರಸ್ವತೀವಾಗ್ವಿಜಯ ಶಂಕರಭಾರತೀಂದ್ರ ಸ್ವತಂತ್ರ ಸ್ವೇಚ್ಛಾವಿಹಾರ ಪರಪಾರಂಗತ ವದಮ ಶಾಶಂಕಾ ಪರಾಹತಾಕಾರಿ ರುದ್ರಾಲಯಾದಿ ಅಷ್ಟಷಷ್ಟಿ ಶಿವಕ್ಷೇತ್ರ ವಿಷ್ಣುಕ್ಷೇತ್ರ ೫೬ ಶಕ್ತಿ ೨೧ ಗಣಪತಿಸ್ಥಾನ ೧೨ ಆದಿತ್ಯ ಚೌಷಷ್ಠಿಯೋಗಿನಿ ಮುಖ್ಯಸ್ಥಳ ೩೨ ಭೈರವ ಏಕಾಂಶ ರುದ್ರಕೋಟಿ ರಾಮೇಶ ಲಕ್ಷ್ಮಣೇಶ ರುದ್ರಪಾದ ವಿಷ್ಣುಪಾದ ಹರಿಹರ ಹಿರಣ್ಯಗರ್ಭ ಶ್ರೀ ವಿದ್ಯಾ ದೇವತಾಪಾದ ಪದ್ಮಾರಾಧಕ ಆದಿಶುದ್ಧ ಮಿಶ್ರಶೈವಾಚಾರಜ್ಞ ವಿಭೂತಿ ರುದ್ರಾಕ್ಷ ಮತೋದ್ಧಾರ ರುದ್ರಾಚರಣ ಪರಕಾಷಾಯವಸ್ತ್ರ ದಂಡಕಮಂಡಲಾಲಾಂಛನ ಶ್ರೀ ಸ್ಥಾನ ಮಠ ಸಹಸ್ರನಿಲಯ ಸ್ಥಾನಾಚಾರ್ಯ ಮಾನ್ಯ ಸರ್ವದೇಶ ಪೂಜ್ಯಪಾದುಕಾ ಅಶನತೃಷಾಯಾಚಿತ ಯಾದವಶೃಂಗವರ್ಯ ರಕ್ಷ ದಕ್ಷ ಕಾದಂಬರರಾಯ ಭರಣದೇವರಾಜ ರಾಜಪರಮ (ಹಿಂಭಾಗ) ಶ್ರೀ ಪೃಥ್ವೀ ಉದ್ಧಾರಕತರ ಶ್ರೀವರಹಯುಕ್ತ ಉಭಯಾಂಕಿತ ಸಾಕ್ಷಿ ನಾಗಮುದ್ರಾ ಅರಗ ೧ ಚಂದ್ರಗುಪ್ತಾಗತಾ ರಾಜಪೂಜಿತ ಪಾದುಕಾಸಮೇತ ಸ್ವಾನುಭವ ಪರತರ ಶ್ರೇಷ್ಠ ಕಾದಂಬವಂಶಾನ್ವಯ ಪುರಂದರ ರಾಯ ಶಾಲಿವಾಹನಶಕ ೧೦೭೫ನೇಯಾ ಶ್ರೀಮುಖ ಮಾಘ ಬ, ೧೪ ಸೋಮವಾರ ಪುಣ್ಯಕಾಲದಲು+ದ್ವಾದಶಸಂ ವೃತದೇಶ ಮಧ್ಯದೇಶ ರಾಮಚಂದ್ರ+ಶ್ರೀ+ಬೆನೂರಕಂಪಣದಲ್ಲೂ ಸಾಂಬಪುರೇವೃತ್ತಿ ೧೩ ತ್ರಯೋದಶ ಭೂಸಂಕೇತ ಶಿಲಾಸ್ಥಾಪಿತ ಶ್ರೀ ವಿದ್ಯಾಶಂಕರಾರ್ಪಿತ ಧರ್ಮಾಭಿಷೇಕಂ+ಲಿಂಗಶೈಲ ಸಂಜ್ಞೆಯವೃತ್ತಿ ೨ ದ್ವಯಸ್ಯ ವರದಾದಕ್ಷಿಣ ಸ್ಥಿತಾನಾಗಮುದ್ರಾ+ಬ್ರಹ್ಮರುದ್ರ ಅಡಿಗೆ ಬಹಿಗ್ರಾಮೈಃ ಶಿವಪುರ ಭದ್ರನಗರೇ ಪ್ರತ್ಯೇಕಂ ನಿಷ್ಕದ್ವಾದಶಾಃ ಕಮಠ ಕ್ಷೇತ್ರೇ ಕತಶಾನ್ವಯಕ ಪುತ್ರ ಬ್ರಹ್ಮಪೂಗಾರಾಮ ಚನ್ನೆಹರುವು ಗದ್ಯಾಣ ೧೦ ಆದಾಪುರ ವೃತ್ತಿ ೨ ನಾಗಮುದ್ರಾ + • • • • +ಪುರಂಧರಭಾರ್ಯಾ ಮಹಾಮ+ಶ್ರೀಗುರು ಆದಿಕೈಟಭೇಶ್ವರ ಸನ್ನದ್ಧ ಸತ್ರಧರ್ಮ ಭಾರತೀಯೋಗಾನ್ವಯ ಮಾಹಿಷಾಪುರ ಚಾಟಿಗುಂಡಿಯಲ್ಲುವೃತ್ತಿ ೧೨ ಉಭಯನಾಗಮುದ್ರ ಶಿಲಾಮೂಲ ಗುರುಕಾಗಿನೆಲ ತಿಲವಳಿ ತಡಸ ವುರುಗಾಲ ಹಸ್ತಿನಾವತೀ ಭೀಮೇಶ ಪಾಂಡುರಂಗ ಮುಖ್ಯಸತ್ರಮಾನ್ಯಪುರ . . . . ನಗರಗೌರೀಪುರ ವೃತ್ತಿ ೧೨೮ ಅಡಿಗೆಸುಧಾಪುರ ಶಿವಪುರ ; . . . ಗೋಕರ್ಣಾದಿ ಗೋಮಂತಕಾಶೀಪುರ ತತ್ರಸ್ಥಾನೇಮಾ . . . . ಕಸರದಾಪುರ ಶ್ರೀಶೈಲದೇಶ ರಾಮಸೇತು ಅನಂತಮುಖ್ಯ ಪದ್ಮನಾಭನಗರ ಪತ್ತೂರಕ ಪಟ್ಟಣ ಅರ್ಗಲಾಪುರ ಪುಲೀಕೊಪ್ಪ ಮೊದಲಾದ ಅಗ್ರಪೂಜಾ ಆರಾಧನ ೭ ವಾಮ ೧೪ ಜಾತಿ ೧೦೧ ಕುಲಸ್ಥೈರ ಸಮ್ಮತ ಭೂತಿ ರುದ್ರಾಕ್ಷ ಕಾಷಾಯವಸ್ತ್ರಕದೇಹ ಶ್ರೀಭಾಗೀರಥೀ ಮುಖ್ಯಸಹನದೀತೀರ್ಥ ಕಮಂಡಲುಜಲ ಸುಮಾತ್ರದೇಹ ಪವಿತ್ರೀಕೃತ ವಾಮಜಿತಕುಲ ವಿದ್ಯಾಗುರು ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯಮ ಮೌನತಪಶ್ಚಕ್ರವರ್ತಿ ಅನಾದಿಗುರುಪರಂಪರಾಪ್ರಾಪ್ತ ಷಡ್ದರುಶನಸ್ಥಾಪನಾಚಾರ್ಯ ವೇದಾಂತವ್ಯಾಖ್ಯಾನ ಸಿಂಹಾಸನಾಧೀಶ್ವರ ಸಾಂಖ್ಯತ್ರಯೀಪ್ರತಿಪಾಲಕ ಸಕಲವಿದ್ಯಾ . . . . ವಿಶಾರದ ನಿಗಮಾಗಮ ಸಾರಹೃದಯ ವೈದಿಕಮಾರ್ಗಪ್ರವರ್ತಕ ಭೂಮಂಡಲಾಚಾರ್ಯ ರುಷ್ಯಾಶ್ರಮನರಸಿಂಹಕ್ಷೇತ್ರ ವಿದ್ಯಾನಗರಸ್ಥ ವಿದ್ಯಾಶಂಕರ ಸರಸ್ವತ್ಯಾರಾಧಕ ಸರ್ವದೇಶಸಾಲಮೂಲಗೆ ಪರತರಶ್ರೀಸಪರ್ಯ ವೈಭವಕ್ಕೆ ಗುರುಸ್ಥಾನ ಮಾನ್ಯಮ ಶಮುದ್ರಾಚಾರ ಅಂದೋಳಿಕದ್ವಯ ಸಂಮುಖಾಶ್ವಪದಾತಿ ಛತ್ರಚಾಮರಾದಿತಾಳ ನೃತ್ಯತೋರಣಧ್ವಜ ಶಂಖ ಚಕ್ರ

ಪಂಚವಾದ್ಯ ಡಕ್ಕ ಡಿಂಡಿಮ ಝುಲ್ಲರೀಪಟಹಜಾಘಟಿಕಾದಿವಾದ್ಯ ಭಾಟ್ಟಸ್ತೋತ್ರ ಸ್ವರ್ಣರಜತ ಕರಾಂಕಿತ ನಿಜಸೇವಕ ಭಕ್ತಪಾಲನ ಮನೋಭೀಷ್ಟ ಪ್ರದಹರಿಹರ ಹಿರಣ್ಯಗರ್ಭಾದಿ ಶ್ರೀಮದ್ವಿಜಯಶಂಕರ ಭಾರತೀ ಶ್ರೀಪಾದಪೂಜ್ಯಕ ಶ್ರೀಗುರುಪರಂಪರಾದಿಗಳಿಗೆ+ಸೋಮಾಂಶಕಾದಂಬಕುಲತಿಲಕ ಪುರಂದರರಾಯ . . . . ಆದಿತ್ಯ ಚಂದ್ರಾವನಿಲೋ ನಲಶ್ಚ ದ್ಯೌರ್ಭೂಮಿರಾಪ್ಯೋಹೃದಯಂಯಮಃಶ್ಚ+ಅಹಶ್ಚರಾತ್ರಿಶ್ಚ ಉಭೇ (ಚ) ಸಂಧ್ಯೇ ಧರ್ಮ(ಶ್ಚ) ಜಾನಾತಿನರಸ್ಯ ವೃತ್ತಂ+ಧರ್ಮೇಣವರ್ಧತೇಪುತ್ರ+ಧರ್ಮೇಣ ಪುಣ್ಯವರ್ಧನಂ ಸ್ವದತ್ತಾ ಪುತ್ರಿಕಾಧಾತ್ರೀ ಪಿತಾದತ್ತಾ ಸ (ಹೋ)ದರೀ ಅನ್ಯದತ್ತಾ ಸ್ವಯಂಮಾತಾ ತಸ್ಮಾದ್ದಾನಂಚ ಪಾಲಯೇತ್ ಶ್ರೀಗುರುದೇವ ಧರ್ಮರಾಜ ಪಾಲ್ಯತೇ ಜನ್ಯೈಃ ಹಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ (ಸುತ್ತಲೂ ಬರೆದಿರುವುದು).

ಪುರಾದಿತ್ಯ ಸಿಂಧುಕೃತ ಪಾತ್ರಂಚಕ್ರೇ ಕ್ಷಿತಿ ವಿಂಶತಿ ಕೃತಧರ್ಮಕೀರ್ತಿಃ ಸಾಂ ಪಿಲಾ ಆಹ ಹರಿಹರಕರನಿತ್ಯಂ, ಪರಿಪೂರಿತ ಧರ್ಮಕೀರ್ತಿ ಶ್ರಿಯಂಭವತು ॥ ಶ್ರೀಗುರು——

ಸಾಮಾನ್ಯೋಽಯಂ ಧರ್ಮಸೇತುರ್ನೃಪಾಣಾಂ ಕಾಲೇಕಾಲೇ ಪಾಲನೀಯಶ್ಚಧೀಃ ಸರ್ವಾನೇತಾಭಾವಿನಃ ಪ್ರಾಂಜಲಿಃ ಸನ್‌ಭೂಯೋಭೂಯೋ ಯಾಚತೇರಾಮಚಂದ್ರಃ॥ ಶ್ರೀಗುರು ವಿದ್ಯಾಶಂಕರ ಸರಸ್ವತೀ ಶ್ರೀಃ

(ಈ ಶಾಸನವು ಎಪಿಗ್ರಾಫಿಕಾ ಕರ್ನಾಟಕದ ೭ನೇ ವ್ಯಾಲ್ಯುಂನಲ್ಲಿ ಶಿವಮೊಗ್ಗಾ ತಾಲ್ಲೂಕಿನ ೭೫ನೇ ಶಾಸನವಾಗಿ ಪ್ರಕಟವಾಗಿದೆ.)

———

೨. ತಾಮ್ರಶಾಸನ.—ಮನ್ಮಥ ಸಂ. ಮಾಘ, ಶಾ. ಶ. ೧೧೫೭, ಕ್ರಿ. ಶ. 1235.

ವರಾಹಮುದ್ರೆಯ ಹಿಂಭಾಗದಲ್ಲಿ. ಶ್ರೀವಿದ್ಯಾಶಂಕರ.—

[5]–ಐಂಕ್ಲೀಂಸೌಃಪ್ರಥಮಂ........ಸ್ಮರಾಮಿ । ಹರಿಹರ – ಶ್ರೀಶ್ರೀವರಾಹಸ್ಯಶಿಖಾ.

(ಮುಂಭಾಗ) ಸ್ವಸ್ತಿತ್ರಿಪುರಸುಂದರೀ ಶ್ರೀಚಕ್ರನಾಯಕೀಂ ಭಾರತೀಂವಂದೇ ಶ್ರೀಗುರುಪೂಜ........[1]ಶ್ರೀನಮಸ್ತುಂಗಶಿರಃ = ಅ = [2]ಅನನ್ಯಾಶ್ಚಿಂತಯಂತೋಮಾಂ = ಮ್ಯಹಂ. × ಗೋತ್ರೇಣ[3]ಷಡ್ವೈರಿಭೇದಚಕ್ರಂ = ಶೈವಾಗಮೇ× ಶಂಕರಾಚಾರ್ಯಮಿಡೇ × [4]ಬಿಂದುತ್ರಿಕೋಣ [5]ಐಂಜನನೀಂಬ್ರಾಹ್ಮೀಂ ಜಗನ್ಮಾತರಂ × ಚಕ್ರರೂಪೀಂಭಜೇ × [6]ಐಕಾರ ನಿಲಯೇದೇವೀ ಏಕಾಮರೂಪಿಣೀ + [7]ಅಕ್ಷಮಾಲಾ ವೃತಕರಾ = ಸರಸ್ವತೀ = ಇತಿಶಂಕರವಿಜಯೇ = ದೇವೀರಹಸ್ಯೋಕ್ತಂ = [8]ನಮೋಬ್ರಹ್ಮಣೇ = ಮಮಾಯುಷ್ಯಶ್ರೀಂ = ಇತಿಮಂತ್ರಂ = ನಿಗಮೋಕ್ತಂ. ಸ್ವಸ್ತಿಶ್ರೀ

---

ಈ ಶಾಸನದಲ್ಲಿ ಆದ್ಯಂತವಾಗಿ ಬರೆಯಲ್ಪಟ್ಟ ಶ್ಲೋಕಗಳ ಪೂರಣವು ಕೆಲವು ಹಳೆ ಪ್ರತಿಗಳಲ್ಲಿ ಈ ಕೆಳಗೆ ಕಂಡಂತೆ ಇದೆ :

[1] ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥

[2] ಅನನ್ಯಾಶ್ಚಿಂತಯಂತೋಮಾಂ ಯೇಜನಾಃಪರ್ಯುಪಾಸತೇ। ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂವಹಾಮ್ಯಹಂ ॥

[3] ಷಡ್ವೈರಿಭೇದಚಕ್ರಂ ಪರಪದವಿನರಾಧೀಶತೋಭ್ಯೈಕಚಕ್ರಂ। ಗ್ಲಾನೋರ್ವೀಕಾಲಚಕ್ರಂತದುಪರಿಭವನಂಶಂಭುಶಕ್ತ್ಯಾಖ್ಯಚಕ್ರಂ । ಅಂತರ್ಲೀನಂ ತ್ರಿಚಕ್ರಂತ್ರಿಭುವನವಿಜಯಿವ್ಯಾಪ್ತಗೀರ್ವಾಣಚಕ್ರಂ । ಐಂಕ್ಲೀಂಸೌಂಕಾರಚಕ್ರಂಪರತರಸುಖದಂಶಂಕರಾಚಾರ್ಯಮೀಡೇ ॥

[4] ಬಿಂದುತ್ರಿಕೋಣವಸುಕೋಣ ದಶಾರಯುಗ್ಮ ಮನ್ವಸ್ರನಾಗದಲಸಂಯುತಷೋಡಶಾರಂ। ವೃತ್ತತ್ರಯಂಚ ಧರಣೀಸದನ ತ್ರಯಂಚಶ್ರೀಚಕ್ರಮೇತದುದಿತಂಪರದೇವತಾಯಾಃ ॥

[5] ಐಂ. ಕ್ಲೀಂ. ಸೌಃ. ಪ್ರಥಮಂಸ್ಮರಾಮಿಜನನೀಂ. ಬ್ರಾಹ್ಮೀಂ. ಜಗನ್ಮಾತರಂ। ಚೈಂ. ಕ್ಲೀಂ. ಸೌಃ. ಪರದೇವತಾಂ. ಸ್ವರಮಯೀಮಿಂದೀವರಾಕ್ಷೀಂಶಿವಾಂ ॥ ಹ್ರೀಂಬ್ರಹ್ಮಾತ್ಮಕರೂಪಿಣೀಂಭಗವತೀಂ. ಶ್ರೀಶಂಭುತೇಜೋಮಯೀಂ । ಕ್ಲೀಂ. ವಿಶ್ವಾತ್ಮಕರೂಪಿಣೀಂ ತ್ರಿಜಗತಾಂ. ಶ್ರೀಚಕ್ರರೂಪೀಂಭಜೇ ॥

[6] ಐಕಾರನಿಲಯೇದೇವಿ. ಕ್ಲೀಂಕಾರಭುವನೇಶ್ವರಿ । ಸೌಂಕಾರಸರ್ವವಶ್ಯಾಚ. ವರದೇಕಾಮರೂಪಿಣೀ ॥

[7] ಅಕ್ಷಮಾಲಾವೃತಕರಾ. ವೀಣಾಪುಸ್ತಕಧಾರಿಣೀ । ಮಹಾವಿದ್ಯಾಮಹಾರಾಜ್ಞೀಭಾರತೀ ವಾಕ್ಸರಸ್ವತೀ ॥

[8] ನಮೋಬ್ರಹ್ಮಣೇಧಾರಣಂಮೇ ಅಸ್ತ್ವನಿರಾಕರಣಂ. ಧಾರಯಿತಾಭೂಯಾಸಂಕರ್ಣಯೋಃಶ್ರುತಂ. ಮಾಚ್ಯೋಢ್ವಂ. ಮಮಾಮುಷ್ಯಓಂ ॥

ಸಮಧಿಗತಪಂಚಮಹಾಶಬ್ದ ಮಹಾರಾಜರಾಜೇಶ್ವರೀ. ಭುವ(ನ)ನಾಯಕೀ ಭಗವತೀಪಾದಪದ್ಮಾರಾಧಕ ಸ್ವಾನುಭವ ಪ್ರಾಜ್ಞಾನುಗ = ದೀಕ್ಷಾ....ಭಟ್ಟಾರಕಗೌಡಗೋವಿಂದ ಶಂಕರಪಾರಂಪರ್ಯ ಮುಖ್ಯಶಿಷ್ಯಾದಿ = ಶ್ರೀಮತ್ಪರಮಗ.... ಶ್ರೀಮತ್ಕಾಶೀವಾಸಮಂಡನ ಮಿಶ್ರಾಶ್ರಮಸ್ಥಿತ ಸರಸ್ವತೀ ನಿಜಪಾದಚ ........ ವಿದ್ಯಾಸಕಲಶಾಸ್ತ್ರೇಷು ಜಯಂಪ್ರದ ಶ್ರೀಗುರುವಿಜಯಶಂಕರಭಾರತೀ ಶ್ರೀವಿದ್ಯಾರಾಧಕಸಂಪ್ರದಾಯಿಕ. ಶ್ರೀವಿದ್ಯಾರಾಧಕಸ್ಯಸ್ವರ್ಣವೃಷ್ಟ್ಯಾಗಮನಕಾಲೇ ತಸ್ಯಪ್ರೇವ‍ಃಕಾರುಣ್ಯ ಯಾದವನಾರಾಯಣಂಬುಜಬಲಪ್ರತಾಪಚಕ್ರವರ್ತಿ. = ಸಮಸ್ತಭುವನಾಶ್ರಯಂ = ಪೃಥ್ವೀ = ಅಷ್ಟಾದಶ ಪೀಠಾಚಾರ್ಯ ಮತಸಂಮತ ಪ್ರತಿಷ್ಠಾಪನಾಚಾರ್ಯ + ಶ್ರೀ + ಸಪರ್ಯಾದಿದ್ವಾದಶಕಾಲನಿಯಮಾ ರಾಧನಚತುಷಷ್ಟ್ಯುಪಚರ್ಯದ್ವಾತ್ರಿಂಶತ್ಸೇವಕಾದಿರಾಜೋಪಚರ್ಯ ವೈಭವಬ್ರಹ್ಮ ಪ್ರಾಣಾದಿಗಳಿಗೆದತ್ತಂ ಹಿಮವದ್ಗಿರೀಂದ್ರ ದಕ್ಷಿಣಸ್ಥಿತಸಹ್ಯಾದ್ರಿದೇಶಮಧ್ಯೆ + ಮಹಾರಾ = ಶ್ರೀಪ್ರತಾ = ಕದಂಬರಾಯರು = ಸಾಮಂತ ದುರ್ಗ = ಬನವಸೆ = ಆರಗಕಂಪಣದಲು = ಸುಖ = ಪ್ರತಿ ಶ್ರೀಶಾಲಿಸಂಜ್ಞೇ ವಿಂಶತಿಮನ್ನಥೇ ಮಾಸಿಮಾಘೇ ಶಿವಸೇಂದುಚಸಂಯ.ಂಕ್ತೇ॥ ಶ್ರೀಶೃಂಗಪುರ್ಯಾದಿಮಹಾಗ್ರಹಾರಾನ್ ಇಷ್ಟಾನಿಪೂರ್ತಾನಿ ಮನೋರಥಾಪ್ತಿಂ+ಹರಿ ಹರಹಿರಣ್ಯಗರ್ಭ........ಕರ + ಇಷ್ಟಾಪ್ತಿ ನಾದಿಗಳಿಗೆ–ಅಗ್ನಿಹೋ........ವೇದಾನಾಂಚಾನುಪಾಲನಂ ಇಷ್ಟಮಿತ್ಯಭಿ ಧೀಯತೆ = ವಾಪೀಕೂಪತಟಾಕಾ(ದಿ)ದೇವತಾಯತನಾ ಇತಿಶಂಕರ ವಿಜಯೋಕ್ತಂ = ಸರ್ವದೇಶದೇವಗುರುಸ್ಥಾ ನವರ್ಣಾಶ್ರಮ-ಹರಿಹರ........ಯುತಸಂಸ್ಥಾನ = ದರ್ಶನಾದಿದೇಹಜನಿತ ವಿಷ್ಟುಃ =ಭಟಾಚಾರ್ಯಾದಿ = ತಮತ ಪ್ರಸ್ವಸ್ತಿ ಸಮಸ್ತಪ್ರಶಸ್ತಿ ಸಹಿತ ಕುಲಪೂಜಾರ್ಚನಾದ್ಯಂಗ ಭೈಕ್ಷಮಾಹಾತ್ಮ್ಯ ಜಪಪಾರಾಯಣ ಅಂಗರಂಗನಿತ್ಯ ನೈಮಿತ್ತಿಕೋತ್ಸವತಂತ್ರಕ್ರಿಯಮಾನ್ಯ = ಕಶ್ಯಪಗೌತಮಭಾರದ್ವಾಜ ವಶಿಷ್ಠ ಕೌಶಿಕ ವಿಶ್ವಾಮಿತ್ರ ಕೌಂಡಿನ್ಯ ಜಮ ದಗ್ನಿಜಾಬಾಲಿ ಅತ್ರಿ........ದ್ವಾದಶೋತ್ತರ ಶತಾನ್ಗೋತ್ರಿಣಾಃ ಶೃಂಗಪುರವಗ ವಿದ್ಯಾರಣ್ಯಪುರಪದ್ಮನಾರಾಯಣ ಪುರ........ವೃತ್ತಿನಿಷ್ಕಪ್ರತ್ಯೇಕ ಪ್ರತ್ಯೇಕ ೩೬೦ ಸಂಖ್ಯಾಪ್ರಥಮಾದಿಕ್ರಮೇಣ ಸಹಿರಣ್ಯೋದಕ ದಾರಾಪೂರ್ವಕ ಶ್ರೀ ವಿದ್ಯಾರಣ್ಯಸ್ಯದತ್ತಂ = ವಶಿಷ್ಟಃ ಕಾಶ್ಯಪೋತ್ರಿವಿಶ್ವಾಮಿತ್ರೋಥಗೌತಮಃ ತಸ್ಯಮುಖ್ಯಾಗ್ರಹಾರಾತಥಾಗಣಪುಂಗ ವಾ ॥೧॥ ಶ್ರೀಗುರು ಶ್ರೀಗುರುದೇವನಾರಾಯಣ ಗೌಡಗೋವಿಂದದತ್ತಾತ್ರೇಯದರ್ಶನಾನಂತರಂ ಸ್ವಭವನಸ್ಥಾ ಪನ ಸಂಪ್ರದಾಯಸ್ಥಾನ = ರಾಜಗಣಾಧೀಶ್ವರಸಾಕ್ಷಿಣಃ ಹಿರಣ್ಯಗರ್ಭಚಂದ್ರ ಶಿಖಾಶಾರದಾ ಶ್ರೀವಿದ್ಯಾಶಂಕರ ವರದ ವಿಭಾಂಡಕಾಶ್ರಮ ಮಹಾಲಕೇಶ್ವರ = ಶ್ರೀನರಸಿಂಹ = ಶ್ರೀತುಂಗಭದ್ರಾ = ........ಶೃಂಗಲೇಶ್ವರ = ಭೈರವಾದಿಮುಖ್ಯದೇವತಾ........ಶ್ರಿಂಗಸ್ಥಾನಾದಿ = ಅಂತರಾಳೇ = ಶ್ರೀ ಶ್ರೀಮಹಾರಾಜ ॥೧೮॥ ೧೦೧ ......... ಮೇಣಪಾಲ್ಯತೇ = ವರ್ಧತೇ = ಶ್ರೀಭಗವತೀದೇವೀವರದೇಶ್ರೀ = ಐಶ್ವರ್ಯಸ್ಯಸಮಗ್ರಸ್ಯ = ಶ್ರೀಯಃ = ಸಾಲಮೂಲಗೆ........ವೃಧ್ಯಾದಿ = ಗಜಾಂತ = ಗುರುಪ್ರಸಾದಾಭಿಮಾನ ದೇಹಜನಾಃ = ಮಹಾಲಕ್ಷ್ಮೀಪ್ರಾಪ್ತಿ= ಸಪರ್ಯಾ........ಸಂಕೇತ ಶೃಂಗಪುರವಿದ್ಯಾರಣ್ಯಪುರ = ಅಮೃತ = ಸಚಿದಾ = ಶಿವಪ್ರ = ಶಾತವಳ್ಳಿ= ನರ ಸಿಂಹ = ಹಾರವಲೀ ॥ಮಡವಾ॥ ಬೆಲಗುದಿಹಳಿ = ಗೌಡವ = ಬೇಲುಪುರ = ಆಲವಾ=ಭಾಗ್ಯಪುರ = ಸರಸ್ವತೀ ಪುರ = ಹರಿಯಟ್ಟೆ=ಸೈಗಲಹಳ್ಳೀ = ವೀರಾಪುರಸಿದನಲ = ತುಂಗಾಪು = ಪರ್ವತ = ಸಾಂಬಪುರ॥ ಬೆಲುಕು= ಶಂಕರೀಕೋ = ಮಹ = ವಿದ್ಯಾಪು = ಚಕ್ರನಗರ = ವರದ = ಮೂಲಗ್ರಾಮಾದಿದ್ವಾದಶ ಸಹಸ್ರನಿಷ್ಕಪರಿಮಿತ ಭೂಸಂಕೇತಭೂರಾಶಯ ಸ್ವರ್ಣರಾಶಯಃ ಸ್ವರ್ಣಾಶಯ ........ ಸಹಿರಣ್ಯೋದಕಶೇಕಾದಿ ಶಿಲಾಭೂಸ್ಥಾಪಿತ ವಾಮ ನಮುದ್ರಾದಿ ಶಂಖಚಕ್ರಲಿಂಗಲಾಂಛನ ಭೂಸಂಧಿ = ನಗರಪಟ್ಟಣಾಗ್ರಹಾರ ಪುರಪಲ್ಲೀಕೊಪ್ಪ ಸರ್ವಜನಪದಾದಿ ಸರ್ವದೇಶಮಠಸ್ಥಾನ ಗುರುರಾಜದ್ವಿಜಾದಿ = ೧ = ೧ ॥ = ೧೦೧ = ಕುಲಾದಿಛಪಂನ ದೇಶದೇಶಸ್ಥಾನ ಮಧ್ಯೇ–ಗಜಾಶ್ವಸಮ್ಮುಖಾಂದೋಳಿಕ ಛತ್ರಚಾಮರತೋರಣ ಕಲಶಧ್ವಜಪತಾಕರಥಾಯುಧ ಪದಾತಿಸಮೇತವೀಧಿ ಪ್ರಸ್ತಾರ ಕುರಜು ಮರಗುಡಿಮಕರ ........ ಚಕ್ರತ್ರಿಶೂಲಾಯುಧ ಉಭಯಪಾರ್ಶ್ವಸ್ವರ್ಣ ವೇತ್ರಾಂಕಿತ ಭಟಪಂ ಚಮಹಾವಾದ್ಯಝಲ್ಲರಿ ಡಿಂಡಿಮಡಮರುಢಕ್ಕ ಪಿನಾಕಪಟಹ ಶಂಕಚಕ್ರ ಉಭಯತಾಲಕಾಹಲ ಸಮ್ಮೇಲಾದಿಜಾಘಟ ಕಾದಿ ವಾದ್ಯರಾಜೋಪಚರ್ಯ ವೈಭವದೇಶದೇಶ ದೇವಗುರುರಾಜಸ್ಥಾನಾಚಾರ ದೋಷಪ್ರಾಯಶ್ಚಿತ್ತ ವ್ಯವಹಾ ರಾದಿ ಅಗ್ರತಾಂಬೂಲ ಅಗ್ರಪೂಜಾ ಪೌರೋಹಿತ್ಯಾದಿ ಮಹಾಜನ ಸರ್ವಯಜಮಾನ ಮುದ್ರಾವಿಚಾರಣ ಕಾರಣ

ಶ್ರೇಷ್ಠ ॥ ಶ್ರೀಗುರುಶ್ರೀವಿಜಯ ಶಂಕರಭಾರತೀ ಸ್ವಾಮಿಸ್ವಾನುಗ್ರಹಕಟಾಕ್ಷದೇಹ ಪ್ರವಿತ್ರೀಕೃತಭವಾಬ್ಧಿ ಮಗ್ನದೇಹ ಪವಿತ್ರೀಕೃತ ॥ ಶಿವಶಕ್ತಿ ವಿಷ್ಣುಲಾಂಛನ ಮುಖ್ಯಷಟ್ದರ್ಶನಾದಿ ಏಕೋತ್ತರಶತಸ್ಥಲಾದಿ ಷಷ್ಟಿಶಿವವಿಷ್ಣುಶಕ್ತಿ ಮುಖ್ಯ ಏಕಾಶೀತಿಸಂಸ್ಥಾನಾಧಿಷ್ಟಿತ ಜಂಬೂದ್ವೀಪಾವೃತಮದಕ್ಷಿಣದೇಶ = ಭಟಾಚಾರ್ಯ ಶತಸ್ಥಳಾದಿ ಆಂಧ್ರಾಶ್ಚ ದ್ರಾವಿಡಾ ಚೋಳಾಕರ್ಣಾಟಾ........ಕಳಿಂಗಾಶ್ಚ ತುರುಷ್ಕಾಶ್ಚ ಕೇರಳಾಬರ್ಬರಾದಯಃ ಗೂರ್ಜರಾಪಾರ್ಶ್ವ ಕಾಶ್ಚೈವ ಮಳಯೋ ಕೊಂಕಣಾದಯಃ ಗೌಲಪಾಂಚಾಲ ಹಂವಿರ್ಮಾರಶೂರಸೇನಪ್ರಸಂಹಕಃ ಕುರುಕ್ಷೇತ್ರಂ ಚ ಕಾಶ್ಮೀರಂಯೌವನಃ ಕಾರಕಾದಯಃ ದಕ್ಷಿಣೋತ್ತರಮಧ್ಯೇತು ಜಂಬೂದ್ವೀಪೋ ವಿಶಿಷ್ಯತೇ ಆಸೇತು ಹಿಮಯೋ ರ್ಮಧ್ಯೇ ಶಂಕರಾರ್ಯ ಗುರುಂ ಭಜೇ ॥ ಶ್ರೀದ್ವಾತ್ರಿಂಶದ್ವಿಸಹಸ್ರದೀಕ್ಷಿತ ವರಾಚಾರಾನ್ಮಹಾಬ್ರಾಹ್ಮಣಾನ್.... ಇತಿ ಶಂಕರವಿಜಯೋಕ್ತಂ। ಶ್ರೀಗುರು ವಿದ್ಯಾವಿಜಯಶಂಕರ ಶ್ರೀ ವಿದ್ಯಾರಣ್ಯ...ತೀರ್ಥಾಶ್ರಮವನಾರಣ್ಯ ಕುಲ ಪರ್ವತಸಾಗರಂ ಸರಸ್ವತೀ ಭಾರತೀಂದ್ರಚಚಾರವಸುಧಾತಳಂ . . . . . . . . . . . .
ದೇವದ್ರವ್ಯ ಗುರುದ್ರವ್ಯ ವಿಪ್ರದ್ರವ್ಯಶಿವಾರ್ಚನೇ . . . . . . ಸ್ವದತ್ತಾ ಪುತ್ರಿಕಾಧಾತ್ರೀ ಪಿತೃದತ್ತಾ ಸಹೋದರೀ ಅನ್ಯದತಾ ಸ್ವಯಂ ಮಾತಾತಸ್ಮಾದ್ದಾನಂ ಪ್ರಪಾಲಯೇತ್ ॥ ಸಾಮಾನ್ಯೋಯಂ ಧರ್ಮಸೇತುರ್ನೃಪಾಣಾಂ ಕಾಲೇಕಾಲೇ ಪಾಲನೀಯಶ್ಚಧೀಃ ॥ ಸರ್ವಾನೇ (ತಾ) ಭಾವಿನಃ ಪಾರ್ಥಿವೇಂದ್ರಾನ್ ಭೂಯೋಭೂಯೋ ಯಾಚತೇ ರಾಮಚಂದ್ರಃ ॥ ಸ್ವದತ್ತಂ ಪರದತ್ತಂವಾಯೋಹರೇತವಸುಂಧರಾ ॥ ಷಷ್ಟಿವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿಃ ॥ ದಾನಪಾಲನಯೋರ್ಮಧ್ಯೇದಾನಾಚ್ಛ್ರೇಯೋನುಪಾಲನಂದಾನಾತ್ಸ್ವರ್ಗ ಮವಾಪ್ನೋತಿಪಾಲನಾದಚ್ಯುತಂ ಪದಂ. *ಶ್ರೀಕರಂಚ ಶ್ರೀ + ಶ್ರೀಮಂಗಳಮಹಾಶ್ರೀ.

---

## B. ವಿಜಯನಗರದವರ ಕಾಲ

### ತಾಮ್ರಶಾಸನ—ರುಧಿರೋದ್ಗಾರಿ, ಶಾ. ಶ. ೧೩೦೫, ಕ್ರಿ. ಶ. 1384.

श्री गणाधिपतये नमः। नमस्तुङ्गशिरश्चुम्बिचन्द्रचामरचारवे। त्रैलोक्यनगरारम्भमूलस्तम्भाय शम्भवे ॥ १ ॥ भूयस्यं भवतां भूत्यै भूयादाश्चर्यकुञ्जरः। आहुर्विहारकांतारमागमं यस्य योगिनः ॥ २ ॥ क्षेमं यः प्रचुरीकुर्यात् क्षोणीमभ्युद्वहं नयं। क्रोडाकृतिरभूत्तस्य क्रीडापल्वलमंबुधिः ॥ ३ ॥ अस्ति क्षीरार्णवोद्भूतमपांपुष्पमनुत्तमम्। अम्लानं यदनिर्माल्यं आधत्ते शिरसीश्वरः ॥ ४ ॥ यदामोदनिधेस्तस्य संताने यदुसंज्ञिके। अभूदाश्चर्यमाधुर्यं वसुधायास्तपः फलम् ॥ ५ ॥ संगमो नाम राजाभूत् सारभूत तदन्वये। रेजे यस्य यशःसिंधोः सारिणी वसुधापगा ॥ ६ ॥ सर्वरत्ननिधेस्तस्य सम्यगासीत्तनूभुवां। मध्ये बुक्कमहीपालो मणीनामिवकौस्तुभः ॥ ७ ॥ तस्य गौरांबिकाजानेस्तनयोभूद्गुणोन्नतः। हारगौरयशःपूरहारी हरिहरेश्वरः ॥ ८ ॥ यष्षोडशमहादानयशसादिग्विहारिणां। भूयसामभवन्नालं भुवनानि चतुर्दश ॥ ९ ॥ विक्रमे विक्रमादित्यं भोगे भोगिमिवापरं। राजराजं वितरणे राजानं यं

---

* ಈ ವಾಕ್ಯ ಕನ್ನಡಕ್ಷರದಲ್ಲಿದೆ.

* ಈ ಶಾಸನವು ಎಪಿಗ್ರಾಫಿಕಾ ಕರ್ನಾಟಿಕದ ೭ನೇ ವ್ಯಾಲ್ಯುಂನಲ್ಲಿ ಶಿವಮೊಗ್ಗ ತಾಲ್ಲೂಕಿನ ೮೦ನೆಯ ಶಾಸನವಾಗಿ ಪ್ರಕಟವಾಗಿದೆ.

* ಈ ಶಾಸನದ ಹಿಂಭಾಗದಲ್ಲಿ ಶ್ರೀಯಂತ್ರಾಕೃತಿ ಇದೆ.

प्रचक्षते ॥ १० ॥ अभंगमङ्गकालिङ्गवङ्गाद्याश्चामरादिभिः । राजानो यं हि सेवंते राजचिन्हैः स्वयंधृतैः ॥ ११ ॥ राजाधिराजस्तेजस्वी यो राजपरमेश्वरः । भाषातिलङ्घिभूपालभुजङ्गविरुदोन्नतः । १२ ॥ मूरुरायरगण्डाख्यः पररायभयंकरः । हिंदूरायसुरत्राणो बंदिवर्गेण वर्ण्यते ॥ १३ ॥ लब्धाशीर्विदुषां संघैः श्लाघ्यो हरिहराभिधः । महांशकाब्दके पंचत्रिंशत्तु शशिना युते ॥ १४ ॥ रुधिरोद्गार्यब्दके तु फाल्गुने मासि शुक्लके । पक्षे दशम्यां च तिथौ तुंगभद्रानदीतटे ॥ १५ ॥ श्रीविरूपाक्षनिकटे सर्वलोकमनोहरे । आरङ्गराज्यमध्यस्थगाजनूराख्यसीमनि । १६ ॥ सोपग्रामैश्चतुर्भिश्च गङ्गमंडलमञ्जसा । श्रृंगगीशारदाम्बाया उत्सवाय दिनेदिने ॥ १७ ॥ नवरात्रेश्च पूजार्थं वीरो हरिहराभिधः । समर्पयामास मुदा भूयादाचन्द्रतारकं ॥ १८ ॥ ग्रामस्यास्य चतुस्सीमामध्ये शुभकरस्य च । निधाननिक्षेपमुखं प्रभागोस्वीकारयोग्या बहु । सस्यपूर्णा आचन्द्रतारार्कमदादमुख्यः श्रीमान्मुदा हरिहरराजभूपः दानपालनयोर्मध्ये दानाच्छ्रेयोऽनुपालनं । दानात स्वर्गमवाप्नोति पालनादच्युतं पदम् ॥

—ಶ್ರೀ ವಿರೂಪಾಕ್ಷ

---

## 4. ತಾಮ್ರಶಾಸನ—ಭಾವ. ಫಾಲ್ಗುಣ ಶು. ೧೦, ಶಾ. ಶ. 1316. ಕ್ರಿ. ಶ. 1394

ಶ್ರೀ ಗಣಾಧಿಪತಯೇ ನಮಃ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥ ಜಯತ್ಯನಾದಿನಿಧನೋ ಶ್ರೀಮಾನ್ ಸ್ವಚ್ಛಂದ ಸೂಕರಾಯಸ್ಯದ್ದಂಷ್ಟ್ರಾಮೃಣಾಳೇನ ದದ್ರೇಯಾತವ ಪಂಕಜೆ । ವಿದ್ಯಾತೀರ್ಥೇಶ ಪಾದಾಬ್ಜ ಪೂಜನಾದ್ ಬುಕ್ಕ ಭೂಪತೇಃ ಆಸೀದ್ಧರಿಹರೋ ರಾಜಾ ಕ್ಷೀರಾಬ್ಧೇರಿವ ಚಂದ್ರಮಾ । ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನಶಖ ವರುಷ ೧೩೧೬ನೆ ವರ್ತಮಾನಕ್ಕೆ ಸಲುವ ಭಾವಸಂವತ್ಸರದ ಫಾಲ್ಗುಣ ಶು. ೧೦ ಯು ಗುರುವಾರದಲ್ಲು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ವೈದಿಕಮಾರ್ಗ ಪ್ರತಿಷ್ಠಾಪಕ ವೀರಪ್ರತಾಪ ಹರಿಹರ ಮಹಾರಾಯರು ಭಾರದ್ವಾಜ ಗೋತ್ರದ ನಾರಾಯಣ ವಾಜಪೇಯಯಾಜಿಗಳಿಗೆ ನರ ಹರಿ ಸೋಮಯಾಜಿಗಳಿಗೂ ವಾಸಿಷ್ಠಗೋತ್ರದ ಪಾಂಡುರಂಗ ದೀಕ್ಷಿತರಿಗೆ ಸಹ ಕೊಟ್ಟ ದಾನಶಾಸನದ ಕ್ರಮವೆಂತೆಂದರೆ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾದ್ಯಷ್ಟಾಂಗ ಯೋಗ ನಿರತರಾದ ಶ್ರೀ ವಿದ್ಯಾರಣ್ಯ ಶ್ರೀಪಾದಂಗಳ ಸನ್ನಿಧಿಯಲ್ಲು ನಮ್ಮ ಹೆಸರಲು ಚತುರ್ವೇದ ಭಾಷ್ಯಗಳ ಪ್ರವರ್ತಿಸುವ ಸಂಬಂಧ ಭಾರದ್ವಾಜಗೋತ್ರದ ನಾರಾಯಣ ವಾಜಪೇಯಯಾಜಿಗಳಿಗೆ ಗ ೬೯ ಭಾರದ್ವಾಜ ಗೋತ್ರದ ನರಸಿಂಹ ಸೋಮಯಾಜಿಗಳಿಗೆ ಗ ೫೯ ಹ ೧ ವಾಶಿಷ್ಟಗೋತ್ರದ ಪಾಂಡುರಂಗ ದೀಕ್ಷಿತರಿಗೆ ಗ ೫೯ ಹ ೧ ಅಂತು ಜ ೩ಕ್ಕೆ ಗ ೧೮೭ ೨ ಬಾರಕೂರು ರಾಜ್ಯದ ನಾಲ್ವತ್ತುನಾಡ ವಳಗಣ ನಾಯಕರಪಾಲಿಗೆ ೧ ವ ಭತ್ತವ ಇಕ್ಕಿ ೩೨೦ ರ ಕಾಟಿ ಗ ೧೦೦ ಗಡಿಯ ಕೇರಿ ೧ರ ವಟ್ಟು ೭೯ಜಕ್ಕೆ ಕಾಟಿ ಗ ೨೬೫ ಮೆಲ್ಲಾಯದಿಂದ ಕಾಟಿ ಗ ೧ ೩ ಅಂತು ಕಾಟಿ ಗ ೪೭೮ ಕೆ ಈ ಹರವರಿಯರಡಂನ್ನು ಶ್ರೀ ವಿದ್ಯಾರಣ್ಯಪುರ ಅಗ್ರಹಾರದಿಂದ ೪೦೦ ಅಗ್ರಹಾರ ಮಾಡ್ಸಿ ಆ ಹರವರಿ ಗ್ರಾಮಕ್ಕೆ ಚತುಃ ಶೀಮಾ ವಿವರ ಮಾಡಲು ಕೊರ್‍ನ ಪಾಲಲ್ಲಿ ಕೋಟೇಶ್ವರದೇವರ ದೇವಸ್ವದಿಂದ ಪಡವಲ್ಲು ಮೂರು ಮಂದರ ಅಗಳಿಸಿಂದ ಮೂಡಲ್ಲು ತೆಂಕಲ್ಲು ವಯಿಕಾರತೂರ ಚಟಮಗುತ್ತಿಯವರಂ ಬಡಗಲ್ಲು ಹರಿವ ಹೊಳೆಯಿಂದಂ ತೆಂಕಲ್ಲುಯಿಂತೀ ಚತುಃ ಶೀಮೆವಳಗುಳ್ಳ ನಿಧಿಜಲಪಾಷಾಣ ಅಕ್ಷಿಣಿ ಆಗಾಮಿ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜಃ ಸ್ವಾಮ್ಯವನ್ನು ಚಿಂನಸಹವಾಗಿ ಪಂಪಾಕ್ಷೇತ್ರದ ಶ್ರೀವಿರೂಪಾಕ್ಷದೇವರ ಸನ್ನಧಿಯಲ್ಲಿ ಸಹಿರಣ್ಯೋದಕ ದಾನಧಾರಾ ಪೂರ್ವಕವಾಗಿ ಸರ್ವಾನುಗ್ನವಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಯೀ ಮೂವರ್‍ರು ವಿದ್ವಾಂಸರಿಗೆ ಕೊಟ್ಟೆವಾಗಿ ಈ ಹರವರಿಕ್ಷೇತ್ರ ಐದು ಬಹ ನಾಲ್ಕು ಜಂನ ಕಂಚುಕಾರ್ತಿ ಅಮ್ಮನವರ ಆಳು ಬಾಳು ಹೊಯೆಂದು ಕಟುಪಡಿದ ಮಾಲೆ ಕುಂಭ ಅನಾಧಿಯಾಗಿ ನಡದು ಬಹ

ಕಪಿಲು ಕೆತ್ರೆ ದಾರಿ ಮಾನು ಮರಡುವರು ಯೇನುವುಳ್ಳದ್ದನ್ನು ಸ್ವಾಮ್ಯವನ್ನು ಗಂಡಿಗೆ ಮೂಲ ಹೆಣ್ಣಿಗೆ ಕಂನ್ಯಾದಾನ ವಾಗಿ ಸುಖದಿಂ ಬೋಗಿಸುವಂತಾಗಿ ನಾರಾಯಣ ವಾಜಪೇಯಿ ಯಾಜಿಗಳು ನರಹರಿ ಸೋಮಯಾಜಿಗಳಿಗೂ ಪಾಂಡುರಂಗ ದೀಕ್ಷಿತರಿಗೆ ಬರಸಿಕೊಟ್ಟ ತಾಮ್ರ ಶಾಸನ ಸ್ವದತ್ತಂಪರದತ್ತಂವಾಯೋಹರೇತ ವಸುಂಧರಾಷಷ್ಟಿವರು ಶಸಹಸ್ರಾಣಿ ವಿಸ್ಟಾಯಾಂ ಜಾಯತೇ ಕೃಮಿಃ ॥ ಶ್ರೀ ವಿರೂಪಾಕ್ಷ.

---

೫. ತಾಮ್ರಶಾಸನ (ನಕಲು)—ಧಾತು, ಮಾಘ, ಶು. ೭, ಶಾ. ಶ. ೧೩೧೮, ಕ್ರಿ. ಶ. 1396.

ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯಶಂಭವೇ। ಅವ್ಯಾದವ್ಯಾಹತೈಶ್ವರ್ಯಕಾರಣಂ ವಾರಣಾನನಃ। ವರದಸ್ತೀವ್ರತಿಮಿರಮಿಹಿರೋಹರನಂದನಃ। ಶ್ರೀಮಾನಾದಿ ವರಾಹೋ ಯಃ ಶ್ರಿಯಂದಿಶತು ಭೂಯಸೀಂ। ಗಾಢಮಾಲಿಂಗಿತಾ ಯೇನ ಮೇದಿನೀ ಮೊದತೇ ಸದಾ। ಅಸ್ತಿ ಕೌಸ್ತುಭಕಲ್ಪದ್ರುಕಾಮಧೇನು ಸಹೋದರಃ ರಮಾನುಜಸ್ಸುಧಾನಾಥಃ ಕ್ಷೀರಸಾಗರಸಂಭವಃ। ಉದಭೂದನ್ವಯೇ ತಸ್ಯ ಯದುರ್ನಾಮಮಹೀಪತಿಃ। ಪಾವಿತಂ ಯತ್ಕುಲೇಯೇನ ವಾಸುದೇವೇನ ಭೂತಳಂ। ಅಭೂತ್ತಸ್ಯ ಕುಲೇ ಶ್ರೀಮಾನ್ ಅಭಂಗುರಗುಣೋದಯಃ। ಅಪಾಸ್ತ ದುರಿತೌಘಶ್ಚ ಸಂಗಮೋನಾಮ ಭೂಪತಿಃ ಆಸನ್ಹರಿಹರಃ ಕಂಪರಾಜೋ ಬುಕ್ಕ ಮಹೀಪತಿಃ। ಮಾರಪೋಮುದ್ದಪಶ್ಚೇತಿ ಕುಮಾರಾಸ್ತಸ್ಯ ಭೂಪತೇಃ ಪಂಚಾನಾಮಭವ ತ್ತೇಷಾಂ ಪ್ರಖ್ಯಾತೋ ಬುಕ್ಕ ಭೂಪತಿಃ। ಪ್ರಚಂಡವಿಕ್ರಮೋ ಮಧ್ಯೇ ಪಾಂಡವಾನಾಮಿವಾರ್ಜುನಃ! ದಿಕ್ಕರೀಂದ್ರ ಧುರಾಧಾರದಕ್ಷಿಣಸ್ಕಂಧಬಂಧುರಃ। ಬುಕ್ಕರಾಜಸ್ತತಃಶ್ರೀಮಾ಼ ಆಸೀದಾಹವಕರ್ಕಶಃ। ಯಸ್ಯಾಗ್ರೇ ಯುದ್ಧರಂಗೇ ವಿಧದತಿ ಪರಿತಸ್ತಾಂಡವಂ ಮಂಡಲಾಗ್ರೇ ಚಕ್ರೇ ಶುಷ್ಕಾಸ್ತುರುಷ್ಕಾಃ ವಿದದತಿ ಪರಿತಃ ಕೊಂಕಣಾಸ್ಸಂಕಟಾರ್ತಾಃ ಆಂಧ್ರಾರಂಧ್ರಾಣಿಧಾವಂತ್ಯಧತಿವಿಾರಗಿರೇಃ ಗುರ್ಝರಾಜರ್ಝರಾಂಗಾಃ ಕಾಂಭೋಜಾಃಚ್ಛಿನ್ನಧೈರ್ಯಾಃ ಸಪದಿಸಮ ಭವನ್ ಪ್ರಾಪ್ತ ಭಂಗಾಃ ಕಳಿಂಗಾಃ। ರಾಜಾಧಿರಾಜಸ್ತೇಜಸ್ವೀ ಯೋ ರಾಜಪರಮೇಶ್ವರಃ। ಮೂರುರಾಯರ ಗಂಡಾಖ್ಯಃ ಪರರಾಯಭಯಂಕರಃ। ಹಿಂದೂರಾಯಸುರತ್ರಾಣೋ ದುಷ್ಟಶಾರ್ದೂಲ ಮರ್ದನಃ। ತಸ್ಯ ಗೌರಾಂ ಬಿಕಾನಾಮ ಮಹಿಷೀ ಸಮಜಾಯತ। ಮಾನನೀಯಗುಣಾಮಾಯಾವಲ್ಲಭಸ್ಯ ಯಥಾ ರಮಾ। ಕಪರ್ದಿನೋಯಥಾ ಗೌರೀಶಚೀವನಮುಚಿದ್ವಿಷಃ। ಪಿತಾಮಹಸ್ಯ ಸಾವಿತ್ರೀ ಛಾಯಾ ದಿನಮಣೇರಿವ। ವಿಲಾಸವಿಭ್ರಮೋಲ್ಲಾ ಸತಿರಸ್ಕೃತ ತಿಲೋತ್ತಮಾ। ಅನಸೂಯಾಪಿ ಸಾಸೂಯಾ ಯತ್ಪಾತಿವ್ರತ್ಯ ಸಂಪದಃ। ಅಹೀನಭೋಗ ಸಂಪತ್ತಿರಸೌ ರಾಜಶಿಖಾಮಣಿಃ। ತಸ್ಯಾಂ ಹರಿಹರಂ ಗೌರ್ಯಾಂ ಕುಮಾರಮುದಪಾದಯತ್। ಶಿಷ್ಟಾ ಸಂರಕ್ಷಿತಾ ಯೇನ ದುಷ್ಟಾನಾಮಪಿ ನಿಗ್ರಹಃ! ಲಬ್ಧಾರ್ಥೈರ್ವಿದುಷಾಂ ಸಂಘೈಃ ಶ್ಲಾಘ್ಯೋ ಹರಿಹರಾತ್ಮನಾ। ತಸ್ಮಿ಼ ಷೋಡಶ ದಾನಾನಾಂ ಯಶಸಾ ಪರಿಶೋಭಿತೆ। ದಾನಾಂಬುಧಾರಯಾತಸ್ಯ ವರ್ಧತೇ ಧರ್ಮಪಾದಪಃ। ಶಕಾಶ್ಚವಸುಚಂದ್ರಾಗ್ನಿ ವಿಧುನಾಯುತವತ್ಸರೇ। ಧಾತುಮಾಘೇಸಿತೇಪಕ್ಷೇ ಸಪ್ತಮ್ಯಾಂಚ ಮಹಾತಿಥೌ। ತುಂಗಭದ್ರಾ ನದೀತೀರೇ ಶ್ರೀ ವಿರೂಪಾಕ್ಷಸನ್ನಿಧೌ। ದದೌ ಸ ಬಸವಾಪುರ್ಯಾಂ ಸ್ಥಿರಂಸೀಮ್ನಿಸುಶೋಭಿತಂ। ಶೃಂಗೇರೀ ಶಾರದಾಪ್ರೀತ್ಯೈ ದಂದೂರಗ್ರಾಮಮುತ್ತಮಂ। ಯೇತತ್ಕಾರ್ಯವಿಚಾರಸ್ತು ಸಹಿತೋ ವಿಸ್ತರೇಣ ವೈ। ಸರ್ವೇಷಾಂ ಸುಖಬೋಧಾಯ ಲಿಖ್ಯತೇ ಭಾಷಯಾ। ಶ್ರೀಮತ್ಪರಮಹಂಸಾದಿ ದೊಡ್ಡ ಬಿರುದಾವಳಿ ಬರೆದು ಶೃಂಗೇರಿ ಶ್ರೀ ವಿದ್ಯಾಶಂಕರ ಪಾದಪದ್ಮಾರಾಧಕ ಶ್ರೀ ಚಂದ್ರಶೇಖರಭಾರತಿಸ್ವಾಮಿಯವರಿಗೆ ಶ್ರೀಶಂಕರಾದಿ ಗುರುಪರಂಪರೆಯಾಗಿ ಬಂದಂಥಾ ಶ್ರೀ ಶಾರದಾಂಬೆಯ ಮಹನ್ಮಿ ಉತ್ಸವಾರ್ಥವಾಗಿ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೀರದೇವ ಹರಿಹರಮಹಾರಾಯರು ಕೊಟ್ಟ ಭೂದಾನಶಾಸನ। ಬಸವಾಪಟ್ಟಣದ ರಾಜ್ಯದಲ್ಲಿ ಯರನಾಡಶೀಮೆ ಯಲ್ಲಿ ಶಿವನೇ ಹೋಬಳಿಯಲ್ಲಿದ್ದ ದಂದೂರು ಗ್ರಾಮವನ್ನು ರಥಸಪ್ತಮೀ ಪುಣ್ಯಕಾಲದಲ್ಲಿ ಸಹಿರಣ್ಯೋದಕದಾನ ಧಾರಾಪೂರ್ವಕವಾಗಿ ಸಮರ್ಪಿಸಿದೆವು। ಈ ಗ್ರಾಮದ ಸರ್ವೋತ್ಪತ್ತಿಯನ್ನು ನಿಧಿನಿಕ್ಷೇಪಾದ್ಯಷ್ಟಭೋಗವನ್ನು ಆಚಂದ್ರಾರ್ಕಸ್ಥಾಯಿಯಾಗಿ ಶ್ರೀ ಶಾರದಾಮ್ಮನವರ ಸೇವೆಗೆ ಕೊಟ್ಟ ಭೂದಾನ ಶಾಸನ। ಆದಿತ್ಯ ಚಂದ್ರಾ ॥ ೧ ॥ ದಾನಪಾಲನಯೋರ್ಮಧ್ಯೇ ॥ ೨ ॥ ಸ್ವದತ್ತಾ ದ್ವಿಗುಣಂ ಪುಣ್ಯಂ ॥ ೩ ॥ ಸ್ವದತ್ತಾಂ ಪರದತ್ತಾಂ ವಾ ॥ ೪ ॥

ಏಕೈವ ಭಗಿನೀಲೋಕೇ ॥ ೫॥ ಸಾಮಾನ್ಯೋಯಂ ಧರ್ಮಸೇತುನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ। ಸರ್ವಾನೇತಾರ್ಭಾವಿನಃ ಪಾರ್ಥಿವೇಂದ್ರಃ ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥ ಶ್ರೀ ವಿರೂಪಾಕ್ಷ ! ತಾಂಬ್ರದ ಹಲಗೆ*

———

೬. ತಾಮ್ರಶಾಸನ.—ವಿಕ್ರಮ ಅಶ್ವಯುಜ ಶು. ೧೦ ಶಾ. ಶ. ೧೩೨೪, ಕ್ರಿ. ಶ. 1402.

श्री

नमस्तुंग शिरश्चुंबि चंद्रचामरचारवे त्रैलोक्यनगरारंभ मूलस्तंभायशंभवे॥ श्रीमत्परमहंस-परिव्राजिकाचार्यपदवाक्यप्रमाणपारावारपारीणयमनियमासन प्राणायामप्रत्याहार ध्यानधारणसमाध्य-ष्टाङ्गयोगानुष्टाननिष्टतपःश्चक्रवर्त्यनाद्यविछिन्नगुरुपरंपराप्रातषड्दर्शनस्थापनाचार्यव्याख्यानसिंहासनाधी-श्वर सकलवेदार्थप्रकाशक सांख्यत्रयप्रतिपालक सकलनिगमागमसारहृदय वैदिकमार्गप्रवर्तक सर्व-तंत्रस्वतंत्र आदिराजधानिविद्यानगरमहाराजधानीकर्नाटकसिंहासनप्रतिष्ठापनाचार्य श्रीमहाराजाधिराज गुरुभूमंडलाचार्य तुंगभद्रातीरवासऋष्यश्रृंगपुरवराधीश्वर श्रींगेरीश्रीनरसिंहभारतीस्वामिनां करकमल संजातचंद्रशेखरभारतीचरणांबुजानां विद्याशंकरदेवस्य गीर्वाण्याश्चंद्रमौलिनः नवरात्र्युत्सवं कर्तुमिछुः-स्याद्रंगभूपतिः महीशुराभिधेदेशे सुखसवासनाश्चयुते वेलापुरस्य सीमायां स्वर्णदिवल्लिसंज्ञिते। वेदा-वत्यावहर्याश्च अध्येक्रोशांतरेस्थितं॥ कूडलूरुंपुरस्कृत्वापुरासंगमसंज्ञितां स्वस्ति श्रीविजयोपेताभ्युदये शालिवाहने चतुरक्ष्यग्निचन्द्राख्यसंख्ये विक्रमसंज्ञकेवत्सरेचाश्विजे मासि दशम्यां सौम्यवासरे। नप्ता-नृसिंहभूपस्य पुत्रस्तिमॆलभूभुजः॥ श्रीमान् रंगमहीपालः गुरुसेवासमुत्सुकः आत्रेयगोत्रसंभूतः आश्व-लायनसूत्रवान्॥ ग्राममवमदासीरत्रिधावाचासमुच्चरन्॥ शंभुग्रामं पूर्वदिशि मुंडघटं तु दक्षिणे गींपुरी पश्चिमे भागे शट्टिकेरे उदग्दिशि एवं सीमाविभागेन सहिते संगमे पुरे अक्षीणागामीतत्पूर्वसिद्ध-साध्याष्टसाधनैः। सहितं संगमपुरं दत्वा श्रीरंगभूपतिः शिलाशासनमालिख्य स्थाप्य तत्रैवसुस्थिरं भाविनां पार्थिवानां च ज्ञापनार्थं सुनिर्मितं। लिखाप्यर्ताम्रपत्रे तु गुरुपादार्पणं मुदा अकरोद्रंगभूपालः स्वगोत्रस्याभिवृद्धये॥ प्रार्थयन्भाविनो भूपानित्युवाच पुनः पुनः॥ एकैवभगिनीलोके सर्वेषां वो महीभुजां। न भोज्या न करग्राह्या द्विजदेवार्पिता धरा॥ स्वदत्ताद्विगुणं पुण्यं परदत्तानुपालनं। परदत्तापहारेण स्वदत्तं निष्फलं भवेत्॥ इन्द्रः पृच्छति चांडाली किमिदं पच्यते त्वया श्वमांसं सुरया-सिक्तं कपालेन चिताग्निना। देवब्राह्मणवित्तानि बलादपहरंति ये तेषां पादरजोभीत्या चर्मणा पिहितं मया॥ श्री॥ ॥ श्री॥ ॥ श्री॥ ಶ್ರೀರಂಗ.

———

೭. ತಾಮ್ರಶಾಸನ—ವಿಭವ ಮಾಘ ಕೃ. ೧೪, ಶಾ. ಶ. ೧೪೩೦, ಕ್ರಿ. ಶ. 1508.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೩೦ನೇಯ ವಿಭವ ಸಂವತ್ಸರದ ಮಾಘ ಬಹುಳ ೧೪ ಲು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯ ವಿಚ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರುಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮಸಾರಹೃದಯ ವೈದಿಕಮಾರ್ಗಪ್ರವರ್ತಕ ಸರ್ವತಂತ್ರ

* ಇದು ತಾಮ್ರಶಾಸನದ ನಕಲಾಗಿದ್ದು ಅಸಲು ಸಿಗದಿದ್ದುದರಿಂದ ಅದನ್ನೆ ಇದ್ದುದಿದ್ದಂತೆ ಮುದ್ರಿಸಿರುತ್ತೆ.

ಸ್ವತಂತ್ರಾದಿ ರಾಜಧಾನಿ. ವಿದ್ಯಾನಗರ ಮಹಾರಾಜಧಾನಿ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ರುಷ್ಯಶೃಂಗ ಪುರವರಾಧೀಶ್ವರ ಶ್ರೀಂಗೇರೀ ಶ್ರೀ ವಿದ್ಯಾಶಂಕರಪಾದಪದ್ಮಾರಾಧಕ ಶ್ರೀಂಗೇರೀ ಶ್ರೀ ನರಸಿಂಹ ಭಾರತೀ ಸ್ವಾಮಿಗಳಯ್ಯನವರ ಕರ ಕಮಲ ಸಂಜಾತರಾದ ಶ್ರೀಂಗೇರೀ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರಿಗೆ ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ಕೃಷ್ಣರಾಯ ಮಹಾರಾಯರು ಬರೆಶಿ ಕೊಟ್ಟ ಭೂದಾನ ಧರ್ಮಶಾಸನ ಕ್ರಮ ವೆಂತೆಂದರೇ ರಾಯದುರ್ಗದ ವೆಂಠೆದಾ ದೇವಸಮುದ್ರದಾ ಸೀಮೆ ವಳಗಣ ವೆಂಕಟಾಪುರಗ್ರಾಮ ೧. ಉರತಹಾಳು ಗ್ರಾಮ ೧. ಉಭಯ ಯರಡು ಗ್ರಾಮಗಳನ್ನು ಶಿವರಾತ್ರೀ ಪರ್ವಣೀ ಪುಣ್ಯಕಾಲದಲ್ಲಿ ಶ್ರೀ ವಿದ್ಯಾಶಂಕರಾರ್ಪಿತ ವಾಗಿ ಸಮರ್ಪಿಸಿಯಿಥೇವೆ ಯೀ ಗ್ರಾಮಗಳ ಚತುಸೀಮೆ ವಳಗಣ ನಿಧಿನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಅಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜೋಪಾರ್ಜನೆಯನ್ನು ನಿಮ್ಮ ಶಿಷ್ಯ ಪಾರಂಪರ್ಯವಾಗಿ ಅನುಭವಿಸಿ ಕೊಂಡು ಬರಬೇಕೆಂದು ಬರಶಿಕೊಟ್ಟ ಭೂದಾನ ಧರ್ಮಶಾಸನಾ ॥ ಶ್ಲೋಕಾ ॥ ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಶ್ಚ ವೃತ್ತಂ ॥ ೧ ॥ ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತು ॥ ಶ್ರೀ ವಿರೂಪಾಕ್ಷ ॥

---

# ಎರಡನೆಯ ಭಾಗ—ಮಠಾಧೀಶ್ವರರು ಮುಂತಾದವರ ಲೇಖನಗಳು.

## A. ಶೃಂಗಗಿರಿಯಲ್ಲಿರುವ ಮಠ.

### ೧. ಲೇಖನ.—ವಿಷುಸಂವತ್ಸರ ಮಾಘ ಶು. ೨, ಶಾ. ಶ. ೧೫೦೪, ಕ್ರಿ. ಶ. 1582.

श्री विद्या
शङ्कर

*ಶ್ರೀಮತ್ಪರಮಹಂಸ ಪರಿವ್ರಾಜಕಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ನಿಗಮಾಗಮ ಸಾರಹೃದಯ ಸಾಂಖ್ಯತ್ರಯ ಪ್ರತಿಪಾಲಕ ವೈದಿಕಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿರಾಜಧಾನಿ ವಿದ್ಯಾನಗರ ಮಹಾರಾಜಧಾನಿ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ಋಷ್ಯಶೃಂಗ ಪುರವರಾಧೀಶ್ವರ ತುಂಗಭದ್ರಾ ತೀರವಾಸ ಶ್ರೀಮದ್ವಿದ್ಯಾಶಂಕರ ಪಾದಪದ್ಮಾರಾಧಕ ಶ್ರೀ ರಾಮಚಂದ್ರ ಭಾರತೀ ಸ್ವಾಮಿ ಗುರುಕರಕಮಲ ಸಂಜಾತ ಶ್ರಿಂಗೇರೀ ಶ್ರೀ ·ನೃಸಿಂಹ ಭಾರತೀ ಸ್ವಾಮಿನಾಂ ಚರಣ ಸರೋಜೇಷು—

ತಮ್ಮ ಪ್ರಿಯಶಿಷ್ಯನಾದ ಶ್ರಿಂಗೇರೀ ಶ್ರೀ ಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ರಾಮಚಂದ್ರ ಭಾರತಿಯು ಭಾಷಾಪೂರ್ವಕ ಬರಶಿ ಒಪ್ಪಿಶಿದ ನಿಬಂಧನೇ ಬಿನ್ನವತ್ತಲೆ ಆದಾಗಿ ಶ್ರೀಕರ್ತರೂ ಮಹಾಯಾತ್ರೆಗೆ ಚಿತ್ತೈಸಿದ ವ್ಯಾಳ್ಯದಲ್ಲಿ ಸ್ಥಳದ ಮಹಾಜನಗಳು ಕೃತ್ರಿಮತನದಿಂದಾ ನಮಗೆ ಆಶ್ರಮಾ ಕೊಡಿಶಿ ತಾವೂ ಸ್ಥಳಕ್ಕೆ ಬರಬಾರದು ಎಂತ ದುರಾಲೋಚನೀ ಮಾಡಿ ಸ್ಥಳ ಬಂದು ಕಟ್ಟುಮಾಡಿಕೊಂಡು ಇದ್ದಲ್ಲಿ ಯಾತ್ರೀ ತೀರ್ಥಾ ಮಾಡಿಕೊಂಡು ತಾವು ಪುನಃ ಶ್ರಿಂಗೇರಿಗೆ ಚಿತ್ತೈಸಬೇಕೆಂದು ಸಕಲ ದೇಶಗಳೂ ಸಂಚಾರ ಮಾಡಿಕೊಳ್ಳುತ್ತಾ ತುಂಗಭದ್ರಾ ಸಂಗಮ ಕೂಡ್ಲೀ ಕ್ಷೇತ್ರಕ್ಕೆ ದಿಗ್ವಿಜಯ ಮಾಡಿದ ತರುವಾಯಾ ಸ್ಥಳದ ವಿದ್ಯಮಾನಗಳ್ಯಾವತ್ತೂ ದಿವ್ಯ ಚಿತ್ತಕ್ಕೆ ಶ್ರುತವಾಗಿ ನಮಗೆ ಕೃತ್ರಿಮತನದಿಂದಾ ಆಶ್ರಮ ಕೊಡಿಶಿದ ಮಹಾಜನಗಳೂ ನಮ್ಮನ್ನ ಸಹಾ ಈ ಕೂಡ್ಲಿ ಕ್ಷೇತ್ರಕ್ಕೆ ಕರಶಿಕೊಂಡು ನಿಗ್ರಹಪೂರ್ವಕ ಆಜ್ಞಾ ಮಾಡಿಶಿದ ಕಾರಣಾ ನಾವು ಶ್ರೀ ದಿವ್ಯ ಚಿತ್ತದಲ್ಲಿ ಅಪ್ಪಣೆಯಾದ ಪ್ರಕಾರ ನಡೆಕೊಳ್ಳುವದಕ್ಕೆ ಸಿದ್ಧವಾಗಿ ಇದ್ದೇನೆಂದು ವಿನಯಪೂರ್ವಕ ಬಿನ್ನಹ ಮಾಡಿಕೊಂಡಿದ್ದರಿಂದಾ ಪರಮ ಕಾರುಣ್ಯ ಹುಟ್ಟಿ ಅನುಗ್ರಹಪೂರ್ವಕ ಅಪ್ಪಣೆ ದಯಪಾಲಿಶಿ ಸ್ಥಳದಲ್ಲಿ ಶ್ರೀ ಶಾರದಾಂಬನವರ ಪೂಜಾ ಮುಂತಾದ ವಿನಿಯೋಗವನ್ನು ನಿಬಂಧನೆ ಪ್ರಕಾರ ನಡಿಶಿಕೊಂಡು ಆಜ್ಞಾನುಸಾರ ನಡಕೊಂಬುವಂತೆ ಅಪ್ಪಣೆ ಆಯಿತಾದ ಕಾರಣಾ ಅದೇ ಮೇರೆಗೆ ಶ್ರೀ ಅಮ್ಮನವರ ಪೂಜಾ ಮಾಡಿಕೊಂಡು ಕಾಲಂಪ್ರತಿಯಲ್ಲೂ ಹುಟ್ಟಿ ಮುಟ್ಟಿದ ಆದಾಯ ವೆಚ್ಚದ ಲೆಖ್ಖಾ ಮಿಗತೀ ಆದ ದ್ರವ್ಯ ಸಹಾ ಶ್ರೀ ಸನ್ನಿಧಾನಕ್ಕೆ ಒಪ್ಪಿಶಿಕೊಳ್ಳುತ್ತಾ ಬಂದೆನು. ಮುಂದೆ ತಾವು ಸಂಸ್ಥಾನಕ್ಕೆ ನೇಮಿಶಿದವರಿಗೂ ತಮ್ಮ ಸ್ಥಾನಾಪನ್ನರಾಗಿ ಕರಕಮಲ ಸಂಜಾತರಾಗಿ ನೇಮಿಸಲ್ಪಟ್ಟವರಿಗೂ ಇದೇ ಪ್ರಕಾರ ಆದಾಯ ವೆಚ್ಚಾ ಮಿಗತೀ ಹಣಾ ಸಹಾ ಒಪ್ಪಿಶಿಕೊಂಡು ಸಂಚಾರ ಆಚಾರ ವಿಚಾರ ಮೊದಲಾದ ಹೆಚ್ಚು

* ಈ ಲೇಖನ ಮತ್ತು ಇದರ ಮುಂದಿನ ಲೇಖನಗಳು ಬಾಲಬೋಧ (ಸಂಸ್ಕೃತ) ಲಿಪಿಯಲ್ಲಿ ಬರೆಯಲ್ಪಟ್ಟಿದ್ದರೂ ವಿಷಯವು ಕನ್ನಡ ಭಾಷೆಯಲ್ಲಿಯೇ ಬರೆಯಲ್ಪಟ್ಟಿರುವುದರಿಂದ ಕನ್ನಡಾಕ್ಷರಗಳಲ್ಲಿಯೇ ಮುದ್ರಿಸಿದೆ.

ಹವ್ಯಾಸಕ್ಕೆ ಹೋಗದೇ ಆಜ್ಞಾನುಸಾರ ನಡಕೊಳ್ಳತಕ್ಕವನು. ಇದಕ್ಕೆ ನಮ್ಮ ಪರಂಪರಾಗತದಲ್ಲಿ ಯಾರಾದರೂ ಅನ್ಯಥಾ ಮಾಡಿದಲ್ಲಿ ಶ್ರೀಗುರುಚರಣಕ್ಕೆ ಅನ್ಯಥಾ ಮಾಡಿದಹಾಗೆ ಎಂದು ನಮ್ಮ ಆತ್ಮಸಾಕ್ಷಿಯಿಂದ ಭಾಷಾಪೂರ್ವಕ ಬರಿಶಿ ವಪ್ಪಿಶಿದ ಬಿನ್ನವತ್ತಳೇ ವಿಷು ಸಂವತ್ಸರದ ಮಾಘ ಶುದ್ಧ ೭ಯಲ್ಲೂ **इति विज्ञप्तयः**

श्रीः

---

೯. ಲೇಖನ.—ಚಿತ್ರಭಾನು, ಶಾ. ಶ. ೧೫೦೫, ಕ್ರಿ. ಶ. 1583.

श्री विद्या शङ्कर

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣಾ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ತಪಶ್ಚಕ್ರವರ್ತ್ಯನಾದ್ಯ ವಿಚ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ನಿಗಮಾ ಗಮಸಾರಹೃದಯ ಸಾಂಖ್ಯತ್ರಯಿಾ ಪ್ರತಿಪಾಲಕ ವೈದಿಕಮಾರ್ಗಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ, ವಿದ್ಯಾನಗರ ಮಹಾರಾಜಧಾನೀ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ಋಷ್ಯಶೃಂಗಪುರವರಾಧೀಶ್ವರ ತುಂಗಭದ್ರಾ ತೀರವಾಸ ಶ್ರೀಮದ್ವಿದ್ಯಾಶಂಕರ ಪಾದಪದ್ಮಾ ರಾಧಕ ಶ್ರೀ ರಾಮಚಂದ್ರ ಭಾರತೀ ಸ್ವಾಮಿಾ ಗುರುಕರಕಮಲಸಂಜಾತ ಶ್ರಿಂಗೇರೀ ಶ್ರೀ ನೃಸಿಂಹ ಭಾರತೀ ಸ್ವಾಮಿನಾಂ ಚರಣ ಸರೋಜೇಷು

ತಮ್ಮ ಪ್ರಿಯಶಿಷ್ಯನಾದ ಶ್ರೀ ಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ರಾಮಚಂದ್ರ ಭಾರತಿಯು ತ್ರಿಕಾಲ ದಲ್ಲಿ ವಂದನಾಪೂರ್ವಕ ಮಾಡು* . . . . . . . . . . . . . . . . . . . . . . . . . . . . . . . . . . . . . . . . . . . . . . . . . . . ಆಜ್ಞಾನುಸಾರ ಶ್ರೀ ದೇವತಾಪೂಜಾ ಮುಂತಾದ ವಿನಿಯೋಗವನ್ನು ನಿಬಂಧನೆಯ ಪ್ರಕಾರ ನಡಿಶಿಕೊಂಡು ವೇದಾಂತ ಮುಂತಾದ ಸತ್ಕಾಲಕ್ಷೇಪವೇ ಮುಖ್ಯವಾಗಿ ಇದೇನೆ. ಸಾಂಪ್ರತ. ಸ್ಥಳದಲ್ಲಿ ಕಟ್ಟಳೇ ಪ್ರಕಾರ ನಡಯುವಂಥಾ ವಿನಿ ಯೋಗದ ಆದಾಯ ವೆಚ್ಚದ ಲೆಖ್ಖವನ್ನು ಕಾಲಂ ಪ್ರತಿಯಲ್ಲಿಯೂ ಸನ್ನಿಧಾನಕ್ಕೆ ವಪ್ಪಿಶಿಕೊಳ್ಳುತ್ತಾ ಬರುನಂತೆ ನಿಬಂಧನೆ ಮಾಡಿಸಿ ಆಜ್ಞಾಪಿಶಿರುವ ಮೇರೆಗೆ ಚಿತ್ರಭಾನು ಸಂವತ್ಸರದ ಆದಾಯ ವೆಚ್ಚದ ವಿವರದ ಲೆಖ್ಖ ಮಿಗತೀ ಆದ ಹಣಾ ೫೪೪ ॥ ೧ ॥।– ಐನೂರಾನಾಲ್ವತ್ತೆಂಟು ವರಹಾವೂ ಆರು ಹಣಾ ಮುಪಾಗೂ ಚೆಲೆಯನ್ನು ಶ್ಯಾನು ಭೋಗ ವೆಂಕಣ್ಣಾ ಊಳಿಗದ ಚನ್ನನ ಸಂಗಡಾ ಶ್ರೀ ಸನ್ನಿಧಾನಕ್ಕೆ ಕಳುಹಿಶಿ ಇಧೇನೆ. ದಿವ್ಯ ಚಿತ್ತದಲ್ಲಿ ಪರಾಂ ಬರಿಶಿ ಮುಂದೆ ನಡೆಯತಕ್ಕದ್ದಕ್ಕೆ ಅಪ್ಪಣೆ ಆದಲ್ಲಿ ಆಜ್ಞಾನುಸಾರ ಪ್ರವರ್ತಿಸುತ್ತಾ ಇದ್ದೇನೇ. ಇತಿ ವಿಜ್ಞಪ್ತಯಃ

श्री

---

*ಈ ಭಾಗ ಹುಳು ಹೊಡೆದಿದೆ.

*೧೦. ಲೇಖನ—ಸುಮಾರು ಶಾ. ಶ. ೧೬೦೮, ಕ್ರಿ. ಶ. 1686.

श्रीमच्छारदांबादि देवतोपासनार्थं श्रीमठ वर्तामहे

श्री आचार्य

श्री विद्या शङ्कर

श्रीमत्परमहंस परिव्राजकाचार्यवर्येत्याद्यनेक विरुदुमालाविशिष्ट श्रींगेरी शंकरभारती यतींद्रान्प्रति ॥

श्रीमत्परमहंस परिव्राजकाचार्यवर्याद्यनेक विरुदांकित श्रींगेरीं नरसिंहभारती यतींद्रकृत परस्परं नारायणस्मरण पूर्वक ॥

प्रेषितोयं पत्रदूतः सपदि मादणपंडितसंबंधिमोत्कूरमहादेवाभिधानेन संप्रसारितविज्ञप्तिपत्रिकया कौंडिभट्टमुखवचनेन च तत्रत्य सर्वविचारोऽवगतः। अनंतरं तु भाग्यनगरदेशे शंखेश्वरस्थः कश्चन वेषधारी नामग्रहणानर्हः स्वतुंदपूरणार्थं गत्वा तत्रत्यान्प्रति अहं कूडलीमठस्यश्रीभिरात्तसन्यासवानिति प्रलपतीतितत्रत्यैर्लेखनमकरोत् तस्य पौर्वापर्यं विचार्यमणे बह्वृचः द्वितीयाश्रमी गोसावीसंप्रदायस्थः एतादृशः कथं भगवत्पादसंप्रदायाधिकारी स्यात् तेषां संपदायस्तु द्राविडः दक्षिणाम्नायः भोगवारसंपदायः तुंगभद्रातीरवासः ब्रह्मचर्यानंतरं तुरीयाश्रमस्वीकारः यजुर्वेदमध्यगतमहावाक्यप्रपठनं च श्रुतिरपि ॥ ऋचां पाचीमहतीदिगुच्यते ॥ दक्षिणामाहुर्यजुषामपारां। अथर्वणामंगिरसां प्रतीचीत्यादि एतादृग्भगवत्पादीये पारंपर्यानर्हे सकाषायशाटीमात्रवेषधारिणः शिक्षा यथा स्यात्तथा प्रत्रिकां कौंडिभट्टस्य दातुमर्हथ अथवा तस्य विचारोपि लिखित्वा प्रेषणीयः तदनंतरं तत्रत्याभिप्रायमवलोक्य वयमेव तस्य निग्रहं कुर्म इति नामग्रहणानर्हप्रसंगलेखनमास्तां नाम उदंतविशेषस्तु कौंडिभट्टमुखवचनात् स्फुटीभविष्यतीत्यलमिति नारायणस्मरणं ಯಿತಿ ನಾರಾಯಣಸ್ಮರಣವು'

श्रीः

———

## B. ಮೈಸೂರಲ್ಲಿರುವ ಬ್ರಹ್ಮತಂತ್ರ ಪರಕಾಲ ಮಠ.

೧೧. ಲೇಖನ.—ಪ್ಲವಂಗ ನಿಜ ಜ್ಯೇಷ್ಠ ಶು. ೧೩, ಶಾ. ಶ. ೧೭೭೦, ಕ್ರಿ. ಶ. 1847.

ಶ್ರೀ ಹಯವದನ ಲಕ್ಷ್ಮೀನಾರಾಯಣೌ ವಿಜಯೇತೇ ಶ್ರೀ

ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣೌ

ಶ್ರೀಮತ್ತ್ರಯ್ಯಂತ ಸಿದ್ಧಾಂತ ಚರ್ಯಾ ಪರ್ಯಾಯ ವೇಧಸೇ।
ನರವೇಷಾಯ ಶೇಷಾಯ ಗುರವೇಕರವೈ ನಮಃ ।

---

* ಇದಕ್ಕೆ ಇಸವಿ ನಮೂದಿಲ್ಲ. ಇದಕ್ಕೆ ಸಂಬಂಧಪಟ್ಟಿರುವ ಮೋತ್ಕೂರಿ ಮಹಾದೇವಪ್ಪನ ಮತ್ತು ಸಂಕೇಶ್ವರ ಸ್ವಾಮಿಗಳ ಕಾಗದಗಳಲ್ಲೂ ಸಂವತ್ಸರ ನಮೂದಿಲ್ಲ. ಊಹೆಯಿಂದ ಮೇಲಿನ ವರ್ಷವನ್ನು ಹಾಕಿರುತ್ತೆ.

ಶ್ರೀಮತೇ ಸರ್ವತಂತ್ರೇಷು ಸ್ವತಂತ್ರಾಯ ಸುಧೀ ಮತೇ ।
ಕವಿ ತಾರ್ಕಿಕ ಸಿಂಹಾಯ ವೇದಾಂತ ಗುರವೇ ನಮಃ ॥

ಶ್ರೀ ಶಾಜ್ಞಾ ಮುಪಜೀವ್ಯ ವೈದಿಕಪಥತ್ರಾಣಾಯ ಯೇಜಾಭಿವನ್ನಾಚಾರ್ಯಾ ಯತಿರಾಜ ದೇಶಿಕ ಮಹಾ ಚಾರ್ಯಾದಯೋ ಭೂತಲೇ ॥ ತದ್ವೀಕ್ಷಾವಶಲಬ್ಧದಿವ್ಯ ಮಹಿಮಾ ಪ್ರೋದ್ಯಚ್ಚತುಸ್ಸಪ್ತತಿ ಶ್ರೀಮದ್ವೈಷ್ಣವ ದಿವ್ಯ ಪೀಠ ಸಹಿತಾ ಯೇ ಚಾತ್ಯುದಾರಾಶಯಾಃ ॥ ವಿನತೇಷು ಸುಧಾಭಾರಾಃ ವಿಮತೇಷು ಭಯಂಕರಾಃ ॥ ನಿಗ ಮಾಂತಾತಿ ಗೂಢಾರ್ಥ ಪ್ರಕರಾಯದ್ವಚೋಭರಾಃ ॥ ಅಂತರಂಗಂ ಮನೋಯೇಷಾಂ ಸಂತತಂ ಕಮಲಾ ಪ್ರಿಯೇ ॥ ಯೇಚಾತ್ಯದ್ಭುತ ಕಲ್ಯಾಣಗುಣರತ್ನಾ ಕರಾಯಿತಾಃ ॥ ತೈರೇತೈಸ್ತ್ರಯಿೀ ವಿದ್ಯಾನವದ್ಯಪದ್ಯ ಪ್ರತಿಷ್ಠಾಪ ನಗರಿಷ್ಠ ಪರಮಪುರಷಪದ ನಳಿನಹಂಸಾಯಿತ ಪರಮಹಂಸ ಕಂಸ ಹಿಂಸಕ ಪೂಜಿತ ಪರಿವ್ರಾಜಕ ಪರಮೂರ್ಧಾಭಿ ಷಿಕ್ತ ಪರತಂತ್ರ ಮಂತ್ರ ಯಂತ್ರ ದೂರ ಸರ್ವತಂತ್ರ ಸ್ವತಂತ್ರೋಭಯ ವೇದಾಂತಾಚಾರ್ಯ ಶ್ರೀಮದ್ರಾಮಾನುಜ ಸಿದ್ಧಾಂತ ನಿರ್ಧಾರಣ ಬದ್ಧಶ್ರದ್ಧ ಶ್ರೀಮತ್ಕವಿಕಥನಕಂಠೀರವ ಚರಣನಳಿನಯುಗಳ ವಿನ್ಯಸ್ತ ಸಮಸ್ತಾತ್ಮಭರ ಶ್ರೀಮದುಭಯ ಪದಾಶ್ರಿತಾಶೇಷ ಚೇತನಾವನ ಸವನದೀಕ್ಷಾರಕ್ಷ ಶ್ರೀಮದ್ಬ್ರಹ್ಮತಂತ್ರ ಘಂಟಾವತಾರ ಪರಕಾಲ ಸಂಯಮಿ ಸಾರ್ವಭೌಮ ಚರಣನಳಿನ ಹಂಸಾಯಮಾನಮಾನಸ ಶ್ರೀಮದ್ವೇದಾಂತ ಬ್ರಹ್ಮತಂತ್ರ ಪರಕಾಳ ಸಂಯ ಮೀಂದ್ರ ಕೃಪಾಸಮನುಗ್ರಹೀತ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಸ್ವಾಮಿಭಿಃ ॥—

ಅಸ್ಮದನುಗ್ರಹೈಕ ಪಾತ್ರಾಣಾಂ ಕೂಡ್ಲೀ ಶ್ರೀಂಗೇರಿ ಶ್ರೀ ಮಠದ ಸರ್ವಾಧಿಕಾರ ನಿರ್ವಹಣ ವಿಶಾರ ದಾನಾಂ ಲಿಂಗಾಶಾಸ್ತ್ರಿ ಸಂಜ್ಞಾ್ಯ ಪ್ರಖ್ಯಾತಾನಾಂ ವಿದುಷಾಂ । ಅನುಗ್ರಹೇಣ ನಾರಾಯಣ ಸ್ಮರಣ ಪೂರ್ವಕಂ ಪ್ರೇಷಿತ ಮಿದಂ ಶ್ರೀಮುಖಂ ॥ ಈ ಪ್ಲವಂಗ ಸಂವತ್ಸರದ ನಿಜಜೇಷ್ಠ ಶುದ್ಧ ೧೩ ವರೆಗೆ ತುಂಗಭದ್ರಾನದೀ ತೀರ ವಾಸ್ತವ್ಯ ಹೊನ್ನಾಳೀ ನಾಮಕ ಗ್ರಾಮದಲ್ಲ ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೈನಂದಿನ ಪೂಜಾ ಸಮಾರಾಧ ನಾದಿಗಳು ನಿರಂತರಾಯವಾಗಿ ನಮ್ಮ ಶ್ರೀ ಮಠದಲ್ಲ ನಡೆಯುತ್ತಾ ಇಧೆ. ಅಲ್ಲಿಂದಾ ನೀವು ನಿಮ್ಮ ಶ್ರೀ ಮಠದ ಸುಭೇದಾರ ಪುಟ್ಟಶಾಸ್ತ್ರೀ, ಹಿರೇ ಕೇರೂರಶಿವರಾಮ ಶಾಸ್ತ್ರಿ ಇವರುಗಳ ಸಂಗಡಾ ನಮ್ಮ ಸನ್ನಿಧಾನಕ್ಕೆ ಕಳುಹಿಸಿ ಕೊಟ್ಟಾ ವಿಜ್ಞಾಪನಾ ಪತ್ರಿಕಾಭಿಪ್ರಾಯಗಳು ವಿದಿತವಾಗಿ ಬಹಳ ಸಂತುಷ್ಟ ಚಿತ್ತರಾದೆವು. ಇಲ್ಲಿ ನಾವೂ ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣ ಸಂಸ್ಥಾನ ಸಮೇತರಾಗಿ ಶ್ರೀಕೂಡ್ಲಿಯಲ್ಲಿ ತುಂಗಭದ್ರಾಸಂಗಮ ಸ್ನಾನಾರ್ಥ ವಾಗಿ ನಾವೂ ದಯಮಾಡಿ ಇದ್ದ ಕಾಲದಲ್ಲಿ ನೀವೂ ತಮ್ಮ ಮಠದ ಕಡೆ ವಿಶಿಷ್ಟ ಬ್ರಾಹ್ಮಣರು ಸಹಾ ತಮ್ಮ ಶ್ರೀ॥ ॥ ಆಜ್ಞಾನುಸಾರವಾಗಿ ನಮಿಗೆ ಮಾಡಿದಂತ್ತಾ ಮರ್ಯಾದೆ ಸತ್ಕಾರಾದಿಗಳನ್ನು ಸಹ ನಾವೂ ಅಂಗೀಕರಿಶಿ ಬಹುತರ ಸಂತುಷ್ಟಾಂತರಂಗರಾದೆವು. ಪರಂತು ಅಲ್ಲಿ ಕೂಡ್ಲೀ ಶ್ರೀ ಮಠದಲ್ಲ ತಮ್ಮ ಶ್ರೀ॥ ॥ ದಯಮಾಡದೇ ಇರುವದ್ದರಿಂದಾ ತದ್ದರ್ಶನಾಭಾವ ನಿಮಿತ್ತಿಕ ಮನೋನ್ಯೂನತಾ ಕಿಂಚಿತ್ತು ಇಧೆ. ಹೊರತು ಮಿಕ್ಕಾದಕ್ಕ ವೊಂದಕ್ಕೂ ನ್ಯೂನತೆ ಇಲ್ಲಾ. ಇನ್ನೊಂದ ಕಾಲ ವಿಶೇಷದಲ್ಲ ಆದರೂ ತಮ್ಮ ಶ್ರೀ॥ ॥ ಗೂ ನಮಿಗೂ ಸಾಮಾನ್ಯಾಧಿಕರಣ್ಯಸಂಭವಿಶಿ ಸಂದರ್ಶನ ಸಲ್ಲಾಪಾದಿಗಳು ಆಗಬೇಕು ಯಂಬುವ ಅಭಿಲಾಷೇ ಬಹಳ ವಾಗಿ ಇಧೆ. ಈ ಅಭಿಪ್ರಾಯಗಳೆಲ್ಲಾವೂ ತಮ್ಮ ಶ್ರೀ॥ ॥ ಸನ್ನಿಧಾನಲ್ಲ ಶೃತಪಡಿಶಿ ಈ ಸಂಸ್ಥಾನದ ಮರ್ಯಾದೆಗಳಿಗೂ ಆ ಸಂಸ್ಥಾನದ ಮರ್ಯಾದೆಗಳಿಗೂ ಪರಸ್ಪರ ಸೌಹಾರ್ದದಿಂದಾ ದಿನೇ ದಿನೇ ಅಭಿವೃದ್ಧಿ ಯಾಗುವ ಹಾಗೆ ನಮ್ಮ ಚಿತ್ತದಲ್ಲ ಇದ್ದ ಹಾಗೆ ತಮ್ಮ ಶ್ರೀ॥ ॥ ಚಿತ್ತದಲ್ಲ ಇರುವ ಹಾಗೆ ಶ್ರುತಪಡಿಸು ವದು. ವುಭಯ ಸಂಸ್ಥಾನಕ್ಕೆ ಆಗಿರುವ ಸೌಹಾರ್ದವನ್ನೂ ನಮ್ಮ ಶಿಷ್ಯರಾದ ಮಹಿಶೂರ ಸಂಸ್ಥಾನದ ದಿವ್ಯರತ್ನ ಸಿಂಹಾಸನಾಧೀಶ್ವರರಾದ ಶ್ರೀ ಕೃಷ್ಣರಾಜ ಸಾರ್ವಭೌಮರು ನಮ್ಮ ಶ್ರೀ ಮಠದಿಂದಾ ಬರಶಿ ಕಳುಹಿಶಿದ ಪತ್ರಿಕೆ ಗಳಿಂದಾ ಚಿತ್ತಕ್ಕೆ ತಂದು ಬಹುತರ ಸಂತುಷ್ಟ ಚಿತ್ತರಾಗಿ ಇಧಾರೇ ಪ್ರಕೃತದಲ್ಲಿ ನೀವೂ ತಮ್ಮ ಶ್ರೀ॥ ॥ ಅಪ್ಪಣೆ ಪ್ರಕಾರಾ ಹೊರೆಟು ಶ್ರೀ॥ ॥ ಸನ್ನಿಧಾನಂಗಳಿಗೆ ಹೋಗಿ ನಾವೂ ನಿಮ್ಮ ಯದುರಿಗೆ ಅಪ್ಪಣೆ ಕೊಟ್ಟು ಅಭಿಪ್ರಾಯಗಳನ್ನೂ ಶ್ರೀಮುಖದಲ್ಲ ಅಪ್ಪಣೆ ಕೊಟ್ಟುಅಭಿಪ್ರಾಯಗಳನ್ನೂ ಸಹಾ ತಮ್ಮ ಶ್ರೀ॥ ॥ ಸನ್ನಿಧಾನದಲ್ಲೂ ಶ್ರುತಪಡಿಸಿ ಅಪ್ಪಣೆ ಆದ ವಿವರಗಳಿಗೆ ಇಲ್ಲಿಗೆ ಬರಶಿ ಕಳುಹಿಸುವದು ಇಲ್ಲಿಂದಾ ನಿಮ್ಮ ಕಡೇ

ಪುಟ್ಟಶಾಸ್ತ್ರೀ, ಶಿವರಾಮ ಶಾಸ್ತ್ರೀ ಇವರ ಕೈಲೆ. ಫಲ ಮಂತ್ರಾಕ್ಷತೆಯನ್ನೂ ಶ್ರೀಮುಖವನ್ನೂ ಸಹಾ ಅಪ್ಪಣೆ ಕೊಟ್ಟುಕಳುಹ್ಸಿಸಿದೆ. ಸುಸಮಯದಲ್ಲಿ ಸ್ವೀಕರಿಸುವದು. ಇವರ ಮುಖ ವಚನಗಳಿಂದ ವಿಶೇಷ ವೃಂತ್ತಾಂತಗಳು ತಿಳಿಯಬರುತ್ತಾ ಇಥೆ. ಇತಿ ನಾರಾಯಣ ಸ್ಮೃತಿಃ ಶ್ರೀಃ

---

೧೨. ಲೇಖನ—ಪ್ಲವಂಗ ನಿಜ ಜ್ಯೇಷ್ಠ ಶು ೧೩, ಶಾ. ಶ. ೧೭೭೦, ಕ್ರಿ. 1847.

* ಶ್ರೀಗಳವರು ಶ್ರೀ ಹಯಗ್ರೀವ ಶ್ರೀ

ಶ್ರೀ ಮದ್ಯ ಜನಾದಿ ಷಟ್ಕರ್ಮ ನಿರತರಾದಂಥಾ ಶ್ರೌತ ಸ್ಮಾರ್ತ ಕರ್ಮಾನುಷ್ಠಾನ ವೇದಶಾಸ್ತ್ರ ಸದಾಚಾರ ನಿರತರಾದಂಥ ಸೌಶೀಲ್ಯ ಗಾಂಭೀರ್ಯಾದಿ ನಿಖಿಲ ಗುಣರತ್ನರತ್ನಾಕರರಾದಂಥಾ ಕೂಡ್ಲೀ ಶ್ರೀಂಗೇರೀ ಶ್ರೀ ಮಠದ ಸರ್ವಾಧಿಕಾರಿಗಳಾದಂಥಾ ಲಿಂಗಾಶಾಸ್ತ್ರಿಗಳವರಿಗೆ—

ಶ್ರೀ ಪರಕಾಲ॥* ॥ ಶ್ರೀ ಮಠದ ಶ್ರೀ ಕಾರ್ಯ ಕರ್ತೃತ್ತಾಡಮರೀ ರಂಗಾಚಾರ್ಯರೂ ಮಾಡುವಾ ಅನೇಕ ನಮಸ್ಕಾರಗಳು ಆದಾಗಿ ಪ್ಲವಂಗ ಸಂ|ರದ ನಿಜ ಜ್ಯೇಷ್ಠ ಶು. 13. ವರಿಗೆ ಹೊನ್ನಾಳಿಯಲ್ಲಿ ನಮ್ಮ ಶ್ರೀ॥* ॥ ಪರಮಾನುಗ್ರಹದಿಂದಾ ನಾವೂ ಕ್ಷೇಮದಲ್ಲ ಇಥೇವೆ. ತಮ್ಮ ಶ್ರೀ॥* ॥ ಪರವಾನುಗ್ರಹಲಬ್ಧ ಕ್ಷೇಮ ಸ್ಥೈರ್ಯ ಸಾಂಪ್ರಾಜ್ಯ ವೈಭವಾದಿ ನಿಖಿಲ ಶುಭೋದಂತಗಳಿಗೆ ಆಗಿದಾಗ್ಗ್ಯೆ ಪ್ರೇಮ ಪೂರ್ವಕವಾಗಿ ಪತ್ರಿಕೆಯನ್ನು ಬರಿಶಿ ಕಳುಹಿಸುವಂತೆ ಚಿತ್ತಕ್ಕೆ ತರಬೇಕು. ತರುವಾಯಾ ತಾವು ಬರಸಿ ಕಳುಹಿಸಿದ ಪತ್ರಿಕಾಭಿಪ್ರಾಯವನ್ನು ಶ್ರೀ॥* ॥ ಸನ್ನಿಧಾನದಲ್ಲಿ ಶ್ರುತಪಡಿಸಿದ್ದಾಯಿತು ತಮ್ಮ ಕಡೆ ವೇದಮೂರ್ತಿ ಗಳಾದಂಥಾ ತಮ್ಮ ಶ್ರೀ ಮಠದ ಸುಭೇದಾರರು ಪುಟ್ಟಶಾಸ್ತ್ರಿಗಳು ಹಿರೆಕೆರೂರು ಶಿವರಾಮಶಾಸ್ತ್ರಿಗಳು ಇವರುಗಳ ಕೈಯಲ್ಲಿ ಕಳುಹಿಶಿಕೊಟ್ಟಾ ತಮ್ಮ ವಿಜ್ಞಾಪನಾ ಪತ್ರಿಕೆಯನ್ನು ನಮ್ಮ ಶ್ರೀ॥* ॥ ಪರಾಂಬರಿಸಿ ಸಂತುಷ್ಟ ಚಿತ್ತ ರಾಗಿ ತಮ್ಮಲ್ಲಿ ಪರಿಪೂರ್ಣ ಕಟಾಕ್ಷದಿಂದಾ ತಮಗೆ ವೊಂದು ಶ್ರೀಮುಖವನ್ನೂ ಫಲ ಮಂತ್ರಾಕ್ಷತೆಯಂನ್ನೂ ವೇದ ಮೂರ್ತಿಗಳಾದಂಥ ಈಶ್ವರಶಾಸ್ತ್ರಿಗಳ ಕೈಯಲ್ಲಿಯೇ ಅಪ್ಪಣೆಕೊಟ್ಟುಕಳುಹಿಶಿ ಇಥಾರೇ. ಶ್ರೀಮುಖಾ ಬಂದು ತಮಗೆ ತಲಪಿದ ವಿಚಾರಕ್ಕೆ ಬರಶಿ ಕಳುಹಿಸುವಂತೆ ಚಿತ್ತಕ್ಕೆ ತರಬೇಕು. ತಮ್ಮ ಶ್ರೀ॥* ॥ ಗೂ ನಮ್ಮ ಶ್ರೀ॥ * ॥ ಗೂ ಪರಸ್ಪರ ಸೌಹಾರ್ದ ಸಂಭವಿಶಿ ಇರುವದರಿಂದ ಅದೂ ದಿನೇ ದಿನೇ ಅಭಿವೃದ್ಧಿಯಾಗುವ ಹಾಗೇ ತಮ್ಮ ಚಿತ್ತಕ್ಕೆ ತರಬೇಕು. ಈ ಮೇರೆಗೆ ಬರಿಶಿ ಕಳುಹಿಸುವಂತೆ ಶ್ರೀ॥* ॥ ಅಪ್ಪಣೆ ಆದ್ದ ರಿಂದಾ ತಮಗೆ ಶೃತ ಪಡ್ಸಿ ಇಥೆ. ಇತಿ ಅನಂತ ನಮಸ್ಕಾರಾಃ ಶ್ರೀಃ

---

೧೩. ಲೇಖನ—ಪ್ಲವಂಗ ಭಾದ್ರಪದ ಕೃ. ೧೪, ಶಾ. ಶ. ೧೭೭೦, ಕ್ರಿ.ಶ. 1847.

ಶ್ರೀ ಹಯವದನ ಲಕ್ಷ್ಮೀನಾರಾಯಣೌ ವಿಜಯೇತೇ ಶ್ರೀ




ಶ್ರೀ ಮತ್ಯೈಯ್ಯಂತ ಸಿದ್ಧಾಂತ ಚರ್ಯಾ ಪರ್ಯಾಯ ವೇದಸೇ ।
ನರವೇಷಾಯ ಶೇಷಾಯ ಗುರವೇ ಕರವೈ ನಮಃ ॥

---

* ಇಲ್ಲ ಅನ್ವಯಿಸುವ ಶ್ರೀ ಶ್ರೀಗಳವರು ಎಂಬುದನ್ನು ಹಿಂದಿನ ಸಂಪ್ರದಾಯಾನುಸಾರ ಗೌರವಾರ್ಥವಾಗಿ ಲೇಖನದ ಮೇಲ್ಭಾಗದಲ್ಲಿ ಬರೆದಿರುತ್ತದೆ.

ಶ್ರೀಮತೇ ಸರ್ವತಂತ್ರೇಷು ಸ್ವತಂತ್ರಾಯ ಸು ಧೀಮತೇ ।
ಕವಿತಾರ್ಕಿತ ಸಿಂಹಾಯ ವೇಂದಾಂತ ಗುರುವೇ ನಮಃ ॥

ಶ್ರೀ ಶಾಜ್ಞಾಮುಪಜೀವ್ಯ ವೈದಿಕ ಪಥತ್ರಾಣಾಯ ಯೇಚಾಭವನ್ನಾ ಚಾರ್ಯಾ ಯತಿರಾಜ ದೇಶಿಕ ಮಹಾ ಚಾರ್ಯಾ ದಯೋ ಭೂತಲೇ ॥ ತದ್ವೀಕ್ಷಾವಶಲಬ್ಧ ದಿವ್ಯಮಹಿಮ ಪ್ರೋದ್ಯಚ್ಚತು ಸ್ಸಪ್ತತಿ ಶ್ರೀ ಮದ್ವೈಷ್ಣವ ದಿವ್ಯ ಪೀಠ ಸಹಿತಾಯೇ ಚಾತ್ಯುದಾ ರಾಶಯಾಃ ॥ ವಿನತೇಷು ಸುಧಾಧಾರಾಃ ವಿಮತೇಷು ಭಯಂಕರಾಃ ॥ ನಿಗಮಾಂ ತಾತಿ ಗೂಢಾರ್ಥ ಪ್ರಕರಾಃ ಯದ್ವಚೋಭರಾಃ॥ ಅಂತರಂಗಂ ಮನೋಯೇಷಾಂ ಸತತಂ ಕಮಲಾ ಪ್ರಿಯೇ॥ ಯೇ ಚಾತ್ಯುದ್ಭುತ ಕಲ್ಯಾಣ ಗುಣರತ್ನಾ ಕರಾಯಿತಾಃ ॥ ತೈರೇತ್ಯೈಸ್ತ ಯೀ ವಿದ್ಯಾ ನವದ್ಯ ಪೂರ್ವ ಪ್ರತಿಷ್ಠಾಪ ನಗರಿಷ್ಠ ಪರಮಪುರುಷ ಪದನಳಿನ ಹಂಸಾಯಿತ ಪರಮಹಂಸಕಂಸಹಿಂಸಕ ಪೂಜಕಪರಿವ್ರಾಜಕಪದ ಮೂರ್ಧಾಭಿಷಿಕ್ತ ಪರತಂತ್ರ ಮಂತ್ರ, ಯಂತ್ರ, ದೂರ ಸರ್ವತಂತ್ರ ಸ್ವತಂತ್ರೋಭಯ ವೇದಾಂತಾಚಾರ್ಯ ಶ್ರೀಮದ್ರಾಮಾನುಜ ಸಿದ್ಧಾಂತ ನಿರ್ಧಾರಣ ಬದ್ಧಶ್ರದ್ಧ ಶ್ರೀಮತ್ಕವಿಕಥನ ಕಂಠೀರವ ಚರಣ ನಳಿನಯುಗಳ ವಿನ್ಯಸ್ತ ಸಮಸ್ತಾತ್ಮಭರ ಶ್ರೀ ಮದು ಭಯ ಪದಾಶ್ರಿತಾಶೇಷ ಚೇತನಾವನ ಸವನದೀಕ್ಷಾ ರಕ್ಷ ಶ್ರೀಮದ್ಬ್ರಹ್ಮತಂತ್ರ ಘಂಟಾವತಾರ ಪರಕಾಲ ಸಂಯಮಿ ಸಾರ್ವಭೌಮ ಚರಣನಳಿನ ಹಂಸಾಯಮಾನ ಮಾನಸ ಶ್ರೀಮದ್ವೇದಾಂತ ಬ್ರಹ್ಮತಂತ್ರ ಪರಕಾಲ ಸಂಯಮೀಂದ್ರ ಕೃಪಾಸಮನು ಗೃಹೀತ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಸ್ವಾಮಿಭಿಃ ॥ ॥

ಶ್ರೀತಿರುಪತಿ ತಿರುನಾರಾಯಣಪುರ ಮಹಿಸೂರು ಶ್ರೀರಂಗಪಟ್ಟಣ ಮಾಗಡೀ ಪ್ರಭೃತಿ ಅಸ್ಮಚ್ಛ್ರೀಮಠಸ್ಥಶಿಷ್ಯಾ ಣಾಂ ಅಧಿಕಾರಿಣಾಂ ತದಿತರೇಷ ಶಿಷ್ಯಾಣಾಂ ಚ ನಾರಾಯಣ ಸ್ಮರಣ ಪೂರ್ವಕಂ ಪ್ರೇಷಿತಮಿದಂ ಶ್ರೀಮುಖಂ ॥ ತತಃ ಪ್ಲವಂಗನಾಮ ಸಂವತ್ಸರದ ಭಾದ್ರಪದ ಬ. ೧೪ ರವರೆಗೆ ತುಂಗಭದ್ರಾನದೀ ತೀರಸ್ಥ ಬಿದರೇ ಹೊನ್ನಾಳಿ ಗ್ರಾಮದಲ್ಲಿ ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣ ಚರಣ ಸೇವಾತತ್ಪರರಾಗಿ ಉಭಯ ನಿಗಮಾಂತ ಕಾಲಕ್ಷೇಪ ಪ್ರವಚನಗಳನ್ನು ನಡಿಸುತ್ತಾ ಇಧೇವೆ.

ಈ ಪ್ಲವಂಗ ಸಂವತ್ಸರದ ಜೇಷ್ಠಮಾಸದಲ್ಲಿ ತುಂಗಭದ್ರಾನದೀ ಸ್ನಾನಾರ್ಥವಾಗಿ ಶಿವಮೊಗ್ಗೆಗೆ ಶ್ರೀ ಹಯ ಗ್ರೀವ ಲಕ್ಷ್ಮೀನಾರಾಯಣಸ್ವಾಮಿ ಸಂಸ್ಥಾನ ಸಮೇತರಾಗಿ ಬಂದು ಇರುವ ಕಾಲದಲ್ಲಿ ತುಂಗಭದ್ರಾನದೀ ಸಂಗಮ ಸ್ಥಾನವಾದ ಕೂಡ್ಲೀ ಸ್ಥಳಕ್ಕೆ ನದೀ ಸಂಗಮ ಸ್ನಾನಾರ್ಥವಾಗಿ ನಾವು ಹೋಗಬೇಕೆಂತಿದ್ದೂ ಯೋಚಿಶಿ ಇದ್ದಲ್ಲಿ ಆ ಕೂಡ್ಲೀ ಶೃಂಗೇರೀ ಸ್ಥಳದಲ್ಲಿ ದಯಮಾಡಿ ಇರುವ ಕೂಡ್ಲೀ ಶೃಂಗೇರೀ ಮಠಾಧಿಪತಿಗಳಾದ ಪರಮಹಂಸ ಪರಿ ವ್ರಾಜಕಾಚಾರ್ಯ ಇತ್ಯಾದಿ ಬಿರುದಾಂಕಿತರಾದ ಶ್ರೀ ಶಂಕರ ಭಾರತೀ ಸ್ವಾಮಿಗಳವರು ತಾವು ಕೃಷ್ಣಾತೀರ ದಲ್ಲಿ ಇದ್ದಾಗ್ಯೂ ಪರಂಪರೀಯ ಈ ಅಭಿಪ್ರಾಯವನ್ನೂ ಚಿತ್ತಕ್ಕೆ ತಂದು ತಮ್ಮ ಮಠಾಧಿಕಾರಿಗಳಾದ ಲಿಂಗಾಶಾಸ್ತ್ರಿ ಗಳಿಗೆ ನಾವೂ ಕೂಡ್ಲಿಗೆ ದಯಮಾಡಿಶಿದ ಕಾಲದಲ್ಲಿ ಮರ್ಯಾದೆ ಯಿಂದಾ ಬಿಜಯಮಾಡಿಶಿಕೊಂಡು ಬಂದು ಅಲ್ಲಿ ಸ್ಥಳಾ ಮಾಡ್ಸಿ ಸತ್ಕಾರಾದಿಗಳನ್ನು ಮಾಡ್ಸುವ ಹಾಗೂ ತಮ್ಮ ಶ್ರೀ ಮಠದ ಮುಂದೆ ನಮ್ಮ ಸಂಸ್ಥಾನಕ್ಕೆ ವುಂಟಾದ ಪಂಚಕಲಶದ ಪಾಲಖಿ ಪಂಚಕಲಶದ ಛತ್ರಿ ಚಾಮರ ಸಮಸ್ತ ವಾದ್ಯಗಳು ಹಗಲು ದೀವಟಿಗೆ ಆನೆಯ ಮೇಲೆ ನಗಾರೀ ಮುಂತಾದ ಸಂಸ್ಥಾನದ ಬಿರುದುಗಳಿಂದಾ ನಾವೂ ದಯಮಾಡಿಸುವ ಬಗ್ಗೆ ಅಂಗೀಕರಿಶಿ ಅಲ್ಲಿಂದಾ ಅಪ್ಪಣೆಕೊಟ್ಟುಕಳುಹಿಶಿ ಇದ್ದದ್ದರಿಂದಾ ಅವರ ಮಠದ ಸರ್ವಾಧಿಕಾರಿಗಳು ಲಿಂಗಾಶಾಸ್ತ್ರಿಗಳವರು ಸುಭೇದಾರ ಪುಟ್ಟ ಶಾಸ್ತ್ರಿಗಳು ಸಹಾ ತಮ್ಮ ಶ್ರೀ॥ ॥ ಅಪ್ಪಣೆಯ ಮೇರೆಗೆ ನಮ್ಮ ಸಂಸ್ಥಾನವನ್ನು ಮರ್ಯಾದೆಯಿಂದ ಬಿಜಯ ಮಾಡ್ಸಿಕೊಂಡು ಹೋಗಿ ನಮ್ಮ ಸಂಸ್ಥಾನಕ್ಕೆ ವುಂಟಾದ ಸಮಸ್ತ ಬಿರುದುಗಳಿಂದಲೂ ತಮ್ಮ ಶ್ರೀಮಠದ ಮುಂದೆ ಶ್ರೀಮಠದ ಬೀದಿಯಲ್ಲಿ ಬಿಜಯ ಮಾಡ್ಸಿಕೊಂಡು ಹೋಗಿ ಸತ್ಕಾರಾದಿಗಳನ್ನೂ ಮಾಡ್ಸಿ ಬರುವಾಗ ಅದೇ ರೀತಿ ಯಾಗಿ ಮರ್ಯಾದೆ ಯಿಂದಾ ಕಳುಹಿಶಿ ಕೊಟ್ಟು ಇಧಾರೆ.

ಈ ವಿಷಯ ಕೂಡ್ಲೀ ಶ್ರಿಂಗೇರೀ ಮಠಾಧಿಪತಿಗಳಾದ ಶಂಕರ ಭಾರತೀಸ್ವಾಮಿಗಳವರಿಗೂ ನಮಗೂ ಪರಸ್ಪರ ಸೌಹಾರ್ದದಿಂದಾ ನಡೆದುಯಿಧೆ. ಆದಕಾರಣ ನಮ್ಮ ಶ್ರೀ ಮಠದ ಮುಂದೆ ಕೂಡ್ಲೀ ಶ್ರೀಂಗೇರೀ ಮಠಾಧಿಪತಿ ಗಳಾದಂಥಾವರೂ ಅವರ ಸಂಸ್ಥಾನಕ್ಕೆವುಂಟಾದ ಪಂಚಕಲಶದ ಪಾಲಖಿ ಹಗಲು ದೀವಟಿಗೆ ಆನೆಯ ಮೇಲೆ ನಗಾರೀ ಸಮಸ್ತ ಬಿರುದುಗಳಿಂದಲೂ ದಯಮಾಡುವಲ್ಲೂ ನಮಗೂ ಸಂತೋಷವಿದೆ. ಆದ್ದರಿಂದಾ ಕೂಡ್ಲೀ ಶ್ರೀಂಗೇರಿ

ನಮಗೆ ಅತ್ಯಂತ ಪ್ರಿಯಶಿಷ್ಯರಾದ ಸೋದೇಸೂಪಾಶೀಷೆ ಸಮಸ್ತರಿಗೆ ‖ * ‖ ಸ್ಮರಣ ಪೂರ್ವಕವಾಗಿ ಹರಸಿ ಕಳುಹಿಸಿದ ಆಶೀರ್ವಾದ ಆನಂದ ಸಂವತ್ಸರದ ಪುಷ್ಯ ಬಹುಳ ೯ರಲ್ಲು ಯೋಗಾನಂದ ಕ್ಷೇಮೋಪರಿ ತರುವಾಯ ಕೂಡ್ಲಿ ಸ್ಥಳದ ಅಗ್ರಹಾರದಲ್ಲೂ ಇರುವ ಅಪ್ಪುಭಟ್ಟರ ಶೇಷಶಾಸ್ತ್ರಿ೧ ಜಟಾ ವಲ್ಲಭ ವೆಂಕಟ ರಾಮಾವಧಾನಿ ೧। ಹೊಟ್ಟೆ ಅಪ್ಪುಭಟ್ಟ೧ ಪುರಾಣೀಕ ಶಾಮಾಶಾಸ್ತ್ರಿ೧ ಫಣಿಭಟ್ಟರ ಸುಬ್ಬಾವಧಾನಿ ೧ ಗೋಪಾಲಯ್ಯನ ಸುಬ್ಬಯ್ಯ ೧ ನಾಗಾಜೋಯಿಸ ೧ ವೈದ್ಯ ಶೇಷಪ್ಪ೧ ಈ ೮ ಮನೆಯವರಿಗೆ ಶ್ರೀ ಕೂಡ್ಲಿಯಲ್ಲೂ ಇರುವ ಶೃಂಗೇರಿ ಮಠದಿಂದ ಸರ್ವಾಧಿಕಾರೀ ಸೋಮೇಶ್ವರ ಶಾಸ್ತ್ರಿ ಕಾಗದವು ಬಹಿಷ್ಕಾರ ಇಟ್ಟಿರುತ್ತದೆ. ಆ ಜನಗಳು ನಮ್ಮ ಶಿಷ್ಯ ಜನರುಗಳಲ್ಲಿ ಬಂದಲ್ಲಿ ಅನ್ನೋದಕಾದಿ ಸಂಸರ್ಗ ಸಂಭಾವನೆ ಮುಂತಾದ್ದರಲ್ಲಿ ಯಾರೂ ಕೂಡಿ ನಡೆಯದಂತೆ ಬಂದೋಬಸ್ತು ಆಗಬೇಕಾಗಿ ಕಾಗದ ತಲುಪಿದ್ದರಿಂದ ಬರಿಸಿರುತ್ತದೆ. ಆ ಜನರುಗಳೂ ಅವರ ಮನೆಯವರಾಗಲೀ ನಮ್ಮ ಪ್ರಾಂತ್ಯಕ್ಕೆ ಬಂದಲ್ಲಿ ಏನೇ ಒಂದು ಸಂಸರ್ಗ ಮಾಡಬಾರದಾದ್ದರ ಹೊರ್ತು ಸಂಭಾವನೆ ಮುಂತಾದ್ದು ಕೂಡ ಕೊಡ ಕೂಡದು ಆ ಮಠದಿಂದ ನಮ್ಮ ಮಠದ ಶ್ಯಾನುಭೋಗ ಭಿಷ್ಟಪ್ಪಯ್ಯನ ಹೆಸರಿನಿಂದ ತಲ್ಪಿದ ಕಾಗದ ನಕಲು ನಿಮ್ಮ ತಿಳಿವಳಿಕೆ ಬಗ್ಗೆ. ಇದರ ಸಂಗಡಲೇ ಆ ಮಠದ ಶ್ಯಾಂಭಟ್ಟನ ಸಂಗಡ ಕೊಟ್ಟಿರುತ್ತದೆ ತಿಳಿದಿರಬೇಕು. **ಇತ್ಯಾಶಿಷಃ**

———

## ಮೂರನೆಯ ಭಾಗ——ಪಾಳೆಯಗಾರರ ಕಾಲ

### A. ಸಂತೆ ಬೆನ್ನೂರು ಪಾಳೆಯಗಾರರು.

೪೭. ದಾನಶಾಸನ.—ಕಾಳಯುಕ್ತ, ಕಾರ್ತೀಕ ಶು. ೧೫, ಶಾ. ಶ. ೧೪೮೦, ಕ್ರಿ. ಶ. 1558.




ಶ್ರೀರಾಮ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈರೋಕ್ಯನಗರಾರಂಭ ಮೂಲಸ್ತಂಭಾಯಶಂಭವೇ

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪ ಶಾಲೀವಾಹನಶಕ ವರುಷ ೧೪೮೦ನೇ ಕಾಳಾಯುಕ್ತಿ। ಸಂವತ್ಸರದ್ವ ಕಾರ್ತೀಕ ಶು ೧೫ ಪರುವಣಿ ಪುಣ್ಯ ಕಾಲದಲ್ಲೂ ಶ್ರೀ ಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ। ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ, ಅನಾದ್ಯ ವಿಛಿನ್ನಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ಯೋಗನಿರುತರಾದ। ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ವಿದ್ಯಾರಣ್ಯಭಾರತೀ ಸ್ವಾಮಿಗಳಯ್ಯನವರಿಗೆ. . . . ಶ್ರೀಮತು ಸಂತೇ ಬೆನ್ನೂರ ರಾಮಚಂದ್ರ ದೇವರ ಪಾದಪದ್ಮಾರಾಧಕರಾದ ಹನುಮಂತ ದೇವರ ನಿಜಭಕ್ತನಾದ ವಾಲ್ಮೀಕಿ ಗೋತ್ರದ ಪೂವಲಾನ್ಮಯದ ಯಿಮ್ಮಡಿ ಶೀತಾರಾಮಪ್ಪನಾಯಕರ ಪುತ್ರನಾದ ಹನುಮಪ್ಪನಾಯಕರು ಬರಸಿಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂದರೆ ಆರಗದ ವೆಂಠಕ್ಕೆ ಸಲ್ಲುವ ಗಾಜನೂರು ಶಿವಮೊಗ್ಗೆ ಹೋಬಳಿಗೆ ಸಲ್ಲುವ ಹರಕೇರಿ ಹೋಬಳಿ ಪಂಚ ಗ್ರಾಮಉಪ್ರಾಕು ಶಿವಮೊಗ್ಗೆಯಲ್ಲಿ ಯಿದ್ದ ತಿರುಮಲ ದೀಕ್ಷಿತರಿಗೆ ರಾಯದತ್ತವಾಗಿ ನಡೆದು ಬರುತ್ತಿದ್ದಲ್ಲಿ ಈ ತಿರುಮಲ ದೀಕ್ಷಿತನು ನಿಮ್ಮ ಸಂಗಡ ಪ್ರಸಂಗಮಾಡಿದ ನಿಮಿತ್ಯ ಆತನ ಕಕ್ಷಿ ನಿಂತ ನಿಮಿತ್ಯದಲ್ಲೂ ಗುರುಗಳ ಸಂಗಡ ಸಮ ಕಕ್ಷಿಯಾಗಿ ಪ್ರಸಂಗೈಶಿದ ದೋಷ ಬಂತು ಎಂದು ಮನಸ್ಸಿಗೆ ಕಂಡದ್ದರಿಂದಾ ಸಹಾ ಹರಿಕೇರಿ ಹೋಬಳಿ ಪಂಚ ಗ್ರಾಮವನ್ನು ನಿಮಗೆ ಶಿವಾರ್ಪಿತವಾಗಿ ಧಾರೆಯ ನೆರೆದು ಕೊಟ್ಟು ಯಿದ್ದಲ್ಲಿ ಮಧ್ಯದಲ್ಲಿ ಸರಕಾರಕ್ಕೆ ಶೇರಿ ಬರುತ್ತದೆ. ಯೀ ಪಂಚ ಗ್ರಾಮಗಳನ್ನೂ ನಮಗೆ ಉತ್ತಾರವ ಕೊಡಬೇಕೆಂದು ತಾವು ಅಪ್ಪಣೆ ಕೊಟ್ಟಿದ್ದರಿಂದ ನಮ್ಮ ಹಿರಿಯರು ಕೂಡಲೀ ಕ್ಷೇತ್ರದಲ್ಲೂ ಕಟ್ಟಿಸಿ ಕೊಟ್ಟ ಕೂಡಲೀ ಶೃಂಗೇರಿ ಮಠದ ಧರ್ಮಕ್ಕೆ ನಮ ಮಾತಾಪಿತೃಗಳಿಗ ಅಕ್ಷಯ್ಯ ಪುಣ್ಯಲೋಕ ಪ್ರಾಪ್ತಿ ಆಗಲೆಂದು. ಈ ಹರಿಕೇರಿ ಹೋಬಳಿ ಪಂಚ ಗ್ರಾಮಗಳನ್ನೂ ಸಹಿರಣ್ಯೋದಕ ದಾನ ಧಾರಾ ಪೂರ್ವಕವಾಗಿ ರಾಮಾರ್ಪಣ ಮಾಡಿಕೊಟ್ಟು ಇಧೇವೆ ತಮ್ಮ ಶಿಷ್ಯಪಾರಂಪರ್ಯವಾಗಿ ಈ ಗ್ರಾಮಗಳನ್ನು ಅನುಭವಿಸಿಕೊಂಡು ಬರಬೇಕು, ನಮ್ಮ ಪುತ್ರ ಪೌತ್ರವಾಗಿ ಈ ಧರ್ಮವನ್ನು ನಡಸಿ ಕೊಟ್ಟೇವು ಈ ಪಂಚ ಗ್ರಾಮಗಳವಳಗುಳ್ಳ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಆಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟ ಭೋಗ ತೇಜಃ ಸಾಮ್ಯವನ್ನೂ ಸುಖದಿಂದ ಅನುಭವಿಸಿಕೊಂಡು ಬರಬೇಕೆಂದು ಬರಸಿ ಕೊಟ್ಟ ಭೂದಾನ ಪಟ್ಟಿ ಇದಕ್ಕೆ ಸಾಕ್ಷಿಗಳು ದೇವಸಾಕ್ಷಿ ಆದಿತ್ಯಚಂದ್ರಾವನಿಲೋನಲಶ್ಚದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಶ್ಚ ವೃತ್ತಂ।

श्री
राम

೪೮. ದಾನಶಾಸನ.—ಸರ್ವಧಾರಿ, ಆಷಾಢ ಶು. ೧೫, ಶಾ. ಶ. ೧೫೭೦, ಕ್ರಿ. ಶ. 1648.

ಶ್ರೀ




ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ಥಂಭಾಯಶಂಭವೇ

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪ ಶಾಲೀವಾಹನ ಶಕ ವರುಷ ೧೫೭೦ನೆಯ ಸರ್ವಧಾರಿ ಸಂವತ್ಸರದ ಆಷಾಢ ಶು ೧೫ಲ್ಲೂ ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾಧ್ಯ ವಿಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ಯೋಗನಿರತರಾದ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶ್ರೀಗೇರಿ ಶ್ರೀ ನರಶಿಂಹ ಭಾರತೀಸ್ವಾಮಿಗಳವರ ಕರ ಕಮಲ ಸಂಜಾತರಾದ ಶೃಂಗೇರಿ ಶ್ರೀ ವಿದ್ಯಾರಣ್ಯಭಾರತೀ ಸ್ವಾಮಿಗಳಯ್ಯನವರಿಗೆ ಶ್ರೀಮತ್ಸಂತೇಬೆನ್ನೂರು ರಾಮಚಂದ್ರ ದೇವರ ಪಾದ ಪದ್ಮಾರಾಧಕರಾದ ಹನುಮಂತ ದೇವರ ನಿಜಭಕ್ತನಾದ ಪೂವಲಾನ್ವಯದ ಯಿಮ್ಮಡಿ ಸೋಮಪ್ಪನಾಯಕರ ಪೌತ್ರರಾದ ನಿಜಮದವಣಿಗ ಹನುಮಪ್ಪನಾಯಕರ ಪುತ್ರರಾದ ಸರಜಾ ಹನುಮಪನಾಯಿಕರು ಬರಸಿ ಕೊಟ್ಟ ಭೂಧಾನ ಕ್ರಮಪಟ್ಟಿ ಕ್ರಮವೆಂತೆಂದರೆ—

ಅರಗದ ವೆಂಟೇಕ್ಕೆ ಸಲ್ಲುವ ಗಂಗೇ ಮಂಡಲಿ ನಾಡವಳಗಣ ಬಸವಾಪಟ್ಟಣದ ಹೋಬಳಿ ಹೊಳೆಹೊನ್ನೂರ ಶೀಮೆಗೆ ಸಲ್ಲುವ ಯಡತೊರೆ ಸೀಮೆಯಲ್ಲೂ ಶೆಟ್ಟಿಹಳ್ಳಿ ಗ್ರಾಮವನ್ನು ನಾವು ಕೂಡಲೀ ತುಂಗಭದ್ರಾ ಸಂಗಮದ ಕ್ಷೇತ್ರದಲ್ಲೂ ನಮ್ಮ ಹಿರಿಯರು ಕಟ್ಟಿಸಿ ಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆ ಕಾಲ ಕಾಲಂ ಸ್ರತಿಯಲ್ಲೂ ಚಾತುರ್ಮಾಸ್ಯ ಸಂಕಲ್ಪ ನಿಮಿತ್ಯ ಬ್ರಾಹ್ಮಣ ಸಂತರ್ಪಣೆಗೆ ಮುಟ್ಟುವ ವೆಚ್ಚಕ್ಕೆ ಈ ಗ್ರಾಮವನ್ನು ರಾಮಾರ್ಪಣವಾಗಿ ಕೊಟ್ಟುಯಿದ್ದೇವೆ. ಈ ಗ್ರಾಮಕ್ಕೆ ಸಲ್ಲುವ ನಿಧಿ ನಿಕ್ಷೇಪ। ಜಲ ಪಾಷಾಣ। ಅಕ್ಷಿಣಿ ಆಗಾಮಿ। ಶಿದ್ಧ ಸಾಧ್ಯಂಗಳೆಂಬ ಅಷ್ಟ ಭೋಗ ತೇಜಃ ಸಾಮ್ಯವನ್ನು ನೀವು ನಿಮ್ಮ ಶಿಷ್ಯ ಪಾರಂಪರ್ಯವಾಗಿ ಅನುಭವಿಸಿಕೊಂಡು ಬಾಹದು. ನಾವು ನಮ್ಮ ಪುತ್ರ ಪಾರಂಪರ್ಯವಾಗಿ ಈ ಧರ್ಮವ ನಡಿಸಿಕೊಟ್ಟೇವು ಯಂದು ಬರಸಿಕೊಟ್ಟ ಭೂದಾನ ಪಟ್ಟಿ ಇದಕ್ಕೆ ಸಾಕ್ಷಿ ದೇವಸಾಕ್ಷಿ ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ। ಅಹಶ್ಚರಾತ್ರಿಶ್ಚಉಭೇಚ ಸಂಧ್ಯೇ ಧರ್ಮಶ್ಚಜಾನಾತಿ ನರಸ್ಯ ವೃತ್ತಂ




———

## ೪೯. ದಾನಶಾಸನ.—ಸರ್ವಧಾರಿ, ಕಾರ್ತೀಕ ಶು. ೧೫, ಶಾ. ಶ. ೧೫೭೦, ಕ್ರಿ. ಶ. 1648.

ಶ್ರೀ ರಾಮ




ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈರೋಕ್ಯ ನಗರಾರಂಥ ಮೂಲಸ್ತಂಥಾಯ ಶಂಥವೇ

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪ ಶಾಲೀವಾಹನ ಶಕ ವರುಷ ೧೫೭೦ನೆಯ ಸರ್ವಧಾರೀ ಸಂವತ್ಸರದ ಕಾರ್ತೀಕ ಶು ೧೫ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತ್ಯನಾದ್ಯ ವಿಚ್ಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರುಶನ ಸ್ಥಾಪನಾ ಚಾರ್ಯ ಯೋಗ ನಿರತರಾದ ಶ್ರೀಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನೃಸಿಂಹಭಾರತೀ ಸ್ವಾಮಿಗಳಯ್ಯನವರ ಕರ ಕಮಲ ಸಂಜಾತರಾದ ಶೃಂಗೇರಿ ಶ್ರೀ ವಿದ್ಯಾರಣ್ಯಭಾರತೀ ಸ್ವಾಮಿಗಳೈಯ್ಯನವರಿಗೆ . . . . . . . . . ಶ್ರೀಮತು ಸಂತೇ ಬೆನ್ನೂರ ರಾಮಚಂದ್ರ ದೇವರ ಪಾದ ಪದ್ಮಾರಾಧಕರಾದ ಹನುಮಂತ ದೇವರ ನಿಜ ಭಕ್ತನಾದ ವಾಲ್ಮೀಕಿ ಗೋತ್ರದ ಪೂವಲಾನ್ವಯದ ಯಿಮ್ಮಡಿ ಹನುಮಪ್ಪ ನಾಯಕರ ಪೌತ್ರರಾದ ನಿಜಮದವಣಿಗ ಹನುಮಪ್ಪ ನಾಯಕರ ಪುತ್ರರಾದ ಸರಜಾ ಹನುಮಪ್ಪ ನಾಯಕರು ಬರಸಿಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂದರೆ ಮಹಾದೇವ ಪುರದ ಶೀಮೆ ವಳಿತವಾದ ಯೊಸೂರು ಪಾಲಿನಲ್ಲೂ ಸನ್ಯಾಸೀ ಕೊಪ್ಪದ ಗ್ರಾಮವನ್ನೂ ಕೂಡಲೀ ಸಂಗಮಕ್ಷೇತ್ರದಲ್ಲೂ ನಮ್ಮ ಹಿರಿಯರು ಕಟ್ಟಿಸಿ ಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆಕಾಲಕಾಲಂ ಪ್ರತಿಯಲ್ಲೂ ಆಗುವ ಚಾತುರ್ಮಾಸ್ಯ ಸಂಬಂಧ ಹಾಗೂ ತದಂಗ ಸಂತರ್ಪಣೆ ಬಗ್ಗೆ ಮುಟ್ಟುವ ವೆಚ್ಚಕ್ಕೆ ಈ ಗ್ರಾಮವನ್ನು ರಾಮಾರ್ಪಣವಮಾಡಿ ಕೊಟ್ಟುಯಿದ್ದೇವೆ. ಈ ಗ್ರಾಮಕ್ಕೆ ಸಲ್ಲುವ ಚತುರ್ಗಡಿ ವಳಗುಳ್ಳ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಆಗಾಮಿ ಸಿದ್ಧ ಸಾಧ್ಯಂ ಗಳೆಂಬ ಅಷ್ಟ ಭೋಗ ತೇಜಃ ಸಾಮ್ಯವನ್ನು ನೀವು ನಿಮ್ಮ ಶಿಷ್ಯ ಪಾರಂಪರ್ಯ ಅನುಭವಿಸಿ ಕೊಂಡು ಬರಬೇಕು. ನಾವು ನಮ್ಮ ಪುತ್ರ ಪೌತ್ರ ಪಾರಂಪರ್ಯ ಈ ಧರ್ಮವನ್ನು ನಡಸಿಕೊಟ್ಟೇವು ಯಂದು ಬರಸಿ ಕೊಟ್ಟ ಭೂದಾನ ಪಟ್ಟಿ ಇದಕ್ಕೆ ಸಾಕ್ಷಿಗಳು ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂಯಮಶ್ಚ ಅಹಶ್ಚರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚಜಾನಾತಿ ನರಸ್ಯ ವೃತ್ತಮ್




———

೫೦. ದಾನಶಾಸನ.—ಹೇವಿಳಂಬಿ, ಚೈತ್ರ ಶು. ೧೨, ಶಾ. ಶ. ೧೫೭೯, ಕ್ರಿ. ಶ. 1657.




ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷ ೧೫೭೯ನೆಯ ಹೇವಿಳಂಬಿ ಸಂವತ್ಸರದ ಚೈತ್ರ ಶುದ್ಧ ೧೨ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛ್ಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರುಶನ ಸ್ಥಾಪನಾಚಾರ್ಯ ಯೋಗನಿರತರಾದ ಶೃಂಗೇರಿ ಶ್ರೀ ವಿದ್ಯಾರಣ್ಯ ಭಾರತೀ ಸ್ವಾಮಿಗಳ್ವೈಯ್ಯನವರಿಗೆ

ಶ್ರೀಮತ್ ಸಂತೇ ಬೆನ್ನೂರು ರಾಮಚಂದ್ರ ದೇವರ ಪಾದ ಪದ್ಮಾರಾಧಕರಾದ ಹನುಮಂತ ದೇವರ ನಿಜ ಭಕ್ತನಾದ ಪೂವಲಾನ್ವಯದ ಯಿಮ್ಮಡಿ ಹನುಮಪ್ಪನಾಯಕರ ಪೌತ್ರನಾದ ನಿಜಮುದವಣಿಗ ಹನುಮಪ್ಪನಾಯಕರ ಪುತ್ರನಾದ ಸರ್ಜಾ ಹನುಮಪ್ಪ ನಾಯಕರು ಬರಸಿಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂಧರೆ ಆರಗದ ವೇಂಠೆಕ್ಕೆ ಸಲ್ಲುವ ಆಯಿನೂರು ಶೀಮೆ ವಳಿತವಾದ ಮಲಳ ಗೊಪ್ಪದ ಗ್ರಾಮವನ್ನು ಯಿ ಚೈತ್ರ ನವರಾತ್ರಿಪರುವಣಿ ಪುಣ್ಯ ಕಾಲದಲ್ಲೂ ನಮ್ಮ ಮಾತಾ ಪಿತೃಗಳಿಗೆ ಅಕ್ಷಯ ಪುಣ್ಯಲೋಕ ಆಗಲಿ ಎಂದು ಸಹಿರಣ್ಯೋದಕ ದಾನ ಧಾರಾ ಪೂರ್ವಕವಾಗಿ ನಮ್ಮ ಹಿರಿಯರು ತುಂಗಭದ್ರಾ ಸಂಗಮದ ಕೂಡಲೀ ಕ್ಷೇತ್ರದಲ್ಲಿ ಕಟ್ಟಿಸಿ ಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆ ರಾಮಾರ್ಪಣ ಮಾಡಿಕೊಟ್ಟು ಯಿದ್ದೇವೆ. ಈ ಗ್ರಾಮಕ್ಕೆ ಸಲ್ಲುವ ಚತುರ್ಗಡಿ ವಳಗುಳ್ಳ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಆಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟ ಭೋಗ ತೇಜಃ ಸಾಮ್ಯವನ್ನು ತಮ್ಮ ಶಿಷ್ಯ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರಬೇಕು. ನಮ್ಮ ಪುತ್ರ ಪಾರಂಪರ್ಯವಾಗಿ ಯಿ ಧರ್ಮವನ್ನು ನಡಸಿಕೊಟ್ಟೇವು ಎಂದು ಬರಸಿಕೊಟ್ಟ ಭೂದಾನ ಪಟ್ಟಿ ಯಿದಕ್ಕೆ ಸಾಕ್ಷಿಗಳು ದೇವಸಾಕ್ಷಿ ಆದಿತ್ಯಚಂದ್ರೋವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಸ್ಯ ಜಾನಾತಿ ನರಸ್ಯ ವೃತ್ತಂ ॥




---

೫೧. ದಾನಶಾಸನ.—ಹೇವಿಳಂಬಿ, ಕಾರ್ತೀಕ ಶು. ೧೨, ಶಾ. ಶ. ೧೫೭೯, ಕ್ರಿ. ಶ. 1657.




ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೇ।
ತ್ರೈರೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನಶಕ ವರುಷ ೧೫೭೯ನೇ ಹೇವಿಳಂಬಿ ನಾಮಸಂವತ್ಸರದ ಕಾರ್ತೀಕ ಶುದ್ಧ ೧೨ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ ಪದವಾಕ್ಯ ಪ್ರಮಾಣ. ಪಾರಾವಾರಪಾರೀಣ ಯಮನಿಯಮಾಸನ ಪಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗನಿರತರಾದ ಶ್ರಿಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀನರಶಿಂಹದಾರತೀಸ್ವಾಮಿಗಳಯ್ಯನವರ ಕರ ಕಮಲಸಂಜಾತರಾದ ಶ್ರಿಂಗೇರಿ ಶ್ರೀ ವಿದ್ಯಾರಣ್ಯ ಭಾರತಿ ಸ್ವಾಮಿಗಳಯ್ಯನವರಿಗೆ.

ಶ್ರಿಮತ್ ಸಂತೇ ಬೆನ್ನೂರು ಶ್ರೀ ರಾಮಚಂದ್ರದೇವರ ಪಾದಪದ್ಮಾರಾಧಕರಾದ ಹನುಮಂತದೇವರ ನಿಜಭಕ್ತರಾದ ಪೂವಲಾನ್ವಯದ ಯಿಮ್ಮಡಿ ಹನುಮಪ್ಪನಾಯಕರ ಪೌತ್ರರಾದ ನಿಜಮದವಣಿಗ ಹನುಮಪ್ಪ ನಾಯಕರ ಪುತ್ರರಾದ ಸರ್ಜಾಹನುಮಪ್ಪ ನಾಯಕರು ಬರಸಿಕೊಟ್ಟ ಭೂದಾನಪಟ್ಟಿ. ಕ್ರಮವೆಂತೆಂದರೆ ॥ ನಮ್ಮ ರಾಜ್ಯಕ್ಕೆ ಸಲ್ಲುವ ಬಸವಾಪಟ್ಟಣದ ಶೀಮೆಯ ಹೋಬಳಿ ವಳಗಣ. ಅಜ್ಜಂಪುರಕ್ಕೆ ಸಲ್ಲುವ ಶಿವನೇಸ್ಥಳದ ದಂದೂರ ಗ್ರಾಮವನ್ನು. ಈ ಉಥ್ಥಾನದ್ವಾದಶೀ ಪರ್ವಣಿ ಪುಣ್ಯಕಾಲದಲ್ಲೂ ನಮ್ಮ ಮಾತಾ ಪಿತೃಗಳಿಗೆ ಅಕ್ಷಯ್ಯ ಪುಣ್ಯ ಲೋಕಪ್ರಾಪ್ತಿಯಾಗಲೀ ಎಂದು ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ನಮ್ಮ ಹಿರಿಯರು ತುಂಗಭದ್ರಾ ಸಂಗಮ ಕೂಡಲೀ ಕ್ಷೇತ್ರದಲ್ಲಿ ಕಟ್ಟಿಶಿಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆ ರಾಮಾರ್ಪಣವಾಗಿ ಕೊಟ್ಟು ಇಧೇವೆ ಇದಕ್ಕೆ ಸಲ್ಲುವ ನಿಧಿನಿಕ್ಷೇಪ ಜಲಪಾಶಾಣ ಅಕ್ಷಿಣಿ ಆಗಾಮಿ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗತೇಜಸಾಮ್ಯಗಳನ್ನು ನಿಮ್ಮ ಶಿಷ್ಯ ಪರಂಪರ ನಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಸುಖದಲ್ಲಿ ಇಹದೆಂದು ಬರಸಿ ಕೊಟ್ಟ ಭೂದಾನಪಟ್ಟಿ॥

ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ। ಪರದತ್ತಾ
ಪಹಾರೇಣ ಸ್ವದತ್ತಂ ನಿಸ್ಫಲಂಭವೇತ್॥ ಶ್ರೀ

೩೭ ದಾನಶಾಸನ--ಹೇವಿಳಂಬಿ, ಕಾರ್ತೀಕ ಶು. ೧೫, ಶಾ. ಶ. ೧೫೭೯, ಕ್ರಿ.ಶ. 1657.




ಶ್ರೀ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ॥
ತ್ರೈಲೋಕ್ಯನಗರಾರಂಭ ಮೂಲಸ್ತಂಥಾಯ ಶಂಭವೇ॥

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪಶಾಲೀವಾಹನಶಕ ೧೫೭೯ ನೆಯ ಹೇವಿಳಂಬಿ ಸಂವತ್ಸರದ ಕಾರ್ತೀಕ ಶು. ೧೫ ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನುನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರುಪರಂಪರಾ ಪ್ರಾಪ್ತ ಷಡ್ದರುಶನ ಸ್ಥಾಪನಾಚಾರ್ಯ ಯೋಗನಿರತರಾದ ಶ್ರೀ ಶೃಂಗೇರಿ ವಿದ್ಯಾ ಶಂಕರ ದೇವರ ಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ನರಶಿಂಹಭಾರತೀ ಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ವಿದ್ಯಾರಣ್ಯ ಭಾರತೀ ಸ್ವಾಮಿಗಳವರಿಗೆ—

ಶ್ರೀಮತ್ ಸಂತೆಬೆನ್ನೂರು ರಾಮಚಂದ್ರದೇವರ ಪಾದಪದ್ಮಾರಾಧಕರಾದ ಹನುಮಂತದೇವರ ನಿಜಭಕ ರಾದ ಪೂವಲಾನ್ವಯದ ಯಿಮ್ಮಡಿ ಹನುಮಪ್ಪನಾಯಕರ ಪೌತ್ರನಾದ ನಿಜಮದವಣಿಗ ಹನುಮಪ್ಪನಾಯಕರ ಪುತ್ರನಾದ ಸರಜಾಹನುಮಪ್ಪನಾಯಕರು ಬರಸಿಕೊಟ್ಟ ಭೂದಾನಪಟ್ಟಿ ಕ್ರಮವೆಂತೆಂದರೆ॥ ಆರಗದವೆಂಠಕ್ಕೆ ಸಲ್ಲುವ ಗಂಗೆಮಂಡಲದ ನಾಡವಳಗಿನ ಬಸವಾಪಟ್ಟಣದ ಹೋಬಳಿ ಹೊಳೇ ಹೊನ್ನೂರು ಶೀಮೆಗೆ ಸಲ್ಲುವಾ ಯಡತೊರೇ ಶೀಮೆಯಲ್ಲೂ, ಜಾವಳ್ಳಿ ಗ್ರಾಮ. ೧ ವಂದು ಗ್ರಾಮವನ್ನು ಚಂದ್ರೋಪರಾಗಪರ್ವಣಿ ಪುಣ್ಯಕಾಲದಲ್ಲೂ ನಾವು ಕೂಡಲೀ ತುಂಗಭದ್ರಾ ಸಂಗಮದ ಸ್ನಾನಕ್ಕೆ ಬಂದು ನಮ್ಮ ಮಾತಾಪಿತೃಗಳಿಗೆ ಅಕ್ಷಯಪುಣ್ಯಲೋಕ ಆಗಲಿ ಎಂದು ಸಹಿರಣ್ಯೋದಕ ದಾನಧಾರಾಪೂರ್ವಕವಾಗಿ ನಮ್ಮ ಹಿರಿಯರು ತುಂಗಭದ್ರಾ ಸಂಗಮಕ್ಷೇತ್ರದಲ್ಲು। ಕಟ್ಟಿಸಿ ಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆ ರಾಮಾರ್ಪಣವಾಗಿ ಕೊಟ್ಟುಯಿದ್ದೇವೆ ಅಗ್ರಹಾರ ಬೆಂನವಳ್ಳೀ ಗ್ರಾಮಕ್ಕೆ ಪೂರ್ವದಿಕ್ಕಿನ ಗಡಿಯಲ್ಲೂ ೧ ವೀರಸೋಮೇದೇವರ ಬನದ ಪೂರ್ವ ಮುಖವಾಗಿ ಪ್ರಾಕ್ಕು ಶಂಕರಭಾರತೀ ಸ್ವಾಮಿ ಗಳವರಿಗೆ ಧಾರಾದತ್ತಾ ಮಾಡಿಕೊಟ್ಟ ಭಾರತೀಪಾಲ ಗ್ರಾಮ ೧ರ ರೇಖೆಗ (೧೨) ವರಹಾದ ಭೂಮಿಯನ್ನೂ ನಮ್ಮ ಹಿರಿಯವರು ರಾಮಾರ್ಪಣಮಾಡಿಕೊಟ್ಟು ಇದ್ದಲ್ಲಿ ಈ ಬಗ್ಗೆ ಪಟ್ಟೇ ಬರಸಿಕೊಡಲಿಲ್ಲವೆಂದು ಹೇಳಿದ್ದರಿಂದ ಈ ಭಾರತೀಪಾಲು ಗ್ರಾಮ ೧ರ ಮೇಲೆ ಧಾರಾದತ್ತ ಮಾಡಿಕೊಟ್ಟ ರೇಖೆಗ (೧೨) ಹನ್ನೆರಡು ವರಹಾದ ಭೂಮಿಯನ್ನು ರಾಮಾರ್ಪಣ ಮಾಡಿಕೊಟ್ಟು ಇದ್ದೇವೆ ಉಭಯಂ ಗ್ರಾಮ ೨ಕ್ಕೆ ಸಲ್ಲುವ ನಿಧಿನಿಕ್ಷೇಪಜಲ ಪಾಷಾಣ ಅಕ್ಷಿಣ್ ಆಗಾಮಿ, ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜಃಸಾಮ್ಯವನ್ನು ನೀವು ನಿಮ್ಮ ಶಿಷ್ಯಪಾರಂಪರ್ಯವಾಗಿ ಅನುಭವಿಸಿಕೊಂಡು ಬರ ಬೇಕುಃ ನಾವು ನಮ್ಮ ಪುತ್ರ ಪೌತ್ರ ಪಾರಂಪರ್ಯ ಈ ಧರ್ಮ ನಡೆಸಿಕೊಟ್ಟೇವು. ಎಂದು ಬರಸಿಕೊಟ್ಟ ಭೂದಾನಪಟ್ಟಿ॥ ಇದಕ್ಕೆ ಸಾಕ್ಷಿ ದೇವಸಾಕ್ಷಿ ಆದಿತ್ಯ ಚಂದ್ರಾವನಿಲೋನಲಶ್ಚ ದ್ಯೌರ್ಭೂಮಿ ರಾಪೋ ಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇಧರ್ಮಶ್ಚ ಜಾನಾತಿ ನರಸ್ಯವೃತ್ತಮ್॥ ಶ್ರೀರಾಮ.

———

೫೩. ದಾನಶಾಸನ.—ವಿಳಂಬಿ, ಆಶ್ವಯುಜ ಶು. ೧೫, ಶಾ. ಶ. ೧೫೮೦, ಕ್ರಿ. ಶ. 1658.

श्री
पुत्रसरजा
हनुमप्पनायकरु

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪಶಾಲೀವಾಹನಶಕ ೧೫೮೦ ನೆಯ ವಿಳಂಬಿ ಸಂವತ್ಸರದ ಆಶ್ವಯುಜ ಶು. ೧೫ ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರುಪರಂಪರಾ ಪ್ರಾಪ್ತಷಡ್ದರ್ಶನ ಸ್ಥಾಪನಾಚಾರ್ಯ ಯೋಗನಿರತರಾದ ಶೃಂಗೇರಿ ಶ್ರೀ ನರಶಿಂಹಭಾರತೀ ಸ್ವಾಮಿಗಳೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ವಿದ್ಯಾರಣ್ಯ ಭಾರತೀಸ್ವಾಮಿ ಗಳೈಯ್ಯನವರಿಗೆ.—

ಶ್ರೀಮತ್ ಸಂತೇಬೆನ್ನೂರ ರಾಮಚಂದ್ರದೇವರ ಪಾದಪದ್ಮಾರಾಧಕರಾದ ಹನುಮಂತದೇವರ ನಿಜಭಕ್ತನಾದ ಪೂವಲಾನ್ವಯದ ಯಿಮ್ಮಡಿ ಹನುಮಪ್ಪನಾಯಕರ ಪೌತ್ರನಾದ ನಿಜಮದವಣಿಗ ಹನುಮಪ್ಪ ನಾಯಕರ ಪುತ್ರನಾದ ಸರಜಾಹನುಮಪ್ಪ ನಾಯಕರು ಬರಸಿಕೊಟ್ಟ ಭೂದಾನ ಪಟ್ಟಿ. ಕ್ರಮವೆಂತೆಂದರೆ. ಆರಗದ ವೆಂಠ್ಯಕ್ಕೆ ಸಲ್ಲುವ ಹಾರ ನಹಳ್ಳಿ ಶೀಮೆಗೆ ವಳ್ಳಿತ್ತವಾದ ಹಂಗರಹಾಳ ಗ್ರಾಮವನ್ನು ನಾವು ಬಿದನೂರು ರಾಜ್ಯವ ರಾಮಚಂದ್ರಪುರದ ಪರಿಯಂತ್ರ ರಾಜ್ಯವಕಟ್ಟಿಕೊಂಡು ಬಂದ ನಿಮಿತ್ಯದಿಂದಲೂ ಈಮಹಾನೋರ್ಮಿಉತ್ಸವವಕೂಡಲೀ ಶೃಂಗೇರಿ ಮಠದಲ್ಲೂ ನಡೆವ ಮಹೋತ್ಸವಕ್ಕೆ ಸಹಾ ನಮ್ಮ ಹಿರಿಯರು ಈ ಕೂಡಲೀ ತುಂಗಭದ್ರಾ ಸಂಗಮಕ್ಷೇತ್ರದಲ್ಲೂ, ನಮ್ಮ ಹಿರಿಯರು ಕಟ್ಟಿಸಿ ಕೊಟ್ಟ ಮಠದ ಧರ್ಮಕ್ಕೆ ನಮ್ಮ ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಆಗಲಿ ಎಂದು ಸಹಿರಣ್ಯೋದಕದಾನ ಧಾರಾಪೂರ್ವಕವಾಗಿ ಈ ಗ್ರಾಮವನ್ನು ರಾಮಾರ್ಪಣಮಾಡಿ ಧಾರೆನೆರೆದುಕೊಟ್ಟು ಯಿಧೇವೆ.॥ ಈ ಗ್ರಾಮಕ್ಕೆ ಸಲ್ಲುವ ಚತುರ್ಗಡಿವಳಗುಳ್ಳ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣೀ ಆಗಾಮಿ॥ ಸಿದ್ದಸಾಧ್ಯಂಗಳೆಂಬ ಅಷ್ಟ ಭೋಗತೇಜ ಸಾಮ್ಯವನ್ನೂ ನೀವು ನಿಮ್ಮ ಶಿಷ್ಯಪಾರಂಪರ್ಯವಾಗಿ ಸುಖದಿಂದ ಅನುಭವಿಸಿಕೊಂಡು ಬರಬೇಕು। ನಾವು ನಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಈ ಧರ್ಮವನ್ನು ನಡಿಸಿಕೊಟ್ಟೇವು ಯೆಂತ ಬರಸಿಕೊಟ್ಟ ಭೂದಾನ ಪಟ್ಟಿ। ಇದಕ್ಕೆ ಸಾಕ್ಷಿ ಗಳು "ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಶ್ಚ ಜಾನಾತಿ ನರಸ್ಯವೃತ್ತಂ॥ ಶ್ರೀ ॥

श्री
राम

———

೫೪. ರೇಖನ.—(ಸುಮಾರು) ಕೀಲಕ, ಶಾ. ಶ. ೧೫೯೧, ಕ್ರಿ. ಶ. 1668.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ। ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರುಶನ ಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕಮಾರ್ಗಪ್ರವರ್ತಕ। ಸರ್ವತಂತ್ರ ಸ್ವತಂತ್ರ ಆದಿರಾಜಧಾನಿ ವಿದ್ಯಾನಗರಿ ಮಹಾರಾಜಧಾನಿ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ನರಸಿಂಹಭಾರತೀ ಸ್ವಾಮಿಗಳಿಗೆ.

ಸಂಥೇಬೆನ್ನೂರು ಹನುಮಪ್ಪ ನಾಯಕರೂ ಮಾಡುವ ಬಿನ್ನಹ। ಅದಾಗಿ॥ ನಿಮ್ಮ ಆಶೀರ್ವಾದದ ಕೃಪಾ ಕಟಾಕ್ಷದಿಂದ ನಾವೂ ಪರಿಣಾಮದಲ್ಲಿದ್ದೇವೆ. ಸಾಮಿಗಳವರ ಕ್ಷೇಮಸಮಾಚಾರಕ್ಕೆ ಬರಸಿಕಳುಹಿಸ್ತ ಆಶೀರ್ವಾದ ಪತ್ರಿಕೆಯಿಂದೆಲ್ಲಾ ನೋಡಿಕೊಂಡು ವೋದಿಸಿಕೇಳಿ ಅನೇಕಸಂತೋಷವಾಯಿತು ನಮ್ಮ ಕಾರ್ಯ ಉತ್ತರೋತ್ತರವಾಹ ಗೀತಿಗೆ ತಪಸ್ಸು ಮಾಡುತ್ತಿದ್ದಾರೆಂದು ಮಠಧರ್ಮಕ್ಕೆ ನಡದು ಬಾಹಂಥ ಗ್ರಾಮಗಳು: ದಂದೂರು ಲಿಂಗಲಾಪುರ ದೇಮಲಾಪುರದ ಗ್ರಾಮಗಳಿಂದ ಬಾಹವರ್ತನೆಯ ಹಣವನ್ನು ಮಠಧರ್ಮಕ್ಕೆ ನಡಸುವದು ಎಂದು ಕಟ್ಟುಮಾಡಿಸಿ ಥೇವೆ ಸ್ವಾಮಿಗಳು ನಮ್ಮಮೇಲೆ ತಾತ್ಪರ್ಯದಿಂದ ಆಶೀರ್ವಾದವ ಮಾಡಿ ಕಳುಹಿಸ್ತಾ ಉಡುಗೊರೆಯನ್ನು ತೆಗೆದು ಕೊಂಡೆ ಉ ವ್ಯಾಸಾಕ್ಷತೆ ವಿಭೂತಿ ಪ್ರಸಾದವೂ ಮುಟ್ಟಿತು. ಯೀ ಅಭಿಪ್ರಾಯ ಮುಂತಾಗಿ ಚನ್ನಿಭಟ್ಟರು ಶ್ಯಾಮ ಭಟ್ಟನು ಬಿನ್ನಹಮಾಡಲಾಗಿ ಅಂತಃಕರಣಕ್ಕೆ ತಾಹಾಗೆ ಮಾಡುವದಾಗಿ.




೫೫. ರೇಖನ.—ಕೀಲಕ, ವೈಶಾಖ ಶು. ೩, ಶಾ. ಶ. ೧೫೯೧, ಕ್ರಿ. ಶ. 1668.

ಕೀಲಕ ಸಂವತ್ಸರ ವೈಶಾಖ ಶು. ೩ ಲ್ಲೂ ಶ್ರೀ ಮಂತ್ಸಂಥೆಬೆನ್ನೂರ ಹನುಮಪ್ಪ ನಾಯಕರು ಚನವೀರಣ್ಣಗೆ ಬರಸಿ ಕಳುಹಿಸಿದಕಾರ್ಯ. ಕೂಡಲೀಕ್ಷೇತ್ರದಲ್ಲಿ ಇರುವ ಶೃಂಗೇರಿ ಮಠದ ಧರ್ಮಕ್ಕೆ ಕೊಟ್ಟಿದ್ದ ಗಾಜನೂರು ಶೀಮೆ ಹೆರಕೆರಿ ಪಂಚಗ್ರಾಮವನ್ನು ಅವರು ದೂರದೇಶ ಹೋಗಿದ್ದಾಗ ಶೃಂಗೇರಿ ಕ್ಷೇತ್ರದಲ್ಲಿ ಯಿಹ ಶ್ರೀ ಗಳ ಬಗೆಯವರು ಬಂದು ತಮಗೆ ಸಲ್ಲಬೇಕೆಂದು ಹೇಳಿಕೊಂಡ ಸಂಬಂಧ ಆ ಪಂಚಗ್ರಾಮವ ತಡದು ಯಿತ್ತಲ್ಲಾ ಆ ಬಗ್ಗೆ ಕೂಡಲೀ ಕ್ಷೇತ್ರದಲ್ಲಿ ಯಿಹ ಶೃಂಗೇರಿ ಶ್ರೀ ....ಗಳು ಬಂದು ಹೇಳಿದ್ದರಿಂದ ವಿಚಾರಮಾಡಿ ಕೂಡಲ ಕ್ಷೇತ್ರದಲ್ಲಿ ಯಿಹ ಶೃಂಗೇರಿಯವರೆ ಅವಿಭಿನ್ನವಾಗಿ ಅನುಭವಿಸಿದವರಾದ್ದರಿಂದ ಯಿವರಿಗೆ ನಡಿಸಿಕೊಂಡು ಬಾಹದು. ಈ ಕಾಗದ ಪ್ರತಿಯನ್ನು ಶ್ಯಾನುಭೋಗರ ಕಡಿತಕ್ಕೆ ಬರಸಿ ತಿರುಗಿ ಕೊಡೋದಾಗಿ.

೫೬. ರೇಖನ—ಕಾಳಾಯುಕ್ತಿ, ಪುಷ್ಯ ಶು. ೧೫, ಶಾ. ಶ. ೧೬೦೦, ಕ್ರಿ. ಶ 1678

*ಶಂಕರಭಾರತೀಸ್ವಾಮಿಗಳವರ

c। ಕಾಳಾಯುಕ್ತಿಸಂವತ್ಸರದ ಪುಷ್ಯ ಶು ೧೫ಲ್ಲೂ ಶ್ರೀಮತ್ಸಂಥೇಬೆನ್ನೂರ ಹನುಮಪ್ಪನಾಯಕರೂ ತೋಟಿಗೆ ಬರಸಿ ಕಳುಹಿಸಿದ ಕಾರ್ಯ ಕೂಡಲಿಯಲ್ಲಿಹ ಶೃಂಗೇರಿ ಶ್ರೀ * ಮಠದ ಧರ್ಮಕ್ಕೆ ಅಮ್ಮನವರ ನವರಾತ್ರಿ

* ಇಲ್ಲಿ ಅನ್ವಯಿಸಬೇಕಾದ ಶ್ರೀ ಸ್ವಾಮಿಗಳವರ ಹೆಸರನ್ನು ಹಿಂದಿನ ಸಂಪ್ರದಾಯನುಸಾರ ಗೌರವಾರ್ಥವಾಗಿ ರೇಖನ ಮೇಲ್ಭಾಗದಲ್ಲಿ ಬರೆದಿರುತ್ತದೆ.

ಸೇವೇ ಬಗ್ಗೆ ನಮ್ಮ ರಾಜ್ಯಕ್ಕೆ ಸಲುವ ಕಾತ್ತೂರಶೀಮೆಯೊಳಗಣ. ಚಿಕ್ಕಾತ್ತೂರ ಸ್ಥಳದ ದೇಮಪುರದ ಗ್ರಾಮದಲ್ಲಿ ಗ. ೩೦ ವರಹ ನಡೆದುಬರುತ್ತಿದ್ದದು ಸರಿಯುಷ್ಟೆ. ಅಮ್ಮನವರ ನವರಾತ್ರೆ ಸೇವೆಯೂ ಸಾಂಗವಾಗಿ ನಡೆಯಬೇಕೆಂಬುದರಿಂದ ಹೊಸ್ತಾಗಿ ಗ. ೨೦ ವರಹಾಕ್ಕೆ ಅಪ್ಪಣೆಕೊಟ್ಟು ಕಾಲಕಾಲಕ್ಕೂ ಗ ೫೦ ವರಹನ್ನು ನಡದು ಬಾಹ ರೀತಿ ಕಟ್ಟಳೆಮಾಡಿಸಿ ಅದೆ. ಆ ರೀತಿಗೆ ದೇಮಪುರಗ್ರಾಮದಲ್ಲಿ ಕಾಲಕಾಲಕ್ಕೆ ಸಾರೋದ್ಧಾರವಾಗಿ ಗ ೫೦ ವರಹಾನ ಕೊಟ್ಟು ಬಾಹದು. ಈ ಕಾಗದವನ್ನು ಅರಮನೆ ಕಡಿತಕ್ಕೆ ಬರಸಿ. ತಿರುಗಿ ಇವರ ವಶಕ್ಕೆ ಕೊಡುವದಾಗಿ

श्री
राम

---

೫೭. ಲೇಖನ.—ಸಿದ್ಧಾರ್ಥಿ, ಆಷಾಢ ಶು. ೩, ಶಾ. ಶ. ೧೬೦೧ ಕ್ರಿ. ಶ. 1679.

[1]ನರಸಿಂಹಭಾರತೀಸ್ವಾಮಿಗಳವರು.

[2]ಶಂಕರಭಾರತೀಸ್ವಾಮಿಗಳವರು. . . . . .

ಸಿದ್ಧಾರ್ಥಿಸಂವತ್ಸರದ ಆಷಾಢ ಶು. ೩ ಲ್ಲೂ. ಶ್ರೀಮತ್ ಸಂತೇಬೆನ್ನೂರು ಸೀತಾರಾಮಪ್ಪನಾಯಕರೂ ಮರಿವೀರಣ್ಣಗೆ ಬರಸಿ ಕಳುಹಿಸಿದ ಕಾರ್ಯ । ಕೂಡಲೀಕ್ಷೇತ್ರದಲ್ಲಿಹ ಶೃಂಗೇರಿಮಠ ಧರ್ಮಕ್ಕೆ ಕೊಟ್ಟಿದ್ದ ದೇಮಪುರ ಗ್ರಾಮವನ್ನು ಶ್ರೀ॥*[1] ॥ ಅಗ್ರಹಾರವನ್ನು ಮಾಡಿದರು ಮಧ್ಯದಲ್ಲಿ ಆ ಗ್ರಾಮವ ಪುಟ್ಟಭಟ್ಟರು ತಮ್ಮಾಭಟ್ಟರ ವಶವಮಾಡಿದ್ದರಿಂದ ಬ್ರಾಹ್ಮಣರಿಗೆ ಸಮರ್ಪಕವಾಗಿ ನಡವದಿಲ್ಲಾ । ಗ್ರಾಮವ ತಮ್ಮಾಧೀನಮಾಡಿದಲ್ಲಿ ಗುರುಗಳು ಮಾಡಿದ ಧರ್ಮಸಮರ್ಪಕವಾಧೀತೆಂದು ॥*[2] ॥ ಆಡಿದ್ದ ಕುರಿತು. ಆ ದೇಮಾಪುರ ಗ್ರಾಮವನ್ನು ಶ್ರೀ॥[2] ॥ ರಿಗೆ ಕೊಟ್ಟಿದ್ದೇವೆ. ಅಗ್ರಹಾರವ ಇವರು ನಡಶಿಬಂಧಾರು ಅದೇರೀತಿಗೆ। ಗ್ರಾಮಾನ ಹವಾಲೇಮಾಡಿಕೊಟ್ಟು ಸುರಕ್ಷಿತದಲ್ಲಿ ನಡಶಿಬಾಹದು ಈ ಕಾಗದವ ಶಾನಭೋಗರ ಕಡಿತಕ್ಕೆ ಬರಸಿ. ತಿರುಗಿ ಯಿವರವಶಕ್ಕೆ ಕೊಡುವದಾಗಿ

श्री
राम

---

೫೮. ಲೇಖನ.—ದುಂದುಭಿ, ಆಶ್ವಿಜ ಶು. ೧೪, ಶಾ. ಶ. ೧೬೦೪, ಕ್ರಿ. ಶ. 1682.

[2] ಸಚ್ಚಿದಾನಂದಭಾರತೀ [1] ವಿದ್ಯಾರಣ್ಯಭಾರತಿ [3] ಶಂಕರಭಾರತಿ.

॥ ದುಂದುಭಿಸಂವತ್ಸರದ ಆಶ್ವಯುಜ ಶು ೧೪ ಲ್ಲೂ ಶ್ರೀಮತ್ಸಂತೇಬೆನ್ನೂರ ಸೀತಾರಾಮಪ್ಪನಾಯಕರು ಮಲಿವೀರಣ್ಣಗೆ ಬರಶಿಕಳುಹಿದಕಾರ್ಯ . . . ಕೂಡಲೀಕ್ಷೇತ್ರದಲ್ಲಿಹ ಶೃಂಗೇರಿಮಠದ ಧರ್ಮಕ್ಕೆ ಶ್ರೀ।[1] . . . ಸ್ವಾಮಿಗಳಿಗೆ ನಮ್ಮ ಅಯ್ಯನವರು ಯರನಾಡುಶೀಮೆವಳಗಣ ದಂದೂರ ಗ್ರಾಮವ ಧಾರಾದತ್ತಮಾಡಿಕೊಟ್ಟು ನಡೆದುಬರುತ್ತಿದ್ದಲ್ಲಿ। ಆ ಸ್ವಾಮಿಗಳು. ಮುಕ್ತರಾದ ಸಂಬಂಧ. ಬಿಟ್ಟಿದ್ದ ಸ್ವಾಸ್ಥೆ ಅರಮನೆ ಹೊಂದಬಾರದೆಂದು ಯೋಚಿಸಿದ್ದಲ್ಲಿ. ಶೃಂಗೇರಿಯಲ್ಲಿಹ ಶ್ರೀ[2] . . . . . ಸ್ವಾಮಿಗಳು ಹೇಳಿಕಳುಹಿದಲ್ಲಿ ಅಗ್ಗ್ರ ದತ್ತಭೂಮಿಯವನ್ನು. ಅವರ ವಶವಮಾಡಿರಲಾಗಿ। ತರುವಾಯ. ಕೂಡಲೀಕ್ಷೇತ್ರದಲ್ಲಿಹ. ಶೃಂಗೇರಿಪೀಠದ ಮಠದವರಿಗೂ। ಅವರಿಗೂ। ಈ ಗ್ರಾಮದ ಬಗ್ಗೆ ವ್ಯವಹಾರಬಂದಲ್ಲಿ. ತಡವಿಟ್ಟಿತ್ತಲ್ಲಾ। ಸಾಂಪ್ರತ। ಈ ಪೂರ್ವೋತ್ತರಕ್ಕೆ ನಮ್ಮ ಅಯ್ಯನವರು. ದಂದೂರಗ್ರಾಮವ ಕೂಡಲೀಕ್ಷೇತ್ರದಲ್ಲಿಹ ಶೃಂಗೇರಿ ಮಠ ಕತ್ತೃ ಶ್ರೀ॥[3] ॥ ಸ್ವಾಮಿಗಳಿಗೆ ನಡಸಿಬರಬೇಕೆಂದು। ಆಶೀರ್ವಾದ ಪತ್ರಿಕೆ ಬರಸಿ. ಕಳುಹಿದ್ಧರಿಂದಲೂ ಪೂರ್ವಪ್ರಮಾಣಅಹುದಾದ್ದರಿಂದಲು ಇವರಿಗೆ ಆ ದಂದೂರು ಗ್ರಾಮವ ಕೊಟ್ಟಿದ್ಧೇವೆ. ಗ್ರಾಮವನ್ನು ಇವರ ಬಗೆ ಮನುಷ್ಯರ ಆಧೀನಮಾಡಿಕೊಟ್ಟು

ಮಠ ಧರ್ಮ ಸುರುಕ್ಷಿತದಲ್ಲ ನಡೆವರೀತಿಗೆ ನಿರುಪದ್ರದಲ್ಲಿ ನಡೆಸಿಬಾಹದು. ಈ ಕಾಗದವ ಶ್ಯಾನಭೋಗನ ಕಡಿತಕ್ಕೆ ಬರೆಸಿ ತಿರುಗಿ ಇವರ ವಶಕ್ಕೆ ಕೊಡುವದಾಗಿ




---

*೫೯. ಲೇಖನ.—(ಸುಮಾರು) ಕ್ರೋಧನ, ಶಾ. ಶ. ೧೬೦೭, ಕ್ರಿ. ಶ. 1685.

[1] ವಿದ್ಯಾರಣ್ಯಭಾರತಿ ಸ್ವಾಮಿ
ಗಳ್ಯೆಯ್ಯನವರ
[2] ಶಂಕರಭಾರತಿಸ್ವಾಮಿಗಳ್ಯೆಯ್ಯನವರ

[3] ರಾಜೇಶ್ರಿ ಮಹದಾಜಿಪಂಡಿತರವರಿಗೆ

ಶ್ರೀಮತ್ಸಕಲಗುಣಸಂಪನ್ನರಾದ ರಾಜಮಾನ್ಯ।3 । ಸಂತೇಬೆನ್ನೂರ ಸೀತಾರಾಮಪ್ಪನಾಯಕರು ಮಾಡುವ ರಾಮುರಾಮು ನಾವು ಪರಿಣಾಮದಲ್ಲಿದ್ದೇವೆ. ನಿಮ್ಮ ಪರಿಣಾಮಕ್ಕೆ ತಾತ್ಪರ್ಯದಿಂದ ಬರಸಿಕಳು ಹಿಸ್ತಾ ಬಾಹಾಗೆ ಮಾಡುವದು ನಿಮ್ಮ ಕೀರ್ತಿಪ್ರಭಾವ ಗುಣಾತಿಶಯಂಗಳನೂ ಕೇಳಿ ಬಹಳ ಸಂತೋಷವಾಯಿತು. ಬಸವಾಪಟ್ಟಣದ ರಾಷ್ಟ್ರ ಅನಾದಿಯಾರಭ್ಯ ಪರಂಪರಾ ನಮ್ಮದಾಗಿ ನಡದೂ. ಹರಶೇಷೆಗೆ ನಮ್ಮ ಪಿತಾ ಮಹಾನಿಷ್ಟ ಮುದವಣಿಗ ಹನುಮಪ್ಪನಾಯಕರೂ ಶ್ರಮಪಟ್ಟು ಲಭ್ಯಕಾರ್ಯವನ್ನು ಆಗಮಾಡಿಸಿಕೊಟ್ಟು ದಿಗ್ದೇಶ ದಲ್ಲೂ ಪ್ರಖ್ಯಾತವಾದ ಪ್ರವರ್ತಕ ನಿಮಗೆ ಶೃತವಾಗಿ ಇದ್ಧೀತು ತರುವಾಯ ಕಾಲಮಹಿಮೆಯಿಂದ ರಾಜ್ಯವು ಅನ್ಯಾಕ್ರಾಂತವಾಗಿ ಹೋಗಿದ್ದಲ್ಲಿ. ಫಲಿತವಾಹವ್ಯೇಳ್ಯೆ ಬಂದದ್ದರಿಂದ ಆ ಸ್ಥಳವೂ ನಿಮ್ಮಾಧೀನವಾಗಿದ್ದಿತ್ತು ಪರೋಪಕಾರಾಯ. ಸತಾಂ ಶರೀರ ಯಂಬರೀತಿ ತಿಳಿದು. ಪಾತುಶಹಾರಂಥ, ದೊಡ್ಡವರಿಗೆ ಮನಸಾಭೀಷ್ಟ ಪೂರೈಶಿ ನಡಸುತ್ತಿಹಲ್ಲಿ ನಮ್ಮ ಸ್ಥಳವ ಅನುಕೂಲಮಾಡಿಕೊಡುವದು. ನಿಮಗೆ ಲಕ್ಷವಲ್ಲವಲ್ಲ. ಹೀಗಿದ್ಧಲ್ಲಿ ನೂತನವಾಗಿ ಬರಸುವಂಥಾದೇನದೆ. ಕೂಡಲೀಕ್ಷೇತ್ರದಲ್ಲಿಹ ಶೃಂಗೇರಿ ಮಠಕ್ಕೆ ಶ್ರೀ।1 ಗೆ ನಮ್ಮ ಹಿರೇರು ಯರನಾಡ ಶೀಮೆಯೊಳಗಣ ದಂದೂರು ಗ್ರಾಮವ ಧಾರಾಪೂರ್ವಕವಾಗಿ ದಾನಪತ್ರ ಬರಸಿಕೊಟ್ಟ ಇದ್ದದರಿಂದ ಅವರು ಅನುಭವಿಸಿಕೊಂಡು ಬರುತ್ತಿರಲಾಗಿ ಮಧ್ಯದಲ್ಲ ಅವಾಂತ್ರದೊಳಗೆ ತಟಸ್ತವಾಗಿತ್ತು! ಇತ್ತಲಾಗಿ ನಮ್ಮ ಸಮಿಾಪಕ್ಕೆ ಆ ಮಠದ ಶಿಂಹಾಸನ ಕರ್ತುರ್ ಶ್ರೀ 2 ಯವರು ಬಂದು ಪೂರ್ವೋತ್ತರಗಳನು ಹೇಳಿದಲ್ಲ ನಿಉ ಬಹು ಭಕ್ತಿಯಿಂದಾ ಅವರನು ಸತ್ಕರಿಸಿ ಆ ಗ್ರಾಮವ ಯಂದಿನರೀತಿ ಸರ್ವಮಾನ್ಯವಾಗಿ ನಡಸೋಹಾಗೆ ಬಸವಾಪಟ್ಟಣ ದಲ್ಲಹ; ಸುಭೇದಾರಗೆ ಅಪ್ಪಣೆಮಾಡಿಸಿ ಕಳುಹಿದ್ದರಿಂದ ಅದೇ ರೀತಿಗೆ ಗ್ರಾಮವನ್ನೂ ಇವರು ತಮ್ಮ ವಶವಮಾಡಿಕೊಂಡು ನಿಮಗೆ ಶ್ರೇಯೋಲಾಭವಾಗಲಿ ಎಂದು ತಪಸ್ಸುಮಾಡಿಕೊಂಡು ಇರುತ್ತಿದ್ದಲ್ಲ ಶೃಂಗೇರಿ ಕ್ಷೇತ್ರದಲ್ಲಹ ಮಠದವರು ಆ ಗ್ರಾಮ ತಮಗೆ ಸಲಬೇಕೆಂದು ನಿಂಮ್ಮ ಸಮಿಾಪಕ್ಕೆ ಹೇಳಿಕಳುಹಿದ್ದಲ್ಲ ಆ ರೀತಿ ಅಪಣೆಮಾಡಿಸಿ ಕಳುಹಿದರೆಂದು ಕೇಳುತ್ತದೆ ದ್ವಿಜಗುರುಪೀಠ ಶ್ರೀ2 ದೆ ಸರಿ. ಹ್ಯಾಗಾದರೂ ಹಿಂದೆ ಕೂಡಲೀಕ್ಷೇತ್ರ ದಲ್ಲಹ ಮಠದ ಧರ್ಮಕ್ಕೆ ಕೊಟ್ಟು ನಡಸಿಬಂದಥೇ. ಆಸೀಮೆ ವಜೀರಿಗೆ ಮುಖಾಸಿಯಾಗಿದ್ದಾಗಲೂ ಇವರೇ ಅನುಭವಿಸಿಕೊಂಡುಬಂದು ಇದ್ದಾರೆ ಆ ಗ್ರಾಮ ಇವರದಲ್ಲದೆ ಆ ಮಠದವರಿಗೆ ಸಂಬಂಧವಿಲ್ಲ ಸ್ವದತ್ತಾದ್ವಿಗುಣಂ. ಪುಣ್ಯಂ. ಪರದತ್ತಾನುಪಾಲನಂ ಯಂಬದನಿರೀಕ್ಷಿಸಿ. ಶ್ರೀ2 ಗೆ ಮಾಡಿಕೊಟ್ಟದ್ದೇ ವಿಥೇಯವಾಗಿದ್ದ ಮೇಲೆ ನೂತನಪ್ರವರ್ತಕವನಡಸಿದವರಿಗೆ ಸಲ್ಲದಲ್ಲಾ। ಶ್ರೀ 2 ಮಹಾನುಭಾವರು ಈಗ ನಿಮಗೆ ಆಶಿ ರ್ವಾದಪತ್ರಿಕೆಯನ್ನು ಬರಸಿ. ತಮ್ಮ ಸಮಿಾಪದಿಂದ ಕಳುಹುವಂಥಾವರನ್ನು ಕಳುಹಿಸಿಯಿದ್ದಾರೆ ನೀವು ಸಕಲವನು ಬಲ್ಲ. ಅಭಿಜ್ಞರೇ ಇದ್ದೀರಿ ಇವರು ಹೇಳಿದ್ದರಿಂದ ಅಂತಃಕರಣಕ್ಕೆ ತಂದು ಸಮರ್ಪಕವ ಮಾಡಬೇಕಾಗಿ.

---

*ಈ ಲೇಖನವು ಭಾಗಾನಗರ (ಗೋವಳಕೊಂಡ) ದ ದಿವಾನರಾದ ಮಾದಣ್ಣ(ಮಹದಾಜಿ)ಪಂಡಿತರಿಗೆ ಬರೆಯಲ್ಪಟ್ಟಿರುತ್ತ, ಇದಕ್ಕೆ ಕಾಲ ನಮೂದಿಸಿಲ್ಲ. ಎಪಿಗ್ರಾಪಿಕಾಕರ್ನಾಟಿಕಾ ೭ನೇ ವಾಲ್ಯೂಮ್ಮಿನ ಹೊನ್ನಾಳಿ ತಾಲ್ಲೂಕಿನ 104ನೇ ಶಾಸನ ಮತ್ತು ಕೆಳದಿ ನೃಪವಿಜಯ (ಪುಟ ೧೩೫) ಗಳಿಂದ ಬಸವಾಪಟ್ಟಣವು ೧೬೦೭ನೇ ಕ್ರೋಧನಸಂವತ್ಸರ (A. D. 1686) ದಲ್ಲ ಭಾಗಾನಗರಕ್ಕೆ ಸೇರಿತ್ತೆಂದು ತಿಳಿಯಬರುವದರಿಂದ ಮೇಲಿನಕಾಲ ನಮೂದಿಸಿದೆ.

*೬೦. ಲೇಖನ.—ಪ್ರಭವ, ಆಷಾಢ ಶು. ೧೦, ಶಾ. ಶ. ೧೬೦೯, ಕ್ರಿ. ಶ. 1687.

ಶ್ರೀ

ಶ್ರೀ ಶಂಕರಭಾರತಿಸ್ವಾಮಿಗಳೈಯ್ಯನವರ

೦॥ ಪ್ರಭವಸಂವತ್ಸರದ ಆಷಾಢ ಶು ೧೦ಲ್ಲೂ ಶ್ರೀಮತ್ಸಂಥೆಬೆನ್ನೂರ ಹನುಮಪ್ಪನಾಯಕರು ಸೋಮಗೆ ಬರಸಿಕಳುಹಿದ ಕಾರ್ಯ ಕೂಡಲಿಯಲ್ಲಿಹ ಶೃಂಗೇರಿ।* ಮಠಕ್ಕೆ ದೆವಾಪುರಗ್ರಾಮವನ್ನು ರಾವಾರ್ಪಣ ಮಾಡಿ ಚತುರ್ದಿಕ್ಕಿಗೂ, ಶಿಲಾಸ್ಥಾಪಿತವಮಾಡಿಸಿಕೊಟ್ಟು ನಡಸಿಬರುವದು ಸರಿಯಷ್ಟೆ, ಯೀಗ ಆ ಗ್ರಾಮದಿಂದ ಬಾಹ ಆರೇರಪಟ್ಟಿ ಮೊಗಲರಪಟ್ಟಿ, ವರ್ತನೆ, ವರಾಡ ಮುಂತಾಗಿ ವಂದನ್ನೂ ತೆಗೆದುಕೊಳ್ಳದ ರೀತಿಗೆ ಕಟ್ಟಳೆ ಮಾಡಿಸಿ ಸರ್ವಮಾನ್ಯವಾಗಿ ಅಪ್ಪಣೆಕೊಟ್ಟು ಇಥೇವೆ। ಆ ಪ್ರಕಾರ ಆ ಗ್ರಾಮದ ನಿಸಪತ್ತಿ ಹೋಗದ ರೀತಿ ಮಾಡಿ ಈ ಕಾಗದವನ್ನು ಆರಮನೇ ಕಡಿತಕ್ಕೆ ಬರಸಿ ತಿರುಗಿ ಸ್ವಾಮಿಗಳವರ ವಶಕ್ಕೆ ಕೊಡುವದಾಗಿ

---

೬೧. ದಾನಶಾಸನ.—ಭಾವ, ಆಷಾಢ ಕೃ. ೩೦, ಶಾ. ಶ. ೧೭೩೬, ಕ್ರಿ. ಶ. 1814.




ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ । ಹರೇರ್ಲೀಲಾ ವರಾಹಸ್ಯ । ದಂಷ್ಟ್ರಾದಂಡಸ್ಸಪಾತುನಃ । ಹೇಮಾದಿ, ಶಿಖರಾಯತ್ರ ಧಾತ್ರಿ ಛತ್ರ ಶ್ರಿಯಂದಧೌ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷ ೧೭೩೬ನೇ ವರ್ತಮಾನಕ್ಕೆ ಸಲ್ಲುವ ಭಾವನಾಮ ಸಂವತ್ಸರದ ಆಷಾಢ ಬಹುಳ ೩೦ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನ ನಿಷ್ಠತಪಶ್ಚಕ್ರವರ್ತಿ ಅನಾಧ್ಯ ವಿಛಿನ್ನ ಗುರುಪರಂಪರಾ ಪ್ರಾಪ್ತ। ಷಡ್ದರ್ಶನ ಸ್ಥಾಪನಾಚಾರ್ಯ । ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ । ಸಾಂಖ್ಯ ತ್ರಯ ಪ್ರತಿ ಪಾಲಕ। ಸಕಲ ನಿಗಮಾಗಮ ಸಾರ ಹೃದಯ । ವೈದಿಕ ಮಾರ್ಗ ಪ್ರವರ್ತಕ । ಸರ್ವತಂತ್ರಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನಿ। ಕರ್ಣಾಟಕ ಪ್ರತಿಷ್ಠಾಪನಾಚಾರ್ಯ ಶ್ರೀ ಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರೀ ಶ್ರೀ ವಿದ್ಯಾಶಂಕರ ದೇವ ದಿವ್ಯ ಶ್ರೀಪಾದ ಪದ್ಮಾರಾಧಕ ಶೃಂಗೇರೀ ಶ್ರೀ ಶಂಕರ ಭಾರತೀ ಸ್ವಾಮೀನಾಂ ಕರಕಮಲ ಸಂಜಾತ ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ದಿವ್ಯ ಶ್ರೀ ಚರಣಾರವಿಂದಗಳಿಗೆ . . . . .

ಶ್ರೀಮತ್ಸಂತೇ ಬೆನ್ನೂರು ಸರ್ಜಾ ಯಿಮ್ಮಡಿ ಹನುಮಪ್ಪನಾಯಕರ ಪ್ರಪೌತ್ರರಾದ ಸರ್ಜಾಕೃಷ್ಣಪ್ಪನಾಯಕರ ಪೌತ್ರರಾದ ಸರ್ಜಾ ಹನುಮಪ್ಪನಾಯಕರ ಪುತ್ರನಾದ ಸರ್ಜಾ ರಂಗಪ್ಪನಾಯಕನು ಬರಶಿ ಕೊಟ್ಟ ದಾನ ಪಟ್ಟಿ ಆದಾಗಿ ನಮ್ಮ ಹಿರೇರು ತರೀಕೆರೆ ಕಸಬೆ, ದೊಡ್ಡಕೆರೆ ಹಿಂದೆ ಮಾಡಿಸಿಯಿದ್ದಂಥಾ ದೊಡ್ಡ ತೋಟ ಸ್ಥಳ ೧ಕ್ಕೆ ದಾಯ ೧೬೦ ನೂರಯಂಭತ್ತನ್ನು ಚಂದ್ರಮೌಳೀಶ್ವರ ವಿದ್ಯಾಶಂಕರ ದೇವರ ಸೇವಾರ್ಥವಾಗಿ ಸೂರ್ಯೋಪರಾಗ ಪರ್ವಣೀ ಪುಣ್ಯಕಾಲದಲ್ಲೂ ನಮ್ಮ ಪಿತ್ರಾದಿ ಸಮಸ್ತ ಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿ ಆಗಬೇಕೆಂದು ಶ್ರೀರಾಮಾ

ರ್ಪಣವಾಗಿ ವಪ್ಪಿಸಿಯಿದ್ದೇವೆ ಈ ತೋಟದಿಂದ ಉತ್ಪತ್ತಿ ಆದ ಫಲ ಪುಷ್ಪಗಳಿಂದ ದೇವತಾ ಶೇವೆ ಮಾಡಿಸತಕ್ಕದ್ದುದು ಯಂಬದಾಗಿ ಬರಶಿ ಕೊಟ್ಟ ದಾನ ಪಟ್ಟಿ.




---

## * B. ಹರತಿ ನಿಡಗಲ್ಲು ಪಾಳೆಯಗಾರರು.

೬೨. ದಾನಶಾಸನ—ದುಂದುಭಿ, ವೈಶಾಖ ಕೃ. ೩೦, ಶಾ. ಶ. ೧೪೮೬, ಕ್ರಿ. ಶ. 1564.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ । ತ್ರೈಲೋಕ್ಯನಗರಾರಂಭ। ಮೂಲಸ್ತಂಭಾಯಶಂಭುವೇ। ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷ ೧೪೮೬ನೆಯ ದುಂದುಭಿನಾಮ ಸಂವತ್ಸರದ ವೈಶಾಖ ಬಹುಳ ೩೦ ಸೋಮೋಪರಾಗ ಪರ್ವಣಿ ಪುಣ್ಯಕಾಲದಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದ್ಯಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ । ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ। ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠತಪಶ್ಚಕ್ರವರ್ತ್ಯನಾದ್ಯ ವಿಛಿನ್ನ ಗುರುಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ। ಸಕಲ ವೇದಾರ್ಥ ಪ್ರಕಾಶಕ॥ ಸಾಂಖ್ಯತ್ರಯ ಪ್ರತಿಪಾಲಕ। ಸಕಲ ನಿಗಮಾಗಮ ಸಾರಹೃದಯ। ವೈದಿಕ ಮಾರ್ಗ ಪ್ರವರ್ತಕ। ಸರ್ವತಂತ್ರ ಸ್ವತಂತ್ರ ಆದಿ ರಾಜಧಾನೀ ವಿದ್ಯಾನಗರ ಮಹಾ ರಾಜಧಾನೀ। ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ। ಋಷ್ಯಶೃಂಗ ಪುರವರಾವಾಧೀಶ್ವರ। ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀನರಸಿಂಹಭಾರತೀ ಸ್ವಾಮಿಗಳೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿಗಳವರ ಕೂಡಲೀ ಕ್ಷೇತ್ರದಲ್ಲಿಹ। ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ ॥ ಆತ್ರೇಯ ಗೋತ್ರದ ಅಪಸ್ತಂಬ ಸೂತ್ರದ ಯಜುಶ್ಯಾಖಾಧ್ಯಾಯಿಗಳಾದ ಶ್ರೀಮನ್ ಮಹಾ ಮಂಡಲೇಶ್ವರ ಹರತೀ ಸಮೆಟ ಸರ್ಜೆ ಕೃಷ್ಣಪ್ಪರಾಜರವರ ಪೌತ್ರರಾದ ರಂಗಪ್ಪರಾಜರ ಪುತ್ರರಾದ ಸೀರೇದ ರಂಗಪ್ಪರಾಜರವರು ಬರಸಿಕೊಟ್ಟ ಭೂದಾನ ಧರ್ಮ ಶಾಸನ ಕ್ರಮವೆಂತೆಂದರೆ, ಈ ದಿವಸದ ಪುಣ್ಯಕಾಲದಲ್ಲೂ ನಮ್ಮ ಪಿತ್ರಾದಿ ಸಮಸ್ತ ಪಿತೃಗಳಿಗೂ, ವಿಷ್ಣುಸಾಯುಜ್ಯ ಪದವಿ ಆಗಬೇಕೆಂದು ರಾಯದುರ್ಗದವೇಂಟ್ಯಕೆ ಸಲ್ಲುವದೆವಣಾ ಸೀರೆದ ಸೀಮೆ ವಳಗೆ ಸಲ್ಲುವ ಬರನೂರ ಕೆಳಗಣ ಗಗ್ಗರ ಹೊಸಹಳ್ಳಿ ಗ್ರಾಮವನ್ನು ಸಹಿರಣ್ಯೋಧಕ ದಾನ ಧಾರಾ ಪೂರ್ವಕವಾಗಿ ತ್ರಿವಾಚ ತ್ರಿಕರಣ ಯುಕ್ತದಿಂದ ಧಾರೆಯ ನೆರೆದು ಕೊಟ್ಟುಯಿಥೇವೆ ಯಾಗಲಾಗಿ ಯಿ ಗ್ರಾಮದ

* ಹರತಿ, ನಿಡಗಲ್ಲು ಪಾಳೆಯಗಾರರ ಮೂಲ ಪುರುಷನು ವಿಜಾಪುರ ಪ್ರಾಂತದವನು ಯಿವನ ವಿಶೇಷ ಪರಾಕ್ರಮದಿಂದ ಸಂತುಷ್ಟನಾದ ವಿಜಯನಗರದ ಕೃಷ್ಣದೇವರಾಯನು ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗ ಪ್ರದೇಶವನ್ನು ವಹಿಸಿ ತಿಪ್ಪಂನಿಗ ನಾಯಕನೆಂಬ ಹೆಸರು ಕೊಟ್ಟನು. ಅವನ ನಂತರ ಅವನ ರಾಜ್ಯವು ಅವನ ಏಳು ಜನ ಮಕ್ಕಳಿಗೆ ಭಾಗವಾಯಿತು. ಈ ಪ್ರಕರಣದಲ್ಲಿ ಹರತಿ ನಿಡಗಲ್ಲು ತರೀಕೆರೆ ಸಂತರಗಲ್ಲು (ಸರ್ವಾಡ್) ಈ ಮೂರು ಮನೆತನಗಳ ಶಾಸನ ಲೇಖನಗಳನ್ನು ಒಟ್ಟಿಗೆ ಸೇರಿಸಿ ಮುದ್ರಿಸಿದೆ.

ಸ್ವದತ್ತಾದ್ವಿಗುಣಂ ಪುಣ್ಯಂ। ಪರದತ್ತಾನು ಪಾಲನಂ। ಪರದತ್ತಾ ಪಹಾರೇಣ ಸ್ವದತ್ತಂ। ನಿಷ್ಫಲಂಭವೇತ್ ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃದತ್ತಾ ಸಹೋದರೀ। ಅನ್ಯದತ್ತಾಚ ಮಾತಾಚ ದತ್ತಾಂ ಭೂಮಿಂ ಪರಿತ್ಯಜೇತ್, ದಾನಪಾಲನಯೋರ್ಮಧ್ಯೇದಾನಾ ಛ್ರೇಯೋನು ಪಾಲನಂ। ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದ ಚ್ಯುತಂ ಪದಂ। ಆದಿತ್ಯಚಂದ್ರಾವನಿಲೋನಲಶ್ಚದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ। ಅಹಶ್ಚರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ॥=॥=॥

ಪರಿಸ್ತರಣದ ಭೂಮಿಯಲ್ಲಿ ಉತ್ಪತ್ತಿಯಾಗುವ ಯರೆನೆಲಾ, ಕೆನ್ನಲ, ತಾಡಾರಂಭ, ನೀರಾರಂಬ ಅಣ್ ಅಚ್ಚುಕಟ್ಟು, ಯಾತಗೂಡೆಗುಯಿಲು, ಕಾಲುವೆ ಕಪಿಲೆ, ಹುಣಸೆ, ಹುಲುಗಲು, ಮಾವು ನೇರಲು, ಸ್ಥಳಸುಂಕ ಮಾರ್ಗಸುಂಕ ಜೀರಿಗೆ ಸುಂಕ ಮದುವೆ ಹಣ ಕಾವಲದೆರಿಗೇರೊಖ್ಖ ಪಾದಗಾಣಿಕೆ ಯಣ್ಣೆ ತುಪ್ಪ ಬಿರಾಡ ಸಹ ಅಕ್ಷಿಣಿ ಆಗಾಮಿ ನಿಧಿ ನಿಕ್ಷೇಪ ಸಿದ್ಧಸಾಧ್ಯ ಅಷ್ಟಭೋಗ ತೇಜೋದಾಪಾರ್ಜನೆ ಸಹವಾಗಿ ಕೊಟ್ಟುಯಿದೇವೆ, ಆ ಚಂದ್ರಾರ್ಕವಾಗಿ ನಿಮ್ಮ ಶಿಷ್ಯ ಪರಂಪರಾ ನಮ್ಮ ಪುತ್ರಪೌತ್ರ ವಂಶ ಪರಂಪರಾ, ಅನುಭವಿಸಿಕೊಂಡು ಬಾಹುದು. ಈ ಧರ್ಮಕ್ಕೆ ನಮ್ಮ ಸಂಸ್ಥಾನದವರೂ ಅನ್ಯ ಸಂಸ್ಥಾನದವರು ಯಾರು ವಿಘ್ನಮಾಡುತ್ತಾರೊ ಅವರು ಕಾಶೀ ಕ್ಷೇತ್ರದಲ್ಲೂ ತಮ್ಮ ಹಿರಿಯರಿಗೂ ಗೋ ಬ್ರಾಹ್ಮಣರಿಗೂ ಅನ್ಯಥಾ ಮಾಡಿದ ಹಾಗೆ ಯಂದು ಬರಸಿ ಕೊಟ್ಟ ಧರ್ಮಶಾಸನದ ಪತ್ರಿಕೆ॥




———

೭೩. ದಾನಶಾಸನ—ನಳ ಸಂವತ್ಸರ, ಮಾಘ ಶು. ೭. ಶಾ. ಶ. ೧೫೯೮, ಕ್ರಿ. ಶ. 1676.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾಮವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭುವೇ। ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷಂಗಳು ೧೫೯೮ನೆಯ ನಳನಾಮ ಸಂವತ್ಸರದ ಮಾಘ ಶುದ್ಧ ೧೧ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠತಪಶ್ಚಕ್ರವರ್ತಿ ಅನಾದ್ಯ ವಿಚ್ಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇಧಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರ ಆದಿ ರಾಜಧಾನೀ ವಿದ್ಯಾನಗರ ಮಹಾ ರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀ ಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀನರಸಿಂಹ ಭಾರತೀ ಸ್ವಾಮಿಗಳೈಯ್ಯನವರ ಕರಕಮಲ ಸಂಜಾತರಾದ ಶ್ರೀ ಶಂಕರಭಾರತೀ ಸ್ವಾಮಿಗಳವರ ಕೂಡಲೀ ಕ್ಷೇತ್ರದಲ್ಲಿಹ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ . . . . . . . . . . .

ಆತ್ರೇಯ ಸಗೋತ್ರದ ಆಪಸ್ತಂಭ ಸೂತ್ರದ ಯಜುಶ್ಶಾಖಾಧ್ಯಾಯಿಗಳಾದ ಶ್ರೀಮನ್ಮ ಮಹಾ ಮಂಡಲೇಶ್ವರ ಹರತಿ ಸಂಮೇಟ ಸರ್ಜೆ ರಂಗಪ್ಪರಾಜವರ ಪೌತ್ರರಾದ ಕೃಷ್ಣಪ್ಪರಾಜರ ಪುತ್ರರಾದ ರಾಯಪ್ಪರಾಜರವರು ಬರಸಿ ಕೊಟ್ಟ ಭೂದಾನ ಧರ್ಮಶಾಸನದ ಕ್ರಮವೆಂತೆಂದರೆ ಯೀ ದಿವಸದ ಪುಣ್ಯಕಾಲದಲ್ಲೂ ನಮ್ಮ ಪಿತ್ರಾದಿ ಸಮಸ್ತಪಿತೃಗಳಿಗೂ ವಿಷ್ಣು ಸಾಯುಜ್ಯ ಪದವಿಯು ಆಗಬೇಕೆಂದು ರಾಯದುರ್ಗದವೇಂಟೆಯಕ್ಕೆ ಸಲ್ಲುವದೇವನಸಿರ್ಯದ ಶೀಮೆ ರತ್ನಗಿರಿ ಚಂಟ್ರವಳ ಸ್ಥಳದ ಮಾಯಗೊಂಡನಹಳ್ಳಿ ಗ್ರಾಮವನ್ನು ಸಹಿರಣ್ಯೋಧಕ ದಾನ ಧಾರಾ ಪೂರ್ವಕವಾಗಿ ತ್ರಿವಾಚ ತ್ರಿಕರಯುಕ್ತದಿಂದ ಧಾರೆಯ ನೆರೆದು ಕೊಟ್ಟುಯಿಧೇವೆಯಾಗಲಾಗಿ ಈ ಗ್ರಾಮದ ಪರಿಸ್ತರಣದ ಭೂಮಿಯಲ್ಲಿ ಉತ್ಪತ್ತಿಯಾಗುವ ಯರೆನೆಲ ಕೆನ್ನೆಲ ಕಾಡಾರಂಭ ನೀರಾರಂಭ ಅಣ್ ಅಚ್ಚುಕಟ್ಟು ಯಾತಗೂಡೆ ಗುಯಿಲು ಕಾಲುವೆ, ಕಪುಲೇ, ಹುಣಿಶೆ, ಹುಲುಗಿಲು, ಮಾವು, ನೇರ್ಲು, ಸ್ಥಳಸುಂಕ, ಮಾರ್ಗಸುಂಕ, ಜೀರಿಗೆ ಸುಂಕ, ಮದುವೆ ಹಣ, ಕಾವಲುದೆರಿಗೆ ರೊಖ್ಖ, ಪಾದಗಾಣ್ಕೆ, ಯಣ್ಣೆ, ತುಪ್ಪದ ಬಿರಾಡ ಸಹಾ ಅಕ್ಷಿಣಿ ಆಗಾಮಿ ನಿಧಿ ನಿಕ್ಷೇಪ ಸಿದ್ಧ ಸಾಧ್ಯ ಅಷ್ಟಭೋಗ ತೇಜೋಪಾರ್ಜನೆ ಸಹವಾಗಿ ಕೊಟ್ಟುಯಿದೇವೆ ಆಚಂದ್ರಾರ್ಕವಾಗಿ ನಿಮ್ಮ ಶಿಷ್ಯ ಪರಂಪರಾ ನಮ್ಮ ಪುತ್ರ ಪೌತ್ರ ವಂಶ ಪರಂಪರಾ ಅನುಭವಿಸಿಕೊಂಡು ಬಾಹದು ಈ ಧರ್ಮಕ್ಕೆ ನಮ್ಮ ಸಂಸ್ಥಾನದವರು ಅನ್ಯ ಸಂಸ್ಥಾನದವರು ಯಾರೂ ವಿಘ್ನಮಾಡ್ಯಾರು ಅವರು ಕಾಶೀ ಕ್ಷೇತ್ರದಲ್ಲ ನಮ್ಮ ಹಿರಿಯರಿಗೂ ಗೋ ಬ್ರಾಹ್ಮಣರಿಗೂ ಅನ್ಯಥಾ ಮಾಡಿದ ಹಾಗೆಯೆಂದು ಬರಸಿ ಕೊಟ್ಟ ಧರ್ಮ ಶಾಸನದ ಪತ್ರಿಕೆ ಸ್ವದತ್ತಾದ್ವಿಗುಣಂ ಪುಣ್ಯಂ। ಪರದತ್ತಾನು

ಪಾಲನಂ ಪರದತ್ತಾ ಪಹಾರೇಣ। ಸ್ವದತ್ತಂ ನಿಷ್ಫಲಂ ಭವೇತ್॥೧॥ ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃ ದತ್ತಾ ಸಹೋದರೀ ಅನ್ಯ ದತ್ತಾ ಚ ಮಾತಾ ಚ ದತ್ತಾಂ ಭೂಮಿಂ ಪರಿತ್ಯಜೇತ್॥ ದಾನಪಾಲನಯೋರ್ಮಧ್ಯೇಬಾನಾ ಛ್ರೇಯೋನು ಪಾಲನಂ। ದಾನಾತ್ಸ್ವರ್ಗಮವಾಪ್ನೋತಿ ಪಾಲನಾದ ಚ್ಯುತಂ ಪದಂ॥ ಆದಿತ್ಯಚಂದ್ರಾವನಿಲೋನಲಶ್ಚ। ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ। ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ। ಧರ್ಮಶ್ಚ ಜಾನಾತಿ ನರಶ ವೃತ್ತಂ॥=॥




೬೪. ದಾನಶಾಸನ—ಚಿತ್ರಭಾನು, ಮಾಘ ಶು. ೧೫, ಶಾ. ಶ. ೧೬೨೨, ಕ್ರಿ. ಶ. 1701.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೬೨೨ನೆಯ ಚಿತ್ರಭಾನು ಸಂವತ್ಸರದ ಮಾಘ ಶು। ೧೫ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠ ತಪಶ್ಚಕ್ರ ವರ್ತಿ ಅನಾದ್ಯ ವಿಛ್ಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರ ಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾ ರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀನರಸಿಂಹ ಭಾರತಿ ಸ್ವಾಮಿಗಳವರ ಕರ ಕಮಲ ಸಂಜಾತರಾದ ಶ್ರೀ ಶಂಕರಭಾರತಿ ಸ್ವಾಮಿಗಳವರ ರತ್ನಗಿರಿ ಶೃಂಗೇರಿ ಮಠದ ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ ಅಮರಗಿರಿ ತಿರುಪತಿ ಗೋವಿಂದರಾಜರವರ ಮಹಲಕ್ಷ್ಮಮ್ಮನವರ ದೇವಸ್ಥಾನದ ಪಡಿತರ ಧೀಪಾರಾಧನಿಗೂ ಅನ್ನಛತ್ರ ಮುಂತಾದ ಧರ್ಮಗಳಿಗೆ . . . . . .

ಅತ್ರೇಯ ಸಗೋತ್ರದ ಅಪಸ್ತಂಭ ಸೂತ್ರದ ಯಜುಃಶ್ಶಾಖಾಧ್ಯಾಯಿಗಳಾದ ಶ್ರೀಮ್ಮ ಮಹಾಮಂಡಲೇಶ್ವರ ಹರತಿ ಸಂಪೇಟ ಸರ್ಜೆ ಕೃಷ್ಣಪ್ಪರಾಜರವರ ಪೌತ್ರರಾದ ರಾಯಪ್ಪರಾಜರವರ ಪುತ್ರರಾದ ರಾಯಪ್ಪರಾಜರವರು ಬರಸಿ ಕೊಟ್ಟ ಭೂದಾನ ಧರ್ಮ ಶಾಸನದ ಕ್ರಮವೆಂತೆಂದರೆ ಈ ದಿವಸದ ಪುಣ್ಯಕಾಲದಲ್ಲೂ, ನಮ್ಮ ಪಿತ್ರಾದಿ ಸಮಸ ಪಿತೃಗಳಿಗೂ ವಿಷ್ಣು ಸಾಯುಜ್ಯ ಪದವಿಯು ಆಗಬೇಕೆಂದು ರಾಯದುರ್ಗದ ವೇಂಟೆಯಕ್ಕೆ ಸಲ್ಲುವ ದೇವನ ಶೀರೆ ಯದ ಶೀಮೆ ರತ್ನಗಿರಿ ರೊಳೇ ಸ್ಥಳದ ಲಚ್ಚಮ್ಮಯ್ಯನವರ ಹಳ್ಳಿಗ್ರಾಮವನ್ನು ಸಹಿರಣ್ಯೋದಕ ದಾನ ಧಾರಾ ಪೂರ್ವಕವಾಗಿ ತ್ರಿವಾಚ ತ್ರಿಕರಣ ಯುಕ್ತದಿಂದ ಧಾರೆ ನೆರೆದು ಕೊಟ್ಟುಯಿದೇವೆ ಯಾಗಲಾಗಿ ಈ ಗ್ರಾಮದ ಪರಿ ಸ್ತರಣದ ಭೂಮಿಯಲ್ಲಿ ಉತ್ಪತ್ತಿ ಆಗುವ ಯರೆನೆಲ, ಕೆನ್ನಲ, ಕಾಡಾರಂಭ, ನೀರಾರಂಭ, ಆಣೆ ಅಚ್ಚುಕಟ್ಟು ಯಾತ, ಗೂಡೆ, ಗುಯಿಲು ಅಕ್ಷಿಣಿ ಆಗಾಮಿ ನಿಧಿ ನಿಕ್ಷೇಪ ಸಿದ್ಧಸಾಧ್ಯ ಅಷ್ಟಭೋಗ ತೇಜೋಪಾರ್ಜನೆಯನ್ನು ಆಗುಮಾಡು ಕೊಂಡು ಆಚಂದ್ರಾರ್ಕವು ನಮಗೆ ಧರ್ಮ ಬಾಹ ರೀತಿಗೆ ನಡಸಿಕೊಂಡು ಬಾಹದೆಂದು ಬರಸಿ ಕೊಟ್ಟ ಭೂದಾನ ಧರ್ಮಶಾಸನದ ದಾನ ಪತ್ರ ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ। ಪರದತ್ತಾ ಪಹಾರೇಣ ಸ್ವದತ್ತಂ ನಿಷ್ಫಲಂ ಭವೇತು॥=॥ ದಾನಪಾಲನಯೋರ್ಮಧ್ಯೇ ದಾನಾಛ್ರೇಯೋನು ಪಾಲನಂ ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ॥=॥ ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ಆಹಶ್ಚ ರಾತ್ರಿಶ್ಚ ಉಭೇಚ ಸಂಧ್ಯಾ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ॥=॥



೭೫. ದಾನಶಾಸನ.—ನಂದನ ಕಾರ್ತೀಕ ಶು ೧೫, ಶಾ. ಶ ೧೬೩೪ ಕ್ರಿ. ಶ 1712.




ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೆ॥ ಸ್ವಸ್ತಿ ಶ್ರೀವಿಜಯಾಭ್ಯುದಯ, ಶಾಲಿವಾಹನಶಕ ವರುಷಂಗಳು ೧೬೩೪ನೆಯ ನಂದನ ನಾಮ ಸಂವತ್ಸರದ ಕಾರ್ತಿಕ ಶು ೧೫ ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ, ಪದವಾಕ್ಯಪ್ರಮಾಣ, ಪಾರಾವಾರ ಪಾರೀಣ ಯಮನಿಯಮಾಸನ। ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ। ಸಮಾದ್ಯಷ್ಟಾಂಗ ಯೋಗಾನುಷ್ಠಾನುನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಚ್ಛಿನ್ನ ಗುರು ಪರಂಪರಾಪ್ರಾಪ್ತ। ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ। ಸಕಲನಿಗಮಾಗಮಸಾರ ಹೃದಯ। ವೈದಿಕಮಾರ್ಗ ಪ್ರವರ್ತಕ। ಸಾಂಖ್ಯತ್ರಯ ಪ್ರತಿಪಾಲಕ। ಸರ್ವತಂತ್ರ ಸ್ವತಂತ್ರ ಆದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ, ಶ್ರೀಮದ್ರಾಜಾಧಿ ರಾಜಗುರು, ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ, ಋಷ್ಯಶೃಂಗ ಪುರವರಾಧೀಶ್ವರ। ಶೃಂಗೇರಿ ಶ್ರೀವಿದ್ಯಾ ಶಂಕರ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ, ಶೃಂಗೇರಿ ಶ್ರೀ ನರಶಿಂಹ ಭಾರತೀಸ್ವಾಮಿಗಳೈಯ್ಯನವರ ಕರಕಮಲಸಂಜಾತರಾದ ಶೃಂಗೇರಿ ಶ್ರೀ ಶಂಕರ ಭಾರತೀಸ್ವಾಮಿಗಳೈಯ್ಯನವರ ಚರಣಾರವಿಂದಗಳಿಗೆ.

ಆತ್ರೇಯಸ ಗೋತ್ರದ। ಆಪಸ್ತಂಭ ಸೂತ್ರದಯಜುಃ ಶಾಖಾಧ್ಯಾಯಿಗಳಾದ ಶ್ರೀಮನ್ ಮಹಾ ಮಂಡಲೇಶ್ವರ ಹರತಿ ಸಂಮೇಟ, ಸರಜಾಕೃಷ್ಣಪ್ಪರಾಜರ ಪೌತ್ರರಾದ। ರಂಗಪ್ಪರಾಜರ ಪುತ್ರರಾದ। ರಾಯಪ್ಪರಾಜರು ಬರ್ಸಿಕೊಟ್ಟಯಿರುವ ಭೂದಾನ ಧರ್ಮಶಾಸನದಾನ ಪತ್ರದ ಕ್ರಮ ವೆಂತೆಂದರೆ, ಈ ದಿವಸಸೋಮೋಪರಾಗಪರ್ವಣಿ ಪುಣ್ಯಕಾಲದಲ್ಲಿ ಶ್ರೀ ವಿದ್ಯಾಶಂಕರ ದೇವರ ಆರಾಧನೆ ಬಗ್ಯೆ, ರಾಯದುರ್ಗದ ವೆಂಟಕ್ಕೆ ಸಲ್ಲುವ ದೇವಣ ಶೀಗ್ಯದ ಶೀಮೆರತ್ನಗಿರಿ ವಳಿತವಾದ ಕರೂರ ಕೆಳಗಣ ರಂಗನಹಳ್ಳಿ ಗ್ರಾಮವನ್ನು ನಮ್ಮ ಪಿತ್ರಾದಿಸಮಸ್ತಪಿತೃಗಳಿಗೆ ವಿಷ್ಣು ಸಾಯುಜ್ಯವಾಗ ಬೇಕೆಂದು ತ್ರಿವಾಚ ತ್ರಿಕರಣದಿಂದ ಶ್ರೀ ಕೃಷ್ಣಾರ್ಪಣವಾಗಿ ಸಹಿರಣ್ಯೋದಕದಾನಧಾರಾ ಪೂರ್ವಕವಾಗಿ ಧಾರೆನೆರೆದು ಕೊಟ್ಟುಯಿದ್ದೇವೆ ಯಾದಕಾರಣ ಈ ಗ್ರಾಮದ ಪರಿಸ್ತರಣ ಭೂಮಿಯಲ್ಲಿ। ಉತ್ಪತ್ತಿಯಾಗುವ ಕಾಡಾರಂಭ। ನೀರಾರಂಭ। ಅಣಿ ಅಚ್ಚಕಟ್ಟು, ಯಾತಗೂಡೆಗುಯಿಲು, ಅಕ್ಷಿಣಿ, ಆಗಾಮಿ, ನಿಧಿನಿಕ್ಷೇಪ। ಸಿದ್ಧಸಾಧ್ಯಂಗಳೆಂಬ ಅಷ್ಟಭೋಗತೇಜೋಪಾರ್ಜನೆಯನ್ನು ಆಗುಮಾಡಿಕೊಂಡು। ಆ ಚಂದ್ರಾರ್ಕವು ನಮಗೆ ಧರ್ಮದಾಹರೀತ್ಯಾ ನಡಸಿಕೊಂಡು ಬರವೇಕೆಂದು। ಬರಸಿಕೊಟ್ಟ ಭೂದಾನ ಧರ್ಮಶಾಸನ। ದಾನಪತ್ರಶ್ಲೋಕ। ಸ್ವದತ್ತಾದ್ವಿ ಗುಣಂಪುಣ್ಯಂ ಪರದತ್ತಾನು ಪಾಲನಂ। ಪರದತ್ತಾಪಹಾರೇಣಸ್ವದತ್ತಂನಿಷ್ಫಲಂಭವೇತ್॥ ದಾನಪಾಲನ ಯೋರ್ಮಧ್ಯೇ। ದಾನಾಛ್ರೇಯೋನು ಪಾಲನಂ। ದಾನತ್ಸ್ವರ್ಗಮವಾಪ್ನೋತಿ। ಪಾಲನಾದಚ್ಯುತಂಪದಂ॥ ಮದ್ವಂಶಜಾಃಪರಮಹೀಪತಿ ವಂಶಜಾವಾಯೋಭೂಮಿ ಪಾಸ್ಸತತ ಮುಜ್ವಲಧರ್ಮ ಚಿತ್ತಾಃ। ಮದ್ಧರ್ಮಮೇವ ಪರಿಪಾಲನ ಮಾಚರಂತಿ। ತತ್ಪಾದಪದ್ಮಯುಗಳಂಶಿರಸಾನಮಾಮಿ॥ ಶ್ರೀರಾಮಾ।




———

೬೬. ದಾನಶಾಸನ.—ನಂದನ, ಕಾರ್ತೀಕ ಶು. ೧೫, ಶಾ. ಶ. ೧೬೩೪, ಕ್ರಿ. ಶ. 1712.

ನಮಸ್ತುಂಗಶಿರಶ್ಚುಂಬಿ। ಚಂದ್ರಚಾಮರಚಾರವೇ॥ ತ್ರೈಲೋಕ್ಯನಗರಾರಂಭ। ಮೂಲಸ್ತಂಭಾಯಶಂಭವೆ ಸ್ವಸ್ತಿ ಶ್ರೀ ವಿಜಯಾಭ್ಯುದಯ। ನೃಪಶಾಲೀವಾಹನಶಕವರುಷ ೧೬೩೪ನೆಯ ನಂದನ ಸಂವತ್ಸರದ ಕಾರ್ತೀಕ ಶು ೧೫ ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಚಾರ್ಯವರ್ಯ। ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ। ಯಮನಿಯಮಾಸನಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯವಿಛ್ಛಿನ್ನ। ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ। ಸಕಲವೇದಾರ್ಥ ಪ್ರಕಾಶಕ। ಸಾಂಖ್ಯತ್ರಯಪ್ರತಿಪಾಲಕ ಸಕಲನಿಗಮಾಗಮಸಾರಹೃದಯ।ವೈದಿಕಮಾರ್ಗ ಪ್ರವರ್ತಕ। ಸರ್ವತಂತ್ರ ಸ್ವತಂತ್ರಾದಿರಾಜಧಾನಿ। ವಿದ್ಯಾನಗರ ಮಹಾರಾಜಧಾನಿ। ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ। ತುಂಗಭದ್ರಾತೀರವಾಸ। ಭುಷ್ಯಶೃಂಗಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀನರಶಿಂಹ ಭಾರತೀಸ್ವಾಮಿಗಳವರ। ಕರಕಮಲಸಂಜಾತರಾದ ಕೂಡಲೀ ಶೃಂಗೇರಿ ಶ್ರೀ ಶಂಕರಭಾರತೀಸ್ವಾಮಿಗಳವರ ಪಾದಪದ್ಮಂಗಳಿಗೆ.

ತಮ್ಮ ಅತ್ಯಂತಪ್ರಿಯಶಿಷ್ಯರಾದ ನಿಡಗಲ್ಲು ಕರೇಕೆರೆ, ಸಂತರಗಲ್ಲ ಆತ್ರೇಯ ಗೋತ್ರೋತ್ಪನ್ನ ರಂಗಪ ನಾಯಕರ ಪೌತ್ರರಾದ ವೆಂಕಟಪ್ಪನಾಯಕರ ಪುತ್ರರಾದ ತಿಮ್ಮಣ್ಣನಾಯಕರು ಬರಸಿಕೊಟ್ಟ ಗ್ರಾಮ, ಧರ್ಮಶಾಸನ ಕ್ರಮವೆಂತೆಂದರೆ, ನಾವು ಆಳುವರಾಜ್ಯದಲ್ಲಿ ಚಿರತಹಳ್ಳಿಕೆಳಗಣ। ಕರೇದಾಸನಹಳ್ಳಿಗ್ರಾಮವನ್ನು। ಈ ದಿವಸ ಸೋಮೋಪರಾಗಪರ್ವಣಿ ಪುಣ್ಯಕಾಲದಲ್ಲಿ। ನಮ್ಮಹಿರೇರಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿ ಆಗಬೇಕೆಂದು। ನಮ್ಮ ಆತ್ಮ ಸಂತೋಷದಿಂದ ಶ್ರೀ ವಿದ್ಯಾಶಂಕರದೇವರ ಆರಾಧನೆಬಗ್ಯೆ ಶಿವಾರ್ಪಿತವಾಗಿ ಕೊಟ್ಟುಯಿದ್ದೇವೆ। ಈ ಗ್ರಾಮಕ್ಕೆ ಸಲ್ಲುವ। ಕಾಡಾರಂಭ। ನೀರಾರಂಭ। ಅಣೆಅಚ್ಚುಕಟ್ಟು । ಯಾತಗೂಡೆ ಗುಯಿಲು ಕಾಲುವೆ ಕಪಿಲೆ ನಿಧಿನಿಕ್ಷೇಪ । ಜಲ ಕರುಪಾಷಾಣ। ಸಿದ್ಧಸಾಧ್ಯಂಗಳೆಂಬ ಅಷ್ಟಭೋಗತೇಜ ಸಾಮ್ಯವನ್ನು। ನಿಮ್ಮಶಿಷ್ಯಪರಂಪರಾ ಅನುಭವಿಸಿಕೊಂಡು ಬರಬೇಕು। ಇದಕ್ಕೆ ನಮ್ಮವಂಶದಲ್ಲಿಯಾರಾದರೂ ಧಿಕ್ಕತ್ತು ಮಾಡಿದರೆ, ಗುರುಹಿರೇರಿಗೆ ತಪ್ಪಿದಹಾಗೆ ಎಂದು ಬರಸಿ ಕೊಟ್ಟ।ಗ್ರಾಮಧರ್ಮಶಾಸನಸಹಿ॥ ದಾನಪಾಲನಯೋರ್ಮಧ್ಯೇ। ದಾನಾಛ್ರೇಯೋನುಪಾಲನಂ। ದಾನಾತ್ಸ್ವರ್ಗಮವಾಪ್ನೋತಿ। ಪಾಲನಾದಚ್ಯುತಂಪದಂ॥೧॥ ಸ್ವದತ್ತಾದ್ದ್ವಿಗುಣಂಪುಣ್ಯಂ। ಪರದತ್ತಾನುಪಾಲನಂ। ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂಭವೇತ್ ॥೨॥ ಸ್ವದತ್ತಾ ಪುತ್ರಿಕಾಧಾತ್ರೀ। ಪಿತೃದತ್ತಾಸಹೋದರೀ। ಅನ್ಯದತ್ತಾಚಮಾತಾಚ। ದತ್ತಾಂಭೂಮಿ ಪರಿತ್ಯಜೇತ್ ॥೩॥ ಯೇಕೈವ ಭಗಿನೀಲೋಕೇ। ಸರ್ವೇಷಾಮೇವ। ಭೂಭುಜಾಃ। ನಭೋಚ್ಯಾನಗರ ಗ್ರಾಹ್ಯಾಂ ವಿಪ್ರದತ್ತಾವಸುಂಧರಾ ॥೪॥

॥ ಶ್ರೀ ಸಾರ್ವಾಡೇಶ್ವರಾ ॥

---

೬೭. ಲೇಖನ.—ಸಿದ್ಧಾರ್ಥಿ, ಶ್ರಾವಣ ಶು. ೨, ಶಾ. ಶ. ೧೬೬೧, ಕ್ರಿ. ಶ. 1739.

ಶ್ರೀ

ಶ್ರೀಮತ್ಪರಮ ಹಂಸಪರಿವ್ರಾಜಕಾ ಚಾರ್ಯವರ್ಯ। ಪದವಾಕ್ಯಪ್ರಮಾಣ ಪಾರಾವಾರ ಪಾರೀಣ। ಯಮ ನಿಯಮಾಸನ ಪ್ರಾಣಾಯಾಮಪ್ರತ್ಯಾಹಾರ ಧ್ಯಾನ ದಾರಣ। ಸಮಾಧ್ಯಷ್ಟಾಂಗಯೋಗಾನುಷ್ಠಾನು ನಿಷ್ಠ। ತಪಶ್ಚಕ್ರವರ್ತಿ ಅನಾದ್ಯವಿಛ್ಛಿನ್ನಗುರು ಪರಂಪರಾಪ್ರಾಪ್ತ। ಷಡ್ಧರ್ಶನ ಸ್ಥಾಪನಾಚಾರ್ಯ। ವ್ಯಾಖ್ಯಾನಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ। ಸಾಂಖ್ಯತ್ರಯ ಪ್ರತಿ ಪಾಲಕ। ಸಕಲನಿಗ ಮಾಗಮ ಸಾರ ಹೃದಯ। ವೈದಿಕ ಮಾರ್ಗಪ್ರವರ್ತಕ। ಸರ್ವತಂತ್ರಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜ ಧಾನೀ। ಕರ್ಣಾಟಕ ಸಿಂಹಾ

ಸನ ಪ್ರತಿಷ್ಠಾಪನಾಚಾರ್ಯ। ಶ್ರೀಮದ್ರಾಜಾಧಿರಾಜ ಗುರು। ಭೂಮಂಡಲಾಚಾರ್ಯ। ತುಂಗಭದ್ರಾ ತೀರವಾಸ। ಋಷ್ಯ ಶೃಂಗ ಪುರವರಾಧೀಶ್ವರ। ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀ ಪಾದಪದ್ಮಾರಾಧಕರಾದ। ಶೃಂಗೇರಿ ಶ್ರೀ ನರಶಿಂಹಭಾರತೀ। ಸ್ವಾಮಿಗಳ್ವೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿಗಳ್ವೈಯ್ಯನವರ ದಿವ್ಯ ಶ್ರೀಪಾದಪದ್ಮಂಗಳಿಗೆ.

ನಿಮ್ಮ ಅತ್ಯಂತ ಪ್ರಿಯಶಿಷ್ಯರಾದ ಶ್ರೀಮನ್ ಮಹಾರಾಜ ಶ್ರೀ ಹರತೀ ಸರಜರಾಯಪ್ಪರಾಜರವರು ಸಾಷ್ಟಾಂಗ ನಮಸ್ಕರಿಸಿ ಮಾಡುವ ಬಿನ್ನಹ। ದೇವರವರ ಆಶಿರ್ವಾದಕಟಾಕ್ಷದಿಂದ। ನಾವು ಕ್ಷೇಮದಲ್ಲಿಯಿದ್ದೇವೆ। ಸ್ವಾಮಿಗಳವರ ತಪಸ್ಸಾಮ್ರಾಜ್ಯ ವೈಭವಗಳಿಗೆ ಪತ್ರಿಕೆ ಕಳುಹ ಕಟ್ಟಲೆ ಮಾಡಿಸುವದು। ಈ ಕಾಲಚಾತುರ್ಮಾಶ್ಯ ಸಂಕಲ್ಪಕ್ಕೆ ವಸ್ತಿ ಗ್ರಾಮದಲ್ಲಿಯಿಥೇವೆ. ಆತದಂಗ ವೆಂಕಟ ಭಟ್ಟರ ಸಂಗಡ, ಉಡುಗರೆ ವಿಭೂತಿ, ಫಲಪ್ರಸಾದವನ್ನು ಕಳುಹ್ಸಿಯಿದೇ ವೆಂಬ ಹಾಗು ಶ್ರೀ ಮಠದ ಧರ್ಮಕ್ಕೆ ಉತ್ತಾರವಾದ ಲಚ್ಚಮ್ಮನ ಹಳ್ಳಿ ಗ್ರಾಮದ ಭೂಮಿ। ವತ್ತಿ ಆಚೇ ಗ್ರಾಮ ದವರು ಮಾಡಿಕೊಳ್ಳುತ್ತಾರಂತೆ। ಅವರಿಗೆ ತಾಕೀತಿಮಾಡಿಸಿ। ನಿರೋಪದ್ರವವಾಗಿ ನಡಸಿಕೊಳ್ಳಬೇಕೆಂಬ ಹಾಗೂ ಬರಸಿ ಕಳುಹಿಸಿದ ಆಶಿರ್ವಾದ ಪತ್ರಿಕೆಯಿಂದ। ಶಿರಿಸಾವಹಿಸಿ ಸಕಲಾಭಿಪ್ರಾಯವನ್ನೂ ಕೇಳಿದೆವು. ಸ್ವಾಮಿಯವರು ದಯಮಾಡಿ ಅಪ್ಪಣಿಕೊಟ್ಟು ಕಳುಹಿಸದಂಥಾ ಉಡುಗರೆ ವಿಭೂತಿಫಲ ಪ್ರಸಾದವನ್ನೂ। ಈಸಿದ್ಧಾರ್ಥಿ ಸಂವತ್ಸರದ ಶ್ರಾವಣಶುದ್ಧ ೨ರಲ್ಲೂ ತೆಗೆದುಕೊಂಡು ಅತ್ಯಂತ ಸಂತೋಷರಾದೆವು। ಶ್ರೀ ಮಠ ಧರ್ಮಕ್ಕೆ ನಡೆವಂಥಾ ಲಚ್ಚಮ್ಮನ ಹಳ್ಳಿ ಗ್ರಾಮದ ಭೂಮಿಯನ್ನು ವತ್ತಿ ಮಾಡಿಕೊಂಬಂಥಾವರಿಗೂ। ತಾಕೀತಿಮಾಡಿಸಿ ಪೂರ್ವ ಪದ್ಧತಿಗೆ ಸರಿ ಯಾಗಿ ಮಾಡಿ ಕೊಂಬರೀತಿಗೆ ಹೇಳಿಸಿಯಿಥೇವೆ. ಈಗ ಸ್ವಾಮಿಯವರ ಸನ್ನಿಧಾನಕ್ಕೆ ವೇದಂಭಟ್ಟನ ಸಂಗಡ ಉಡುಗರೆಕಳುಹಿಸಿ ಕೊಟ್ಟಯಿದ್ದೇವೆ. ದಯವಿಟ್ಟು ಬರನೊಡಿಸುವ ಹಾಗೆ ಮಾಡಿಸಬೇಕು। ಪೂರ್ವಾರಭ್ಯದಿಂದ ನಮ್ಮಲ್ಲಿ ಪೂರ್ಣಕಟಾಕ್ಷದಿಂದ ನಡಸಿಕೊಂಡು ಬರುತ್ತಾಯಿದ್ದೀರಾಗಿ ಸರ್ವಜ್ಞಚಿತ್ತಕ್ಕೆ ವಿಶೇಶ ಬಿನ್ನಹ ಮಾಡಬೇ ಕಾದ್ದೇನೂ ಯಿದ್ದೀತು. ಈ ಬಿನ್ನಹವನ್ನು ಚಿತ್ತಕೆ ತರ ಚಿತ್ಯೈಸಿ, ಆಶಿರ್ವಾದ ಪತ್ರಿಕೆ ಕಳುಹಕಟ್ಟಳೆ ಮಾಡಿಸುವುದು.

॥ಇಂತಿ ಬಿನ್ನಹ॥

---

೭೮. ದಾನಶಾಸನ.—ರೌದ್ರಿ, ಆಶ್ವಯುಜ ಶು. ೩, ಶಾ. ಶ. ೧೬೬೨, ಕ್ರಿ. ಶ. 1740.

ಶ್ರೀ ಶಿವಾ

ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ। ಪಾರಾವಾರ ಪಾರೀಣ। ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ। ಧ್ಯಾನ ಧಾರಣ। ಸಮಾಧ್ಯಷ್ಟಾಂಗ। ಯೋಗಾನು ಷ್ಠಾನನಿಷ್ಠ। ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರುಪರಂ ಪರಾಪ್ರಾಪ್ತ। ಷಡ್ದರ್ಶನ ಸ್ಥಾಪನಾಚಾರ್ಯ। ವ್ಯಾಖ್ಯಾನ ಸಿಂಹಾ ಸನಾಧೀಶ್ವರ। ಸಕಲವೇದಾರ್ಥ ಪ್ರಕಾಶಕ। ಸಾಂಖ್ಯತ್ರಯ ಪ್ರತಿಪಾಲಕ। ಸಕಲನಿಗಮಾಗಮಸಾರ ಹೃದಯ॥ ವೈದಿಕಮಾರ್ಗ ಪ್ರವರ್ತಕ। ಸರ್ವತಂತ್ರ ಸ್ವತಂತ್ರಾದಿ। ರಾಜಧಾನೀ ವಿದ್ಯಾನಗರ ಮಹಾರಾಜಧಾನೀ। ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ। ಶ್ರೀಮದ್ರಾಜಾಧಿರಾಜ ಗುರು। ಭೂಮಂಡಲಾಚಾರ್ಯ। ತುಂಗಭದ್ರಾತೀರ ವಾಸ। ಋಷ್ಯಶೃಂಗ ಪುರವರಾಧೀಶ್ವರ। ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನರಶಿಂಹಭಾರತೀಸ್ವಾಮಿಗಳ್ವೈಯ್ಯನವರ। ಕರಕಮಲ ಸಂಜಾತರಾದ। ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿಗಳ್ವೈಯ್ಯನವರ ಕೂಡಲೀಮಠದ ನಿತ್ಯನೈವೇದ್ಯ ದೀಪಾರಾಧನೆಗೆ.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನಶಕ ವರುಷಂಗಳು ೧೬೬೨ನೆಯ ರೌದ್ರಿನಾಮಸಂವತ್ಸರದ ಆಶ್ವೀಜ ಶು. ೩ ಶುಕ್ರಾವಾರದಲ್ಲೂ ನಿಮ್ಮ ಅತ್ಯಂತ ಪ್ರಿಯ ಶಿಷ್ಯರಾದ ಶ್ರೀಮ್ರ ಮಹಾನಾಯಕಾಚಾರ್ಯ ರಾದ। ಭಾಷೆಗೆ ತಪ್ಪುವನಾಯಕರಗಂಡ। ಮರೆಹೊಕ್ಕವರ ಕಾಯ್ವುವಮೂರಾಂತರಗಳ್ವ। ಮೆಚ್ಚಿ ಮೆಚ್ಚದವರ ಗಂಡ। ಮ್ಲೂಸನ ಶಿರಃ ಖಂಡನ ಬಾದುರ ಮುಲಕ ಸಪ್ತಾಂಗಹರಣ। ಕಠಾರೀಚಲ್ವರ ಗಂಡ। ಕಸ್ತೂರೀ ಕೋಲಾಹಲಪರಶಿನ ಭೈರವ। ಆಜ್ಞಾದಂಡ। ಪ್ರತಿಜ್ಞಾಪರಶುರಾಮಯನು ಮಲಮಂದ ಪ್ರಾಧೀತ ಮಲ್ಲ। ನಿಜಭುಜ ಪ್ರತಾಪೋದ್ದಾರಿ

ತರಣ। ಉಭಯ ದಳಪೂಜ್ಯಲಿಂಗ ರಿಪುನೃಪ। ಕದಳೀವನ ಮತ್ತ ಮಾತಂಗ। ಅರಿರಾಯ ವೇಶ್ಯಾಭುಜಂಗ ಶಂಖ ಚಕ್ರ ಮಕರ ವೃಷಭಧ್ವಜ। ಬಿರುದಾಂಕ ಭಾರಿನಿಗಳಾಂಕ ವರೆದೆಳ ವಿಭಾಡ, ಕಾಳಾಂಜನ, ಗಿರಿ ಪುರವರಾಧೀಶ್ವರರಾದಂಥಾ। ಹರತ್ತಿ ನಿಡಗಲ್ಲು ಮುಮ್ಮಡಿ ಹೊಟ್ಟಣ್ಣ ನಾಯಿಕರವರು ಬರಸಿಕೊಟ್ಟ ದಾನ ಪಟ್ಟ ಕ್ರಮ। ಪೆಂತೆಂದರೆ, ವದಗಿದ ಕಲ್ಲಿ ಹೋಬಳಿಯೊಳಗಣ। ಜಡೆಗೊಂಡ್ನ ಹಳ್ಳಿ ಗ್ರಾಮ ೧. ಈ ಗ್ರಾಮುಕ್ಕೆ ಸಲ್ಲುವ ಕಾಡಾರಂಭ। ನೀರಾರಂಭ। ಯಾತ ಗೂಡೆ ಗುಯಿಲು ಕಾಲುವೆಕಪಿಲೆ ಹುಣಸಿ ಕುಲಿಗಿಲು। ಮೂವುನೇರ್ಲ್ಲು ಸ್ಥಳ ಸುಂಕ। ಯಳ್ಳುಸುಂಕ। ಜೀರಿಗೆ ಸುಂಕ। ಮದುವೆಹಣ। ಕಾವಲು ತೆರಿಗೆ। ರೋಖು ಪಾದಗಾಣಿಕೆ। ಯೆಣ್ಣಿ ತುಪ್ಪದ ಬಿರಾಡಸಹ। ಈ ಸಕಲ ಸುವರ್ಣಾದಾಯ ದವಸಾದಾಯಸಹಾ। ದುಡಿಸಿ ಅನುಭವಿಸಿಕೊಂಡು, ನಮಗೆ ಆಶಿರ್ವಾದ ಮಾಡಿಕೊಂಡು। ಇಹುದೆಂದು ಬರೆಸಿಕೊಟ್ಟ ದಾನಪಟ್ಟಿ.




ಸ್ವದತ್ತಾದ್ವಿಗುಣಂ ಪುಣ್ಯಂ। ಪರದತ್ತಾನು ಪಾಲನಂ। ಪರದತ್ತಾ ಪಹಾರೇಣ। ಸ್ವದತ್ತಂ ನಿಷ್ಫಲಂಭವೇತ್ ॥೧॥ ಸ್ವದತ್ತಾ ಪುತ್ರಿಕಾಧಾತ್ರಿ ಪಿತೃದತ್ತಾ ಸಹೋದರಿ। ಅನ್ಯದತ್ತಾತ್ಶ್ಯಮಾತಾಚ। ದತ್ತಾಂ ಭೂಮಿ ಪರಿತ್ಯಜೇತ್ ॥೨॥ ಆದಿತ್ಯ ಚಂದ್ರಾವ ನಿಲೋನಲಶ್ಚ । ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ। ಅಹಶ್ಯ ರಾತ್ರಿಶ್ಯ ಉಭೇಚ ಸಂಧ್ಯಾ। ಧರ್ಮಶ್ಚ ಜಾನಾತಿ। ನರಸ್ಯ ವೃತ್ತಂ ॥೩॥

---

*೬೯. ಲೇಖನ.—ರೌದ್ರಿ, ಶಾ. ಶ. ೧೬೬೨, ಕ್ರಿ. ಶ. 1740.

ಶ್ರೀ ಶಿವಾ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯಪದವಾಕ್ಯ। ಪ್ರಮಾಣ। ಪಾರಾವಾರಪಾರೀಣ। ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ। ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠ । ತಪಶ್ಚಕ್ರವರ್ತಿ ಅನಾದ್ಯವಿಚ್ಛಿನ್ನ ಗುರುಪರಂಪರಾಪ್ರಾಪ್ತ । ಷಡ್ದರ್ಶನಸ್ಥಾಪನಾಚಾರ್ಯ । ವ್ಯಾಖ್ಯಾನಸಿಂಹಾಸನಾಧೀಶ್ವರ । ಸಕಲ ವೇದಾರ್ಥಪ್ರಕಾಶಕ । ಸಾಂಖ್ಯತ್ರಯಪ್ರತಿಪಾಲಕ । ನಕಲನಿಗಮಾಗಮಸಾರಹೃದಯ ವೈದಿಕಮಾರ್ಗಪ್ರವರ್ತಕ । ಸರ್ವತಂತ್ರಸ್ವತಂತ್ರ। ಆದಿರಾಜಧಾನೀವಿದ್ಯಾನಗರಮಹಾರಾಜಧಾನೀ । ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ । ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ । ತುಂಗಭದ್ರಾತೀರವಾಸ । ಋಷ್ಯಶೃಂಗಪುರವರಾಧೀಶ್ವರ । ಶೃಂಗೇರಿ ಶ್ರೀವಿದ್ಯಾಶಂಕರದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ । ಶೃಂಗೇರಿ ಶ್ರೀನರಶಿಂಹಭಾರತೀಸ್ವಾಮಿಗಳೈಯ್ಯನವರ ಕರಕಮಲಸಂಜಾತರಾದ ಶೃಂಗೇರಿ ಶ್ರೀಶಂಕರಭಾರತೀಸ್ವಾಮಿಗಳೈಯ್ಯನವರ ದಿವ್ಯ ಶ್ರೀಪಾದಪದ್ಮಂಗಳಿಗೆ—

ನಿಮ್ಮ ಅತ್ಯಂತ ಪ್ರಿಯ ಶಿಷ್ಯರಾದ ಶ್ರೀಮೃ ಮಹಾನಾಯಕಾಚಾರ್ಯರಾದ ಹರತಿನಿಡುಗಲ್ಲು ಮುಮ್ಮಡಿ ಹೊಟ್ಟೆಣ್ಣನಾಯ್ಕರವರು ನಮಸ್ಕರಿಸಿ ಮಾಡುವ ಭಿನ್ನಹ ಅದಾಗಿಯು ದೇವರು ದಯಮಾಡಿ ಕಳುಹಿಸಿದ ಶ್ರೀಮುಖದಿಂದ ಸಕಲ ವಿವರಗಳನ್ನೂ ವೋದಿಸಿ ಕೇಳಿ ಬಹಳ ಸಂತೋಷಿತರಾದೆವು । ಚಾತುರ್ಮಾಸ್ಯತದಂಗವಾದ, ವಿಭೂತಿ ವ್ರಾಸಾಕ್ಷತೆ ಪ್ರಸಾದವನ್ನು ತೆಗೆದುಕೊಂಡೆವು. ನರಸಾವಧಾನಿ ತಿಮ್ಮಾವಧಾನಿಗಳ ಕಳುಹಿಸಿಕೊಟ್ಟಿದಂಥಾ ವಿವರಕ್ಕೂ ಹಾಗ ವದಗಿನ ಕಲ್ಲು ಹೋಬಳಿಯೊಳಗಣ, ಜಡೇಗೊಂಡನಹಳ್ಳಿ ಎಂಬ ಗ್ರಾಮವನ್ನು, ಮಠದ ದೀಪಾರಾಧನೆ ನಿತ್ಯ ನೈವೇದ್ಯಕ್ಕೆಕೊಟ್ಟು ದಾನಪಟ್ಟಿಯನ್ನು ಬರಸಿ ಈ ಉಭಯತ್ರರಿಗೂ ಗ್ರಾಮವನ್ನು ತೋರಿಸಿ ಕಳುಹಿಸಿ

ಇಥೇವೆ. ಇವರು ವಿಜ್ಞಾಪನೆ ಮಾಡಲಾಗಿ ಚಿತ್ತಕ್ಕೆ ತಾಹಾಗೆಮಾಡಿಸಿ ನಮಗೆ ಬರಸತಕ್ಕ ವಿವರಗಳಿಗೆ ಆಗಾಗೆ ಶ್ರೀಮುಖ ದಯಮಾಡಿಸಕರ್ತರು.

———

೭೦. ಲೇಖನ.—(ಸುಮಾರು) ಶಾ. ಶ. ೧೬೬೫, ಕ್ರಿ. ಶ. 1743.

ಶ್ರೀ ಶಿವಾ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ। ಪದವಾಕ್ಯಪ್ರಮಾಣ। ಪಾರಾವಾರಪಾರೀಣ। ಯಮ ನಿಯಮಾಸನ। ಪ್ರಾಣಾಯಾಮಪ್ರತ್ಯಾಹಾರ। ಧ್ಯಾನಧಾರಣ। ಸಮಾಧ್ಯಷ್ಟಾಂಗಯೋಗಾನುಷ್ಠಾನುನಿಷ್ಠ। ತಪಶ್ಚಕ್ರವರ್ತಿ। ಅನಾದ್ಯವಿಚ್ಛಿನ್ನಗುರುಪರಂಪರಾಪ್ರಾಪ್ತ। ಷಡ್ದರ್ಶನಸ್ಥಾಪನಾಚಾರ್ಯ। ವ್ಯಾಖ್ಯಾನಸಿಂಹಾಸನಾಧೀಶ್ವರ। ಸಕಲವೇದಾರ್ಥ ಪ್ರಕಾಶಕ। ಸಾಂಖ್ಯತ್ರಯಪ್ರತಿಪಾಲಕ! ಸಕಲನಿಗಮಾಗಮಸಾರಹೃದಯ। ವೈದಿಕ ಮಾರ್ಗಪ್ರವರ್ತಕ। ಸರ್ವತಂತ್ರಸ್ವತಂತ್ರ। ಆದಿರಾಜಧಾನೀ। ವಿದ್ಯಾನಗರ ಮಹಾರಾಜಧಾನೀ। ಕರ್ಣಾಟಕ ಸಿಂಹಾಸನ। ಪ್ರತಿಷ್ಠಾಪನಾಚಾರ್ಯ। ಶ್ರೀಮದ್ರಾಜಾಧಿರಾಜ ಗುರು। ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ। ಋಷ್ಯಶೃಂಗ ಪುರವರಾಧೀಶ್ವರಾ ಶ್ರೀಶೃಂಗೇರಿ ಶ್ರೀ ವಿದ್ಯಾಶಂಕರದೇವರ। ದಿವ್ಯ ಶ್ರೀಪಾದಪದ್ಮಾರಾಧಕರಾದ। ಶೃಂಗೇರಿ ಶ್ರೀಶಂಕರ ಭಾರತೀ ಸ್ವಾಮಿಗಳ್ವಯ್ಯನವರ ದಿವ್ಯ ಶ್ರೀಪಾದಪದ್ಮಂಗಳಿಗೆ.

ನಿಮ್ಮ ಅತ್ಯಂತ ಪ್ರಿಯ ಶಿಷ್ಯರಾದ ಶ್ರೀಮ್ಮ ಮಹಾನಾಯಕಾಚಾರ್ಯರಾದ ಹರತಿ ನಿಡಗಲ್ಲು ಮುಮ್ಮಡಿ ಹೊಟ್ಟೆಣ್ಣನಾಯಕರವರು ಸಾಷ್ಟಾಂಗ ನಮಸ್ಕರಿಸಿ ಮಾಡುವ ಬಿನ್ನಹ। ಅದಾಗಿಯು। ನಾವು ದೇವರ ವರಕೃಪಾ ಕಟಾಕ್ಷದಿಂದ ಪರಿಣಾಮದಲ್ಲಿ ಇಥೇವೆ। ದೇವರವರನಿತ್ಯಕುಶಲಾಮೋದಗಳಿಗೆ ಬರಸಿ ಕಳುಹಿಸ ಕಟ್ಟುಮಾಡಿಸುವುದು॥ ತರುವಾಯ॥ ದೇವರವರು ಕಳಹ ಕಟ್ಟುಮಾಡಿಸಿ ಬುದ್ಧಿ ಪತ್ರಿಕೆಗಳಿಂದ ಸಕಲಾಭಿಪ್ರಾಯಗಳೂ ಕೇಳಿ ಅಂತಃಕರಣಕ್ಕೆ ತಂದು। ಸಂತೋಷಿತರಾದೆವು. ಗ್ರಾಮದ ವಿಚಾರವಾಗಿ ರಾಯಸ ಬರಸಿಕಳುಹಿಸಿ ಇದ್ದಿರಷ್ಟೆ. ಸಹಜವು; ಆ ಗ್ರಾಮದ ವಿಚಾರಕ್ಕೆ ಪ್ರಯಾಸಪಟ್ಟು ಕಷ್ಟಬಿದ್ದು, ಬದುಕು ಮಾಡಿಸಿದರೆ ಗ್ರಾಮ ಅನುಭವಕ್ಕೆ ಬಂದೀತಲ್ಲಾ। ಬಾರದಂತಾದ್ದು ಅಲ್ಲಾ; ಈಗ ಗ್ರಾಮದ ಹೊಲಬು ವಿಚಾರಿಸಿ, ವಾಮನ ಮುದ್ರೆಕಲ್ಲು, ನಿಲ್ಲಿಸಿ ಕಳುಹಿಸಿಯಿಥೇವೆ। ಇವು ಮೊದಲಾದ ವರ್ತಮಾನಗಳು ಬ್ರಾಹ್ಮಣ ಹೇಳಲಾಗಿ ದೇವರ ದಿವ್ಯಚಿತ್ತಕ್ಕೆ, ತರ ಚಿತ್ತೈಸಿ ಬರಸತಕ್ಕ ವಿವರಗಳಿಗೆ ಬುದ್ಧಿ ಪತ್ರಿಕೆ ಕಳುಹಕಟ್ಟುಮಾಡಿಸುವುದು. ಯಿಂತಿ ಬಿನ್ನಹ.

———

೭೧. ನಿರೂಪ.—ವಿಜಯ, ಮಾಘ ಶು. ೫, ಶಾ. ಶ. ೧೬೯೬, ಕ್ರಿ. ಶ. 1775.

ಶ್ರೀ ಗುರುಶೃಂಗೇರಿ.

ಶ್ರೀ ಶಿವ॥

ವಿಜಯಸಂ।ರದ ಮಾಘ ಶು. ೫ಲ್ಲೂ ಶ್ರೀಮನ್ ಮಹಾನಾಯಕಾಚಾರ್ಯರಾದ ಹರತಿ ನಿಡಗಲ್ಲು ಮುಮ್ಮಡಿ ವೀರ ತಿಮ್ಮಣ್ಣನಾಯಕರೈಯ್ಯನವರು, ರಂಗಸಮುದ್ರದ ಗೌಡಶಾನಭೋಗರಿಗೆ ಬರಸಿಕಳುಹಿದ ಪ್ರಯೋಜನ ಅದಾಗಿಯೂ। ಗ್ರಾಮದತೋಟದ ಭೂಮಿ ಬಥೆಯಲ್ಲೂ॥ ॥ ಸ್ವಾಮಿಗಳೈಯ್ಯನವರ ಮಠಕ್ಕೆ ಯಾವರಿಗೂ। ನಡೆದು ಬಂದ ತೋಟದ ಭೂಮಿ ಯಿದು । ಲಾ। ೧೧ ಬಳ್ಳದವಮ್ಮನ ಭೂಮಿಗೆ ಸಾಲು ಗುತ್ತಿಗೆ ಸಂದು ಬರುತಾಯಿದ್ದದುಕ್ಕೆ ಯಿಾಗ ಅದಕ್ಕೆ ಸಲ್ಲುಪಡಿಯನ್ನು ಮಠಕ್ಕೆ ನಡಿಸಬೇಕೆಂದು॥ ಶ್ರೀಗಳ ಆಜ್ಞೆಯಾದಕಾರಣ। ಹಾಗೆ

ಅಂಗೀಕರಿಸಿ॥ ॥ ಶ್ರೀಪಾದಕ್ಕೆ ಸಮರ್ಪಿಶಿ ಯಿಥೇವಾಗಿ ಸರ್ವಕಾಲಕ್ಕೂ ನಿರಾವೇದನೆಯಾಗಿ ಕೊಟ್ಟು ಕೊಂಡು ಬಾಹದು ಎಂದು ಬರಸಿ ಕಳುಹಿಸ್ತ ನಿರೂಪ॥ ಯಿಾ ವಿವರ ನಕಲು ಗ್ರಾಮಕ್ಕೆ ಲಿಖಾ ಬರೆದು ನಿರೂಪಾ ಅವರಿಗೆ ಕೊಡೋದು.




೭೨. ದಾನಶಾಸನ.—ವಿಜಯ, ಮಾಘ ಶು. ೧೫, ಶಾ. ಶ. ೧೬೯೭, ಕ್ರಿ. ಶ. 1775.

ವಿದ್ಯಾಶಂಕರ ಶ್ರೀ

ನಮಸ್ತುಂಗಶಿರಶ್ಚುಂಬಿ। ಚಂದ್ರಚಾಮರಚಾರವೇ। ತ್ರೈಲೋಕ್ಯನಗರಾರಂಭ। ಮೂಲಸ್ತಂಭಾಯ ಶಂಭವೇ॥ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ। ಪದವಾಕ್ಯಪ್ರಮಾಣ। ಪಾರಾವಾರಪಾರೀಣ। ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಾಶ್ಚಕ್ರವರ್ತಿ ಅನಾದ್ಯ ವಿಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ। ಸಕಲವೇದಾರ್ಥ ಪ್ರಕಾಶಕ। ಸಾಂಖ್ಯತ್ರಯಪ್ರತಿಪಾಲಕ ಸಕಲ ನಿಗಮಾಗಮಸಾರಹೃದಯ। ವೈದಿಕಮಾರ್ಗಪ್ರವರ್ತಕ। ಸರ್ವತಂತ್ರ ಸ್ವತಂತ್ರಾದಿರಾಜಧಾನಿ ವಿದ್ಯಾನಗರ ಮಹಾರಾಜಧಾನಿ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮ ದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ। ತುಂಗಭದ್ರಾತೀರವಾಸ। ಋಷ್ಯಶೃಂಗಪುರವರಾಧೀಶ್ವರ। ಶ್ರೀವಿದ್ಯಾ ಶಂಕರದೇವರದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀನರಶಿಂಹಭಾರತೀಸ್ವಾಮಿನಾಂ ಕರಕಮಲ ಸಂಜಾತ ರಾದ ಶೃಂಗೇರಿ ಶ್ರೀಶಂಕರಭಾರತೀಸ್ವಾಮಿಗಳವರ ಪಾದಪದ್ಮಂಗಳಿಗೆ—

ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲೀವಾಹನ ಶಕ ವರುಷಂಗಳು ೧೬೯೭ನೆ ವಿಜಯನಾಮ ಸಂವತ್ಸರದ ಮಾಘ ಶು. ೧೫ಲ್ಲೂ ಆತ್ರೇಯಗೋತ್ರದ ಆಪಸ್ತಂಭಸೂತ್ರದಯಜುಶ್ಶಾಖ್ಯಾಧ್ಯಾಯಿಗಳಾದ ಶ್ರೀಮನ್ ಮಹಾ ಮಂಡಲೇಶ್ವರಹರತೀ ಸಮ್ಮೇಟ ಸರಜರಾಯಣ್ಣರಾಜವರಪೌತ್ರರಾದ ವೀರರಾಯಪ್ಪರಾಜರವರ ಪುತ್ರರಾದ ರಂಗಪ್ಪ ರಾಜರವರು ಬರಸಿಕೊಟ್ಟ ಗ್ರಾಮಶಾಸನ ದಾನಪತ್ರಕ್ರಮವೆಂತೆಂದರೆ. ಪೂರ್ವದಲ್ಲಿ ಮಠಕ್ಕೆ ನಾವು ಪರಿಪಾಲನೆ ಮಾಡುವ ರಾಜ್ಯದೊಳಗಣ, ಮುತುಕೂರು ಉಪಗ್ರಾಮ ಸಾದರಹಳ್ಳಿಯನ್ನು ಕೊಟ್ಟುಯಿದ್ದಲ್ಲ. ಆ ಗ್ರಾಮ ರುಜು ಹತ್ತಿಯಾಗಿ ಉಪಯೋಗವಾಗದೆಹೋದ್ದರಿಂದ। ಈಗ ಅದಕ್ಕೆ ಬದಲಾಗಿ ನಾವು ಪರಿಪಾಲನೆಮಾಡುವ ರಾಜ್ಯದೊಳ ಗಣ ಅಗಲಸ್ಥಳದ ಉಪಗ್ರಾಮ ತುರಸಾಲನಾಗನಹಳ್ಳಿ ಎಂಬ ಗ್ರಾಮವನ್ನು ಶ್ರೀ ದೇವರ ದೀಪಾರಾಧನೆಗೆ ಈ ದಿವಸ ಪುಣ್ಯಕಾಲದಲ್ಲೂ ಸಹಿರಣ್ಯೋದಕದಾನಧಾರಾಪೂರ್ವಕವಾಗಿ ತ್ರಿವಾಚ ತ್ರಿಕರಣದಿಂದ ಶ್ರೀಕೃಷ್ಣಾರ್ಪಣ ವಾಗಿ ಧಾರೆಯರೆದುಕೊಟ್ಟುಯಿದ್ದೇವೆಯಾದ್ದರಿಂದ ಈ ಗ್ರಾಮಹೊಂದಿದ ಚತುಶ್ಶೀಮೆವಳಗುಳ್ಳ ಕಾಡಾರಂಭ, ನೀರಾರಂಭ, ಕೆರೆ ಕಾಲುವೆ ಕಪಿಲೆ ಯಾತ, ಗೂಡೆ, ಗುಯಿಲು ಮುಂತಾದ್ದರಲ್ಲಿ ಉತ್ಪತ್ತಿಯಾಗುವ ಸಕಲ ಸುವ ರ್ಣಾದಾಯ ಧಾನ್ಯಾದಾಯ, ನಿಧಿ ನಿಕ್ಷೇಪ ಜಲತರು, ಪಾಷಾಣ, ಅಕ್ಷಿಣಿ, ಆಗಮಿ, ಮುಂತಾದ ತೇಜೋಪಾರ್ಜನೆ ಯನ್ನು ಶ್ರೀ ಸ್ವಾಮಿದೀಪಾರಾಧನೆಗೆ ಆಚಂದ್ರಾರ್ಕವೂ ಉಪಯೋಗವಾಗುವಂತೆ ಮಾಡಿಸಿ ನಮ್ಮ ಶ್ರೇಯೋಭಿವೃದ್ಧಿ ಯಾಗುವಂತೆ ಅನುಗ್ರಹವಿಟ್ಟು ನಡಿಸಿಕೊಂಡು ಬರುವದೆಂದು ಬರಸಿಕೊಟ್ಟ ಗ್ರಾಮಶಾಸನದಾನಪತ್ರ॥—॥

ಸ್ವದತ್ತಾದ್ವಿಗುಣಂಪುಣ್ಯಂ। ಪರದತ್ತಾನುಪಾಲನಂ। ಪರದತ್ತಾಪಹಾರೇಣಸ್ವದತ್ತಂ ನಿಷ್ಫಲಂಭವೇತ್ ॥ ದಾನ ಪಾಲನಯೋರ್ಮಧ್ಯೇ। ದಾನಾಛ್ರೇಯೋನುಪಾಲನಂ। ದಾನಾತ್ ಸ್ವರ್ಗಮವಾಪ್ನೋತಿ। ಪಾಲನಾದಚ್ಯುತಂ ಪದಂ

ಮದ್ವಂಶಜಾಃ ಪರಪರವಂಶ ಪತಿವಂಶಜಾವಾಯೇ ಭೂಮಿಪಾಸ್ಸತತಮುಜ್ವಲ। ಧರ್ಮಚಿತ್ತಾಃ। ಮದ್ಧರ್ಮಮೇವ ಪರಿಪಾಲನಮಾಚರಂತಿತ್ವತ್ಪಾದಪದ್ಮಯುಗಳಂ ಶಿರಸಾನಮಾಮಿ ॥

ಶ್ರೀರಾಮ ॥

---

೭೩. ನಿರೂಪ.—ವಿಜಯ, ಮಾಘ ಶು. ೧೫, ಶಾ. ಶ. ೧೬೯೭, ಕ್ರಿ. ಶ. 1775.

*ವಿದ್ಯಾಶಂಕರ ಶ್ರೀ ರಾಮ

ವಿಜಯನಾಮಸಂವತ್ಸರದ ಮಾಘ ಶು. ೧೫ ಲ್ಲೂ ಶ್ರೀಮರ್ಮ ಮಹಾರಾಜ ಶ್ರೀ ಹರತಿ ಸರಜಾರಾಯಪ್ಪರಾಜರ ರಂಗಪರಾಜರವರು ಅಗಳೀ ಗ್ರಾಮದ ಗೌಡ ಶಾನುಭೋಗರಿಗೆ ಬರಸಿ ಕಳುಹಿಸಿದ ನಿರೂಪ. ಅಗಳೀಸ್ಥಳದ ಉಪಗ್ರಾಮವಾದ ತುರುಸಾಲ ನಾಗನಹಳ್ಳಿಯನ್ನು ಶೃಂಗೇರಿ ಮಠಕ್ಕೆ ಶ್ರೀ* ದೇವರ ದೀಪಾರಾಧನೆಗೆ ನಡೆದುಬರುವಂತೆ ದಾನಪತ್ರ ಬರಸಿಕೊಟ್ಟು ಇದೇವಾಗಿ ಈ ಆರಭ್ಯ ಗ್ರಾಮವನ್ನು ಮಠದವರು ಹೇಳಿದ ಮೇರಿಗೆ ಸಾಗು ಸಂತು ಮಾಡಿಕೊಂಡು ಅವರ ಅನುಗುಣ್ಯವಾಗಿ ನಡೆದುಕೊಂಡು ಬರುವಂತೆ ತುರುಸಾಲು ನಾಗನಹಳ್ಳಿ ಗೌಡರಿಗೆ ತಾಕೀತು ಮಾಡಿ ನಿರುಪಾಧಿಕ ಸರ್ವಮಾನ್ಯವಾಗಿ ನಡಸಿಕೊಂಡು ಬರುವುದು. ಈ ನಿರೂಪ ಪ್ರತಿಯನ್ನು ಲೆಖ್ಖಕ್ಕೆ ಬರಕೊಂಡು ಈವರಿಗೆ ಹಿಂದಕ್ಕೆ ಕೊಡುವದು. ಶ್ರೀರಾಮ.

---

## ಕೆಳದಿ ಪಾಳೆಯಗಾರರು

೭೪. ಲೇಖನ.—ಪಿಂಗಳ, ಮಾಘ ಶುದ್ಧ ೩, ಶಾ. ಶ. ೧೫೪೦, ಕ್ರಿ. ಶ. 1618.

ಪಿಂಗಳ ಸಂವತ್ಸರದ ಮಾಘ ಶು. ೩ ರಲ್ಲೂ ಶ್ರೀಮತ್ಕೆಳದೀ ವೆಂಕಟಪ್ಪನಾಯಕರು ಹೊಂಬಣ್ಣ ಶೆಟ್ಟಿಗೆ ಬರಸಿ ಕಳುಹಿಸ್ತ ಕಾರ್ಯ ಅದಾಗಿ ಅಂಕೋಲೆ ಸುಪಾಪೋಂಡೆ ಮುಂತಾದ ತಾಲ್ಲೂಕಗಳ ಮಠದ ಮುದ್ರೇ ಆಚಾರ ವಿಚಾರ ಅಗ್ರತಾಂಬೂಲದೀಪಾರಾಧನೆ ಚರಣಗಾಣಿಗೆ ಮುಂತಾದ್ದು ಕೂಡ್ಲೀ ಕ್ಷೇತ್ರದಲ್ಲಿ ಯಿರುವ ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ಕಡೆಯವರೇ ವಿಚಾರಿಸುತ್ತಾ ಬರುವದು ಸರಿಯಷ್ಟೆ. ಈಗ ಗೋಕರ್ಣಕ್ಕೆ ಶೃಂಗೇರಿ ಮಠದವರು ಬಂದು ತೊಡರುಮಾಡುತ್ತಾರೆ ಎಂಬದಾಗಿ ಕೂಡಲೀ ಶೃಂಗೇರಿಮಠದ ವೆಂಕಟಶಾಸ್ತ್ರಿಯು ಹಜೂರು ಬಂದ ಅರಿಕೆ ಮಾಡಿಕೊಂಡದ್ದರಿಂದ ಕಟ್ಟುಮಾಡಿಶಿ ಇಧೀತು. ಆ ಪ್ರಕಾರ ಗೋಕರ್ಣ ಮುಂತಾದ ಬ್ರಂಹ್ಮರಗಳಿಗೆ ಅಗ್ರತಾಂಬೂಲ ಮುಂತಾದ ಮರ್ಯಾದಿ ಯೇನು ಯಿದ್ಧರೂ ಕೂಡಲಿ ಶೃಂಗೇರಿ ಮಠಧವರಿಗೆ ಕೊಡುವಂತೆ ತಾಕೇದ ಮಾಡಿಸುವದಾಗಿ.

ಮೊಹರು

---

೭೫. ಲೇಖನ.—(ಸುಮಾರು) ಪ್ಲವಂಗ, ಶಾ. ಶ. ೧೫೯೦, ಕ್ರಿ. ಶ. 1668.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನಾದ್ಯಷ್ಟಾಂಗ ಯೋಗನಿರತರಾದ ಕೂಡಲೀ ನರಸಿಂಹಭಾರತೀ ಸ್ವಾಮಿಗಳಿಗೆ. ಕೆಳದೀ ಸೋಮಶೇಖರ ನಾಯಕರು ಮಾಡುವ ನಮಸ್ಕಾರ. ಕಳುಹಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಮನಸ್ಸಿಗೆ ತಂದೆವು. ಕೂಡಲಿಯಲ್ಲಿಹ ಹೊಸಮಠ ಹಳೇಮಟದ ವಿಚಾರಕ್ಕೆ ಬರಸಿದ್ರಿ, ಅವೆರಡೂ ಮಠವನ್ನೂ ನಿಮ್ಮ ವಶಮಾಡಿಕೊಡುವ ಹಾಗೆ ಶಿವಮೊಗ್ಗ ಠಾಣದಾರ ಪುಟ್ಟಗೆ ಬರಸಿಥೇವೆ. ನಿಮ್ಮ ವಶವಮಾಡಿಕೊಂಡು ಕಟ್ಟಿಸುವದಾಗಿ. **ಸೊ**

———

೭೬.—ಪ್ಲವಂಗ ಸಂವತ್ಸರ, ಪುಷ್ಯ ಶುದ್ಧ ೧, ಶಾ. ಶ. ೧೫೯೦, ಕ್ರಿ. ಶ. 1668.

ಪ್ಲವಂಗ ಸಂವತ್ಸರದ ಪುಷ್ಯ ಶುದ್ಧ ೧ ಲ್ಲೂ ಶ್ರೀಮತ್ ಕೆಳದೀ ಸೋಮಶೇಖರ ನಾಯಕರು ನರಸಣಗೌಡಗೆ ಬರಸಿ ಕಳುಹಿದ ಕಾರ್ಯ. . ಯಡತೊರೆ ಶೀಮೆಯೊಳಗಣ ಮಾಚೇನಹಳ್ಳಿ ಗ್ರಾಮವ ಶೃಂಗೇರಿ ಮಠಕ್ಕೆ ಬಿಟ್ಟಿದಲ್ಲಿ ಯೀ ಸ್ವಾಸ್ಥಿಯು ಕೂಡಲಿಯ ಮಠಕ್ಕೆ ಸಲುವದು, ತಮಗೆ ಬಿಡಬೇಕೆಂದು ಕೂಡಲಿಯ ನರಸಿಂಹಭಾರತೀ ಸ್ವಾಮಿಗಳು ಹೇಳಿ ಕಳುಹಿದ್ದ ಸಂಬಂಧಪೂರ್ವ ಕಟ್ಲೇ ಪ್ರಮಾಣು ಕೂಡಲೀಮಠದ ಧರ್ಮವ ನಡಶಿಕೊಂಡಿಹಾಗೆ ಕಟ್ಟುಮಾಡಿಸಿ ಪ್ರಾಕು. ಮಾರ್ಗಶಿರ ಶು. ೧೫ ಯೂ ಸೌಮ್ಯವಾರ ಸೋಮೋಪರಾಗ ಪುಣ್ಯಕಾಲದಲ್ಲಿ ಈ ಗ್ರಾಮಕ್ಕೆ ರೇಖೆ, ಪ್ರಮಾಣು, ಗ. ೬೦ ಅರವತ್ತು ವರಹಾನ ಭೂಮಿಯನು ಮಠದ ಧರ್ಮಕ್ಕೆ ಶಿವಾರ್ಪಿತವಾಗಿ ಬಿಟ್ಟಿಥೇವೆ. ಈ ಗ್ರಾಮು ವಕ್ಕಲು ಸಹಾ ಇವರ ಹವಾಲೇ ಮಾಡಿಕೊಡುವದು. ಈ ಕಾಗದವ ಶೆನಬೋವರ ಕಡಿತಕ್ಕೆ ಬರಸಿ ಇವರೊಶಕ್ಕೆ ತಿರುಗಿ ಕೊಡುವದಾಗಿ.




———

೭೭. ಲೇಖನ.—ಪ್ಲವಂಗ ಸಂವತ್ಸರ, ಮಾಘ ಶುದ್ಧ ೭, ಶಾ. ಶ. ೧೫೯೦, ಕ್ರಿ. ಶ. 1668.

ಪ್ಲವಂಗ ಸಂವತ್ಸರದ ಮಾಘ ಶು. ೭ ರಲ್ಲೂ ಶ್ರೀಮತ್ಕೆಳದೀ ಸೋಮಶೇಖರ ನಾಯಿಕರವರು ಹೊನ್ನಾಳೀ ಪಾರುಪತ್ಯಗಾರ ವೀರಭದ್ರಯ್ಯಗೆ ಬರಸಿ ಕಳುಹಿಸ್ತ ಕಾರ್ಯ ಅದಾಗಿ। ನಿಮ್ಮ ಶೀಮೆವಳಿತ್ತವಾದ ಚಿಲ್ಲೂರ ಮಾಗಣಿತ್ತೆ ದರಗೋಪಗೊಂಡನಹಳ್ಳೀ ಗ್ರಾಮದ ಶಿಸ್ತು. ಗ. ೬೪೩।=ಗೆ ಪುರವರ್ಗ ಉತ್ತಾರ ಶಿಸ್ತು. ಗ. ೧॥೦ ಸಂಬಳ ವುತ್ತಾರ ಗ. ೧॥೦ ಮಾದಿಗರ ಉತ್ತಾರ ಗ. ೦॥೦ ಉಭಯಂಗ ೩॥೦ ಮೂರುವರೆ ವರಹಾದ ಭೂಮಿನುಳಿದು ಶುಧ ನಿಂತ್ತ ಶಿಸ್ತು ಗ. ೫೯।೩।=ಐವತ್ತೊಂಭತ್ತು ವರಹಾವೂ ಯಂಟು ಹಣ ಹಾಗೂ ಬೇಳೇ ಗ್ರಾಮವನ್ನು ಪ್ರಾಕು ಬೆಳಗುತ್ತಿ ಕೃಷ್ಣಪರಾಜರು ಕೂಡಲೀ ಕ್ಷೇತ್ರದಲ್ಲಿ ಯಿರುವ ಶೃಂಗೇರಿ ಮಠದ ಧರ್ಮಕ್ಕೆ ಬಿಟ್ಟು ಯಿದ್ದ ಕಾರಣ ಆ ದಾನಪಟ್ಟೆಯನ್ನು ಮಠಧ ನರಶಿಂಭಟ್ಟನು ಹುಜೂರ ತೆಗೆದುಕೊಂಡು ಬಂದು ತೋರಿಶಿದರಿಂದ ಕಟ್ಲೇಮಾಡಿಶಿ ಯಿಧೀತು. ಯೀ ತೆವರ ಗೋಪಗೊಂಡನಹಳ್ಳೀ ಗ್ರಾಮವನ್ನು ಈ ದಿವಸ ರಥಸಪ್ತಮೀ ಪುಣ್ಯಕಾಲದಲ್ಲಿ ಶಿವಾರ್ಪಿತವಾಗಿ ಪಾಲ್ಲಿಸಿ ಬಿಟ್ಟುಯಿರುವದರಿಂದ ಪ್ರಾಕು ಮೇರೆಗೆ ಕೂಡಲೀ ಶೃಂಗೇರೀ ಮಠಕ್ಕೆ ಸರಾಗದಲ್ಲಿ

ನಡಿಸುತ್ತ ಬರುವದು. ಈ ನಿರೂಪದ ಪ್ರತಿಯನ್ನು ಶ್ಯಾನಭೋಗರ ಕಡಿತಕ್ಕೆ ಬರಸಿ ಮಠದವರ ವಶಕ್ಕೆ ತಿರುಗಿ ಕೊಡುವದಾಗಿ.




———

೭೮. ತಾಮ್ರಶಾಸನ.—ಕೀಲಕ ಸಂ. ವೈಶಾಖ ಶು. ೧೫, ಶಾ. ಶ. ೧೫೯೧, ಕ್ರಿ.ಶ. 1668.

(ಒಂದನೇ ಹಲಿಗೆ ಮುಂಭಾಗ)—

ನಮಸ್ತುಂಗ ಶಿರಶ್ಚುಂಬಿ। ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ। ಮೂಲಸ್ತಂಭಾಯ ಶಂಭವೇ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೯೧ನೇಯ ಕೀಲಕ ಸಂವತ್ಸರದ ವೈಶಾಖ ಶುದ್ಧ ೧೫. ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮ ನಿಯಮಾದ್ಯಷ್ಟಾಂಗಯೋಗ ನಿರುತರಾದ ಕೂಡಲೀ ಮಠದ ಅಮ್ಮಾಜೀ ಸ್ವಾಮಿಗಳ ಸಂಪ್ರದಾಯದ ವಿದ್ಯಾರಣ್ಯ ಭಾರತೀ ಸ್ವಾಮಿಗಳ ಕರಕಮಲ ಸಂಜಾತರಾದ ಶ್ರೀನರಸಿಂಹ ಭಾರತಿಸ್ವಾಮಿಗಳಿಗೆ. ಶ್ರೀಮದ್ದೇಡವ ಮುರಾರಿ ಕೋಟೆ ಕೋಳಾಹಳ ವಿಶುಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಶಿವ ಗುರುಭಕ್ತಿ ಪರಾಯಣರಾದ ಕೆಳದೀ ಸದಾಶಿವರಾಯ ನಾಯಕರ ವಂಶೋದ್ಭವರಾದ ಸಂಕಣ್ಣನಾಯಕರ ಪ್ರಪೌತ್ರರು ಶಿದ್ದಪ್ಪನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರಾದ ಸೋಮಶೇಖರ ನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ। ಪ್ರಾಕು ಹಿರಿ ವೆಂಕಟಪ್ಪನಾಯಕರೂ ಅಮ್ಮಾಜಿಸ್ವಾಮಿಗಳಿಗೆ। ಕೂಡಲೀ ಮಠಧರ್ಮಕ್ಕೆ। ಬಿಟ್ಟ ಕೆರೆಹಳ್ಳಿ ಗಾವಟೂರ ಗ್ರಾಮಗಳೂ। ಮಧ್ಯದಲಿ ವಿಶೀಖಲಿತವಾಗಿದಲಿ

(ಒಂದನೇ ಹಲಿಗೆ ಹಿಂಭಾಗ)—

ಪ್ಲವಂಗ ಸಂವತ್ಸರದ ಮಾರ್ಗಶಿರ ಶುದ್ಧ ೧೫ ಸೌಮ್ಯವಾರ ಸೊಮೋಪರಾಗ ಪುಣ್ಯಕಾಲದಲ್ಲೂ। ಪುನುರುದ್ಧಾರವಮಾಡಿಶಿ ವಾರ್ಷಿಕವಾಗಿಬಿಟ್ಟಿದು। ಕೆರೆಹಳ್ಳಿಶೀಮೇವಳಗಣ ಕೆರೆಹಳ್ಳಿ ಗ್ರಾಮದಿಂದ ಪ್ರಾಕು ರೇಖು ಹಾದ ೨ಳಕ್ಕೆ ಬೀಜವರಿ ಖ ೧೨೦ ಕೆ ಗ ೯೮ ಬರಾಡ ೨ ಲುಗ ೧೯॥೧ ಉಭಯಂ ೧೧೭।೧ ಪಾರ್ಥಿವಸಂವತ್ಸರ ದಲು ಹೆಚಿದುಗ ೨೨।೦ ಉಭಯಂ ಗ ೧೪೦೯೧. ಶ್ರಂಗೇರಿಸ್ವಾಮಿಗಳಿಗೆ ಉತಾರವಾಗಿಹ ಗಾವಟೂರ ಗ್ರಾಮದಿಂದ ವಿಂಗಡಿ ಕೊಟ್ಟದು ಗ೬೦ಉಭಯಂ। ಗ೨೦೯೧ ಯಡತೊರೆ ಶೀಮೆವಳಗಣ ಮಾಚೇನಹಳ್ಳಿ ಗಾಮದಿಂದಲು ರೇಖು ಗ ೫೦ ಬರಾಡ ದಿಂದಲು ಗ ೧೦ ಉಭಯಂ ಗ ೬೦ ಉಭಯಂಗ ೨೬೦೯೧ ಕೆ ವಿವರ। ನಮ್ಮ ಹೆಸರಲ್ಲೂ। ನಿಉ ಮಾಡಿದ ಸೋಮಶೇಖರ ಪುರದ ಆಗ್ರಹಾರದ ಬ್ರಾಂಹ್ಮರಿಗೆ। ನೀವು ಬರಸಿಕೊಟ್ಟ ಪಟ್ಟೆ ಪ್ರಮಾಣೂ। ವಶಿಷ್ಠಗೋತ್ರದ ಅಶ್ವಲಾಯನ ಸೂತ್ರದರುಕು ಶಾಖೆಯ ಕೂಡಲೀ ವೆಂಕಟಾದ್ರಿಬೆಟ್ಟದ ಲಕ್ಷ್ಮೀನಾರಾಯಣಭಟ್ಟರಿಗೆ। ಕೆರೆಹಳ್ಳಿಯಿಂದ ಉತಿ೧೧೦ ಯಜುಶಾಖೆಯವರು। ಆಪಸ್ತಂಭಸೂತ್ರದ ಹರಿತಗೋತ್ರಧ ಘಟದಹಳ್ಳಿ ಬ್ರಂಹ್ಮೇಶ್ವರಭಟರ ಭೈರವಭಟರು ಸಾಮಿಭಟರಿಗ ಕೆರೆಹಳ್ಳಿಯಿಂದಲು ಯಜಮಾನಿಕೆ ಉತಿ ೨ ಹರಿತಗೋತ್ರದ ಅತ್ತೂರಮಯೂರನಾಥಭಟರ ಗೌರಿಪತ್ತಿ ಶಾಸ್ತ್ರಿಗಳಿಗೆ॥

(ಎರಡನೇ ಹಲಿಗೆ ಮುಂಭಾಗ)—

ಗಾವಟೂರಿಂದ ಉತಿ೧ ಗಾರ್ಗ್ಯ ಶೈನ್ಯಗೋತ್ರದ ರಾಮಾಭಟರ ಶಂಕರದೀಕ್ಷಿತರಿಗೆ ಕೆರೆಹಳ್ಳಿಯಿಂದ ಉತಿ ೯೦ ಗಾರ್ಗ್ಯಗೋತ್ರದ ಜಟಿಲಿಂಗಾಭಟರ ಲಿಂಗಾಭಟರಿಗೆ ಕೆರೆಹಳ್ಳಿಯಿಂದ ಉತಿ೧೦ ಭಾರದ್ವಾಜಗೋತ್ರದ

ಲಕ್ಷ್ಮೀನರಸಿಂಹಭಟರ ನಾರಶಿಂಹಭಟರಿಗೆ। ಕೆರೆಹಳ್ಳಿಯಿಂದಲು ಉತಿ ೧೯೦ ಭಾರದ್ವಾಜಗೋತ್ರದ ದಿವಾಕರಭಟ್ಟರ ನಾಗಾಭಟ್ಟರಿಗೆ ಕೆರೆಹಳ್ಳಿಯಿಂದ ಉತಿ ೧೯೦ ಭಾರದ್ವಾಜ ಗೋತ್ರದ ಅಪಾಜಿಭಟರಕೃಷ್ಣಭಟ್ಟರಿಗೆ ಕೆರೆಹಳ್ಳಿಯಿಂದ ಉತಿ೧೯೦ ಕೌಶಿಕಗೋತ್ರದ ಶಂಕರನಾರಾಯಣಭಟರ ನಾರಶಿಂಹಭಟರಿಗೆ ಕೆರೆಹಳ್ಳಿಯಿಂದಲು ಉತಿ೧೯೦ ಭಾರದ್ವಾಜಗೋತ್ರದ ಬಿದನೂರು ಕೃಷ್ಣಭಟರ ಶಂಕರಭಟರಿಗೆ। ಕೆರೆಹಳ್ಳಿಯಿಂದ ಉತಿ೧ ಭಾರದ್ವಾಜಗೋತ್ರದ ಶಂಕರಭಟರ ಮಲ್ಲಾವಧಾನಿಗಳಿಗೆ ಗಾವಟೂರಿಂದ ಉತಿ೧೯೦ ಕೌಂಡಿನ್ಯಗೋತ್ರದ ರಾಮಾಭಟರ ಕೋಲೂರ ಭಟರಿಗೆ ಗಾವಟೂರಿಂದಲೂ ಉತಿ ೧೯೦ ಭಾರದ್ವಾಜಗೋತ್ರದ ಹಾರನಹಳ್ಳಿ ಕಲಪವಾರಣಾಶಿಗಳ ತಿರುಮಲ ಭಟರಿಗೆ ಗಾವಟೂರಿಂದ ೦॥೦ ಭಾರದ್ವಾಜ ಗೋತ್ರದ ದುಸಾಭಟರ ನಾಗಾಭಟರಿಗೆ ಗಾವಟೂರಿಂದ॥೦ ಗಾರ್ಗಶೈನ್ಯ ಗೋತ್ರದ ಕೂಡಲೀ ಶಂಕರದೀಕ್ಷಿತರ ಅಣ್ಣಾವಧಾನಿಗಳಿಗೆ ಗಾವಟೂರಿಂದ ಉತಿ ೧೯೦ ಆತ್ರೇಯಗೋತ್ರದ ಅಶ್ವಲಾಯನಸೂತ್ರದ ಸಾಮಶಾಖೆಯ ವೆಂಕಟಾದ್ರಿ ಪುರಾಣಿಕರ ತಿರುಮಲಪುರಾಣಿಕರಿಗೆ ಗಾವಟೂರಿಂದ ಉತಿ ೧೯೦.

(ಎರಡನೇ ಹಲಿಗೆ ಹಿಂಭಾಗ)—

ಅಂತೂ ಬಾಹ್ಮಣರಿಗೆ ಉತಿ ೧ ಕೆ ಗ ೧೨ಲೂ ಕೆರೆಹಳ್ಳಿಯಿಂದಲೂ ಉತಿ ೭॥೦ ಕೆ ಗ ೬೦ ಗಾವಟೂರಿಂದಲೂ ಭೈರಣ್ಣನಪಾಲಿಂದಲೂ ಉತಿ ೫ ಕೆ ಗ೬೦ ಉಭಯಂ ಮಹಾಜನಂಗಳು ಸಂತಾನಪರಂಪರೆಯಾಗಿ ಅನುಭವಿಸಿ ಕೊಂಡು ಬಾಹಬಗ್ಗೆ। ಬಿಟದು ಉತಿ ೧೨॥೦ ಕೆ ಗ ೧೫೦ ಸೋಮಶೇಖರದೇವರಿಗೆ ಅಮೃತಪಡಿ ನಂದಾದೀಪ್ತಿಗೆ ಕೆರೆಹಳ್ಳಿಯಿಂದ ಗ ೧೨ ಕೋಲೂರಮೂಕಾಂಬಿಕೆ ಅಮ್ಮನವರದೇವತಾ ಶೇವೆಗೆ ತಂಗೆಳ ಗೋವಿಂದಭಟ್ಟಗೆ ಕೆರೆ ಹಳ್ಳಿಯಿಂದ ಗ ೯ ಅಂತೂ ಗ ೧೬೧ ಕೂಡಲಿಯ ಮಠದ ಧರ್ಮಸತ್ರ ಧರ್ಮಕೆ ಮಾಚೇನಹಳ್ಳಿಯಿಂದಲೂ। ೧ ಗ ೬೦ ಕೆರೆಹಳ್ಳಿಯಿಂದಲೂ ಗ ೨೮೯೧ ಉಭಯಂ ಗ ೮೯೧ ಕಾಶೀಧರ್ಮಕ್ಕೆ ಕಾಶ್ಯಪಗೋತ್ರದ ಆಪಸ್ತಂಭಸೂತ್ರದ ಯಜುಶ್ಯಾಖೆಯ ವಿಶ್ವ ನಾಥಶಾಸ್ತ್ರಿಗಳ ಲಕ್ಷ್ಮಣಭಟರಿಗೆ। ಕೆರೆಹಳ್ಳಿಯಿಂದಲೂ ಉತಿ ೧೯೦ಕೆ ಗ ೯ ಉಭಯಂಗ ೮೯೧ ಉಭಯಂ ಗ ೨೬೮೧ ಯಿನ್ನೂರ ಅರವತ್ತು ವರಹ ನೂವಂದು ಹಣವಿನ ಭೂಮಿಯನ್ನು ಸೋಮ ಶೇಖರಪುರದ ಅಗ್ರಹಾರ ದೇವಸ್ಥಾನ ಕೂಡಲಿ ಮಠದ ಧರ್ಮಸತ್ರ ಕಾಶೀಧರ್ಮಕ್ಕೆ ಸಹಾ। ಶಿವಾರ್ಪಿತವಾಗಿ ಬಿಟ್ಟೇವಾಗಿ ಈ ಗ್ರಾಮದ ಭೂಮಿಗೆ ಸಲ್ಲುವ ಚತುರ್ಸಿಮೆಡಿವಳಗುಳ ನಿಧಿನಿಕ್ಷೇಪ ಜಲಪಾಶಾಣ ಅಕ್ಷಿಣಿ ಆಗಾಮಿಸಿದ ಸಾದ್ಯಂಗಳೆಂಬ ಅಷ್ಟ

(ಮೂರನೇಹಲಿಗೆ ಮುಂಭಾಗ)—

ಭೋಗತೇಜ ಸ್ವಾಮ್ಯವನು ಪೂರ್ವ ಮರಿಯಾದೇಲಿ ಆಗುಮಾಡಿಕೊಂಡು ನಿಮ್ಮ ಶಿಸ್ಯಪರಂಪೆರೆಯಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಅಗ್ರಹಾರ ಮಠಧರ್ಮವನು ನಡಿಸಿಕೊಂಡು ಸುಖದಿಂ ಅನುಭವಿಸಿ ಬಾಹದುಯಂದು ಕೊಟ್ಟಧರ್ಮಶಾಸನ। ದೇವಸಾಕ್ಷಿ। ಆದಿತ್ಯಚಂದ್ರಾವನಿಲೋನಲಶ್ಚದ್ಯೌರ್ಭೂಮಿರಾಪೋ ಹೃದಯಂಯಮಶ್ಚ। ಅಹಶ್ಚರಾತ್ರಿಶ್ಚ ಉಭೇಚ ಸಂಧ್ಯೇಧರ್ಮಶ್ಚ ಜಾನಾತಿ ನರಸ್ಯ ಉತಂ॥ ದಾನಪಾಲನಯೋ ರ್ಮಧ್ಯೇ ದಾನಾಛ್ರೇ ಯೋನುಪಾಲನಂ। ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ। ಸ್ವದತ್ತಾ ದ್ವಿಗುಣಂಪುಣ್ಯಂ ಪರದತ್ತಾನುಪಾಲನಂ। ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತು। ಸ್ವದತ್ತಾಂ ಪರ ದತ್ತಾಂ ವಾಯೋಹರೇತವಸುಂಧರಾಂ ಶಷ್ಟಿ ವರ್ಶಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ಯೇಕೈವ ಭಗಿನೀ ಲೋಕೇ ಸರ್ವೇಶಾಮೇವ ಭೂಭುಜಾಂ। ನಭೊಗ್ಯಾ ನಕರಗ್ರಾಹ್ಯ ವಿಪ್ರದತ್ತಾ ವಸುಂಧರಾ॥

ಶ್ರೀ ಸದಾಶಿವ

———

೭೯. ಲೇಖನ.—(ಸುಮಾರು) ಆನಂದ, ಶಾ. ಶ. ೧೫೯೭, ಕ್ರಿ. ಶ. 1675.

೦॥ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ
ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ। ಯಮ

ನಿಯಮಾದ್ಯಷ್ಟಾಂಗಯೋಗ ನಿರತರಾದ ಕೂಡಲೀ
ನರಸಿಂಹಭಾರತೀಸ್ವಾಮಿಗಳಿಗೆ—

ಕೆಳದೀ ಚನ್ನಮ್ಮಾಜಿಯವರು ಮಾಡುವ ನಮಸ್ಕಾರ. ಕಳುಹಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಮನಸ್ಸಿಗೆ ತಂದೆವು. ಚಾತುರ್ಮಾಶ್ಯ ಸಂಕಲ್ಪಮಾಡಿದ ಸಂಬಂಧ ವ್ಯಾಸಾಕ್ಷತೆ ಪ್ರಸಾದಾಸಹ ಕಳುಹಿಸಿದೇವೆಂಬಹಾಗೆ ಬರಸಿದ್ರೀ ಬಂದಲ್ಲಿ ತೆಗೆದುಕೊಂಡೇವಾಗಿ.

ಶ್ರೀ
ವೀರभद्र

---

೮೦. ಲೇಖನ.—ಸುಮಾರು ಆನಂದ ಸಂ., ಶಾ. ಶ. ೧೫೯೭, ಸುಮಾರು ಕ್ರಿ. ಶ. 1675.

೦॥ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯಮಾದ್ಯಷ್ಟಾಂಗಯೋಗ ನಿರುತರಾದ ಕೂಡಲೀ ನರಸಿಂಹಭಾರತೀ ಸ್ವಾಮಿಗಳಿಗೆ।

ಕೆಳದೀ ಚನ್ನಂಮ್ಮಾಜಿಯವರು ಮಾಡುವ ನಮಸ್ಕಾರ। ನೀವು ಮಹಾನುಭಾವರು। ತಪೋನಿಷ್ಟರಾಗಿಹಲ್ಲಿ ವಿಶೇಷ ಬರಸುವಂಥಾದೇನದೆ। ಈಗ ನಿಮಗೆ ಉಡುಗೊರೆಯಾಗಿ ಶಹಲುವಲ್ಲಿಯನೂ ಕಟ್ಟಿಸಿ ತಿಂಮಣನ ಸಂಗಡ ಕಳುಹಿಧೇವೆ। ತೆಗೆದುಕೊಂಬಹಾಗೆ ಮಾಡಬೇಕಾಗಿ

ಶ್ರೀ
ವೀರभद्र

---

೮೧. ಲೇಖನ.—ಕಾಳಾಯುಕ್ತಿ ಸಂ., ಶಾ. ಶ. ೧೬೦೦, ಕ್ರಿ. ಶ. 1678.

೦॥ ಕಾಳಯುಕ್ತಾಕ್ಷಿ ಸಂವತ್ಸರದ ನಶ್ವೀಜ ಬ. ೧೩ಲ್ಲೂ ಶ್ರೀಮತ್ ಕೆಳದಿ ಚನ್ನಮ್ಮಾಜಿಯವರು ಶಿವಮೊಗ್ಗೆ ಪಟ್ಟಣ। ಹೊಳೇಹೊನ್ನೂರು . . . . ಗೆ ಬರಸಿ ಕಳುಹಿದಕಾರ್ಯ. ಕೂಡಲೀಯ ಸ್ವಾಮಿಗಳು ತಮ್ಮ ಮಠವ ಕಟ್ಟಿಸುವಲ್ಲಿಗೆ ಮರನ ಕಡಿದು ತಂದು ಕೊಂಬಲ್ಲಿಗೆ ಅಪ್ಪಣೆಯಾಗಬೇಕೆಂದು ಬರೆದಿದ್ದ . . . ಯೆಂದ್ರ ಕಡುವವಳ ಕೈಯಾಗೆ . . . . ಲ್ಲಿ ಮರನ ಕಡಿದು ತಂದುಕೊಂಬ ರೀತಿ ಕಟ್ಟುಮಾಡಿಸಿ ತಡೆಯದ ಹಾಗೆ ಹೊಳೆ ಹೊ . . . . . . . . . ವಲವರಿಗೆ ಕಟ್ಟುಮಾಡಿಸುವದು ಅವರಿಗೆ ಕೊಟ್ಟಿದ್ದ . . . . . . .

ಶ್ರೀ
ವೀರभद्र

---

೮೨. ಲೇಖನ.—ಕಾಳಯುಕ್ತಾಕ್ಷಿ, ಮಾರ್ಗಶೀರ್ಷ, ಶಾ. ಶ. ೧೬೦೦, ಕ್ರಿ.ಶ. 1678.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾದ್ಯಷ್ಟಾಂಗ ಯೋಗನಿರತರಾದ ಕೂಡಲೀ ಶಂಕರಭಾರತೀ ಸ್ವಾಮಿಗಳಿಗೆ.

ಕೆಳದೀ ಚನ್ನಂಮಾಜಿಯವರು ಮಾಡುವ ನಮಸ್ಕಾರ। ನಮ್ಮ ಕುಮಾರ ಬಸಪ್ಪನಾಯಕರ ವಿವಾಹದ * ತದಂಗ ಉಡುಗೋರೆಯನ್ನು ಕಟ್ಟಿಸಿ ವೆಂಕಣನ ಕೈಯಲ್ಲಿ ಕಳುಹಿಸಿದ್ದೇವೆ. ತೆಗೆದುಕೊಂಬಹಾಗೆ ಮಾಡುವದಾಗಿ




———

೮೩. ಲೇಖನ—ದುರ್ಮತಿ ಸಂ. ಮಾಘ, ಬ. ೧೪, ಶಾ. ಶ. ೧೬೦೩, ಕ್ರಿ. ಶ. 1682.

ದುರ್ಮತಿ ಸಂವತ್ಸರದ ಮಾಘ. ಬ. ೧೪. ಲ್ಲೂ ಶ್ರೀಮತ್ ಕೆಳದೀ ಚನ್ನಮ್ಮಾಜಿಯವರು। ಚನ್ನವೀರ ವಡೇರಿಗೆ ಶರಣಾರ್ಥಿ ಆದಾಗಿ ಕೂಡಲಿಯಲ್ಲಿ ಇರುವ ಶೃಂಗೇರಿ ಮಠದ ನರಶಿಂಭಟ್ಟ. ವಿರೂಪಾಕ್ಷ ಶಾಸ್ತ್ರಿಯು ಹುಜೂರು ಬಂದು ಶ್ರೀ ಮಠಕ್ಕೆ ಪ್ರಾಕಾರಭ್ಯ ಹೊಳೆಹೊನ್ನೂರ ಶೀಮೆಯಲ್ಲೂ ಮೂಡಣಪಾಲು. ಅಗ್ರಹಾರ ಪಂಚಗ್ರಾಮ. ಉ ಉತ್ತಾರವಾಗಿ ನಡೆದು ಬರುತ್ತಾಯಿದ್ದಲ್ಲಿ ಯಿತಲಾಗಿ ಯೀ ಗ್ರಾಮವು ಅರಮನೇ ಅಧೀನವಾಗಿ ಅದೆ. ಪೂರ್ವಪ್ರಮಾಣು ಅಪ್ಪಣೆ ಅಗಬೇಕೆಂದು ಹಿರೇಕರ್ತರು ಬರಶಿಕೊಟ್ಟ ನಿರೂಪವನ್ನು ತಂದು ತೋರಿಸಿದ್ದರಿಂದ್ದ ವೋದಿಕೇಳಿ ಮನಸ್ಸಿಗೆ ತಂದು ಯೀ ಗ್ರಾಮದ ಪ್ರಾಕು ರೇಖೆ. ಗ. ೧೦೦ಕ್ಕೆ ದೇವತಾ ಉತ್ತಾರ ಗ.೨॥೦ ಪುರವರ್ಗ. ಗ ೩೭೪. ಉಂಬಳಿ ಉತಾರ. ಗ. ೪೯೦. ಅಂತೂರ್ಗ ॥ ೪ ಶುದಶಿಸ್ತು ಗ ೯೦೮೧ ದ ಭೂಮಿಯನ್ನು ಶೃಂಗೇರಿ ಶಂಕರ ಭಾರತೀ ಸ್ವಾಮಿಗಳವರೂ ಕೂಡಲೀ ಸಂಗಮದಲ್ಲೂ ಯಿರುವದ್ಧರಿಂದ ಶ್ರೀ ವಿದ್ಯಾಶಂಕರ ಚಂದ್ರಮಾ ಳೀಶ್ವರ ದೇವರ ದೀಪಾರಾಧನೆ ನವರಾತ್ರೇಪೂಜೆ ಸತ್ರದ ಧರ್ಮಕ್ಕೆ ಸಹಾ ನಡಶಿಕೊಡಬೇಕೆಂದು। ಕೋಳವಾಡದ ಬೊಮ್ಮಯ್ಯ ಕರಣೀಕ ಕೋನಯ್ಯನು ಸ್ವಯಂ ಹೇಳಿಕೊಂಡ ಸಂಬಂಧ ಯಿದೇಶಿವಯೋಗದಲ್ಲೂ ಶಿವಾರ್ಪಿತವಾಗಿ ಕೊಟ್ಟುಯಿದ್ದೇವೆ. ನೀವು ಈ ಮಠದ ನರಶಿಂಭಟ್ಟ ವಿರೂಪಾಕ್ಷ ಶಾಸ್ತ್ರೀಗೆ। ಯೀ ಗ್ರಾಮದಲ್ಲೂ ಯೇನೂ ಹುಟ್ಟುವಳಿ ಯಿದ್ದದನ್ನು ತತ್ವಾರಯಿಲ್ಲದಹಾಗೆ ಮಠಕ್ಕೆ ನಡಸಿಕೊಡುತ್ತಾ ಬರುವದು ಈ ಕಾಗದವನ್ನು ಸ್ಥಳದ ಶ್ಯಾನುಭೋಗರ ಕಡಿತಕ್ಕೆ ಬರಸಿ ತಿರುಗಾಯೀ ಬ್ರಾಹ್ಮಣರ ವಶಕ್ಕೆ ಕೊಡುವದು.




———

೮೪. ಲೇಖನ—ದುಂದುಭಿ ಸಂ., ಮಾಘ. ಬ. ೧೪, ಶಾ. ಶ. ೧೬೦೪, ಕ್ರಿ. ಶ. 1683.

ಶೃಂಗೇರೀ ಶ್ರೀ ಶಂಕರಭಾರತೀ ಸ್ವಾಮಿಗಳವರಿಗೆ—ಶ್ರೀಮತ್ಕೆಳದೀ ಚಂನಂಮ್ಮಾಜಿಯವರು ಚನ್ನವೀರ ವಡೆರಿಗೆ ಶರಣಾರ್ಥಿ॥ ಅದಾಗಿ ಕೂಡಲಿಯಲ್ಲೂ ಯಿರುವ ಶೃಂಗೇರೀ ಮಠದ ನರಶಿಂಭಟ್ಟ. .ವಿರೂಪಾಕ್ಷ ಶಾಸ್ತ್ರಿಯು

* ಈ ಲೇಖನಕ್ಕೆ ಇಸವಿ ನಮೂದಿಲ್ಲ. ಈ ವಿವಾಹವು ಕಾಳಯುಕ್ತಿ ಸಂ॥ ಮಾರ್ಗಶಿರ ಮಾಸದಲ್ಲಿ ನಡೆದಂತೆ "ಕೆಳದಿನೃಪ ವಿಜಯ" (೧೩೪ನೇ ಪುಟ) ದಿಂದ ತಿಳಿಯುವ ಪ್ರಕಾರ ಕಾಲ ನಮೂದಿಸಿದೆ.

ಶೃಂಗೇರೀ ಮಠಕ್ಕೆಪ್ರಾಕು ತರೀಕೆರೆ ಹನುಮಪ್ಪನಾಯಕರು ಮಠಕ್ಕೆ ಧರ್ಮವಾಗಿ ಬರಸಿಕೊಟ್ಟ* ದಾನಪಟ್ಟೆ ತೆಗೆದುಕೊಂಡು ಬಂದು ಹೇಳಿಕೊಂಡುದರಿಂದ। ಭೂದಾನ ಪಟ್ಟಿ ವಿಚಾರಿಸಿದಲ್ಲಿ ಪ್ರಾಕುಮಲ್ಲೂರ ಶೀಮೆಯು॥ ಮಠಕ್ಕೆ ನಡೆದುಬರುವದು ಎಂದು ಹನುಮಪ್ಪನಾಯಕರು ಬರಸಿಕೊಟ್ಟದನ್ನು ನೋಡಿ। ಪ್ರಾಕುಕರ್ತರು ಆ ಧರ್ಮಉ ನಡೆಯಲಿ ಎಂಬಹಾಗೆ ಬರಸಿಕೊಟ್ಟ ನಿರೂಪವನ್ನು ಪ್ರೋದಿಸಿ ಕೇಳಿ ಮನಸಿಗೆ ತಂದು. ಮಲ್ಲೂರ ಶೀಮೆ. ಪ್ರಾಕು. ರೆಖೆ. ಗ ೩೬೮೮ ತ ೨ಕ್ಕೆ ಪ್ರಾಕುರೇಖೆ ಉತ್ತಾರ। ದೇವತಾ ಉತ್ತಾರ। ಗ ೯೦ ಹಿರೇಕರ್ತರು. ಪಾಲಿಸಿದ ಉತ್ತಾರ। ಕೊಲ್ಲೂರ ಮೂಕಾಂಬಿಕೆ ಅಮ್ಮನವರಿಗೆ। ಗ. ೨೫. ಕೆಂಚಿಗಾಪುರದ ವೀರಭದ್ರದೇವರಿಗೆ। ಗ. ೨೫. ಅಂತೂ ೧೪೦ ಬಹ್ಮಾದಾಯ ಭಟಮಾನ್ಯ ಗ. ೧೭೫ ಅಗ್ರಹಾರ ಉತ್ತಾರ ಚಿಲೀಮಲ್ಲೂರು। ಗ ೬೫ ಕುಣಿಗಲಗಟ್ಟಿ. ಗ. ೬೮ ಕಾಮಲಾಪುರ। ಗ. ೬ ಕೂಡಲೀ ರಾಮಚಂದ್ರ ಸ್ವಾಮಿಗಳಿಗೆ। ಬುಳಾಪುರ। ಗ ೨೦ ವ ಹುರಳಿ ಹಳ್ಳಿ ಗ. ೬ ಪುರವರ್ಗಉತ್ತಾರ। ಮಠದ ವಡೇರಿಗೆ ಗ. ೪೨. ರಾಮ ಭೈರಾಗಿಗೆ ಗ. ೬. ಗೌಡುಂಬುಳಿ ಗ. ೨೪೦ ತಳವಾರ ಉಂಬಳಿ ಗ. ೨೫ ಬಡಗೇರಿಗೆ। ಗ. ೭. ಅಕ್ಕಸಾಲಿಗೆ ಗ ೧ ಕಮ್ಮಾರಿಗೆ ಗ. ೫ ಪೋತ್ತಾರಗೆ ಗ. 11 ಕೆರೆಕಟ್ಟು। ಗ. 11 ಕೊಳಲುತಪ್ಪ ೬ೀ ವಾದ್ಯದವರಿಗೆ। ಗ. ೨ ಅಂಬಿಗ. ಗ. ೧ ಮಾದಿಗ ೧೫. ಸಂಬಳ ಉತ್ತಾರ ಗ. ೫. ಆಳು ಉತ್ತಾರ। ಗ. ೭೦. ಅಂತೂ ಉತ್ತಾರ। ಗ. ೯೦೦ ಶುಧ ನಿಂತ ಶಿಸ್ತುಗ. ೨೭೮೮ ೯೨ . . ನ ಭೂಮಿಯನ್ನು॥ ಕೂಡಲೀ ಸಂಗಮದಲ್ಲಿಯಿರುವ ಶ್ರೀ ವಿದ್ಯಾಶಂಕರ ಚಂದ್ರಮೌಳೀಶ್ವರ ೯೨ ದೇವರ ದೀಪಾರಾಧನೆ. ನವರಾತ್ರೀ ಪೂಜೆ ಅನ್ನ ಸತ್ರ ಧರ್ಮಕ್ಕೆ ಸಹಾಯು ನಡಸಿಕೊಡಬೇಕುಯಂದು ಕೋಳಿವಾಡದ ಬೊಮ್ಮಯ್ಯ ಕರಣೀಕ ಕೋನಯ್ಯನು ಹೇಳಿಕೊಂಡುದರಿಂದ। ದುಂದುಭಿ ಸಂ। ದ ಮಾಘ. ಬ. ೧೪. ಶಿವಯೋಗದಲ್ಲೂ ಶಿವಾರ್ಪಿತವಾಗಿ ಕೊಟ್ಟು ಯಿಥೇವೆ। ನೀವು ಮಠದ ನರಸಿಂಹ ಭಟ್ಟ ವಿರೂಪಾಕ್ಷಶಾಸ್ತ್ರಿಗೆ। ಶೀಮೆಯಲ್ಲೂ ನಾವು ಬರಶಿಕೊಟ್ಟ ಶಿಸ್ತಿನ ಭೂಮಿಯಲ್ಲು ಏನು ಹುಟ್ಟುವಳಿ ಇದ್ದದನ್ನು ತತ್ವಾರ ಇಲ್ಲದಹಾಗೆ ಮಠಕ್ಕೆ ಸಾಕಲ್ಯವಾಗಿ ನಡಸಿಕೊಡುವದು. ಯೀ ಕಾಗದವನ್ನು ಸ್ಥಳದ ಶ್ಯಾನಭೋಗರ ಕಡಿತಕ್ಕೆ ಬರಶಿ ಪುನಹ ಯೀ ಬ್ರಾಹ್ಮಣರ ವಶಕ್ಕೆ ಕೊಡುವದು. ಯಿದೂಡು ಕರಸಾಲಾಗದು.




———

೮೫. ಲೇಖನ.—ಕ್ರೋಧನ ಸಂ., ಜೇಷ್ಠ ಶು. ೧೫., ಶಾ. ಶ. ೧೬೦೭, ಕ್ರಿ. ಶ. 1685.

ಕ್ರೋಧನ ಸಂವತ್ಸರದ ಜೇಷ್ಠ. ಶು. ೧೫ ಲ್ಲೂ ಶ್ರೀ ಮತ್ತು ಕೆಳದಿ ಚನ್ನಮ್ಮಾಜಿಯವರು. ಕಣಿಕೆ ದುಗಂಣಗೆ ಬರಸಿಕಳುಹಿಸ್ತ ಕಾರ್ಯ ಶ್ಯಾಮಜಿನಾಯಕರು ಮಾಡಿದ ಅಗ್ರಹಾರ ಧರ್ಮಕ್ಕೆ ಶಿವಾರ್ಪಿತವಾಗಿ ಬಿಟ್ಟ ಹೊಳೆ ಹೊನ್ನೂರಶೀಮೆವಳಿತ್ತವಾದ ಬೆಂಕಿಪುರದಶೀಮೆ ಭಾರಂದೂರ ಗ್ರಾಮವನ್ನು ಶೃಂಗೇರಿ ಕೂಡಲೀಮಠದ ಸತ್ರ ಧರ್ಮಕ್ಕೆ ಕೊಡುತ್ತೇವೆ. ಯೀ ಬಗ್ಗೆ ನಿರೂಪು ಅಪ್ಪಣೆ ಆಗಬೇಕೆಂದೂ, ಶ್ಯಾಮಜೀನಾಯಕರು ತಮ್ಮ ಪಿತ್ಥಲ ಗೋಪಾಲ ಪಂಡಿತರು ಹುಜೂರಿಗೆ ಬಂದು ಕಾಣಿಕೆ ಕೊಟ್ಟೆವುಯಂದು ಅರಿಕೆ ಮಾಡಿಕೊಂಡದ್ದರಿಂದ ಯೀಮಠದ ಲಿಂಗಾಭಟ್ಟನ ಮುಖಾಂತರ ರೂಪಾಯಿ ೧೫೦೫ ಸಾವಿರದ ಐನೂರು ಐದು ರೂಪಾಯಿಯನ್ನು ತೆಗೆದುಕೊಂಡು ಯಿಥೇವೆ. ಯೀ ಗ್ರಾಮದ ವಕಲು ಸಹಾ ಯೀ ಶೃಂಗೇರಿ ಮಠದವರ ಹವಾಲೂ ಮಾಡಿಕೊಟ್ಟು ಈ ಕಾಗದವನ್ನು ಶ್ಯಾನುಭೋಗರ ಕಡಿತಕ್ಕೆ ಬರಸಿ ತಿರುಗಾ ಮಠದವರ ವಶಕ್ಕೆ ಕೊಡುವದಾಗಿ.




———

* ಈ ದಾನಪತ್ರ ಸಿಕ್ಕಿಲ್ಲವಾದ ಪ್ರಯುಕ್ತ ತರೀಕೆರೆ (ಸಂತೆಬೆನ್ನೂರ) ಪಾಳೆಯಗಾರರ ದಾನಶಾಸನಗಳಲ್ಲಿ ಇದು ಸೇರಿಲ್ಲ.

### ೮೬. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀ ಮತ್ಸಕಲ ಗುಣಸಂಪನ್ನರಾದ ರಾಜಮಾನ್ಯ ರಾಜೇಶ್ರೀ ಚಿಕ್ಕಣ್ಣನವರಿಗೆ। ನಿರ್ವಾಣಯ್ಯನವರು ಮಾಡುವ ಶರಣಾರ್ತಿ ಶೃಂಗೇರಿ ಶ್ರೀಸ್ವಾಮಿಗಳು ಯಿಲ್ಲಿಗೆ ಆಗಮಿಶಿದ್ದಲ್ಲಿ ದೆಂಪುರದ ಗ್ರಾಮದಲ್ಲಿ। ಗ. ೩೦ ಮೂವತ್ತು ವರಹಾನಡೆದು ಬರುತ್ತಿದ್ದಲ್ಲಿ। ಮಧ್ಯೆ ಯೀ ಹಣವಿಗೆ ಮೊಗಲರ ಪಟ್ಟಿ ಗ. ೩ ॥೨॥ ಮೂರು ವರಹಾನ್ನೂ ಏಳುಹಣ ಅಡ್ಡವನ್ನು ತೆಗೆದುಕೊಂಡು ಬರುತ್ತಾರೆ. ಈ ಹಣವನ್ನು ಬಿಡಿಸಿ ಸಾಲಾ ಬಾದುಪ್ರಮಾಣು ಗ. ೩೦ ಮೂವ್ವತ್ತು ವರಹಾನಡೆದು ಬಾಹರೀತಿ ಮಾಡಿಸಬೇಕೆಂಬ ಹಾಗೆ ಪ್ರಸಂಗಿಸಿದಲ್ಲಿ। ಅದೇ ರೀತಿಗೆ ಅರಮನೆಗೆ ತೆಗೆದುಕೊಂಡು ಬಾಹ ಗ. ೩ ॥೨॥ ಮೂರು ವರಹ ಏಳುಹಣವಡ್ಡವನ್ನು ಬಿಡಿಸಿ। ಆಯಕಟ್ಟು ಪ್ರಕಾರ। ಗ. ೩೦ ಮೂವತ್ತು ವರಹಾನ್ನು ಕಾಲಕಾಲಕ್ಕೂ ನಡದು ಬಹಾರೀತಿಗೆ ನೇಮಕ ಮಾಡಿದೇವೆ. ಆ ರೀತಿಗೆ ಗ. ೩೦ ಮೂವತ್ತು ವರಹನ ಕಾಲಕಾಲಕ್ಕೂ ನಡಿಸಿ ಕೊಡುವಹಾಗೆ ಮಾಡುವದು. ಈ ಕಾಗದವನ್ನು ಅರಮನೆ ಕಡಿತಕ್ಕೆ ಬರಸಿ. ತಿರುಗಿ ಅವರ ವಶಕ್ಕೆ ಕೊಡುವದಾಗಿ। ಇಂತಿ ಶರಣಾರ್ತಿ.

---

### ೮೭. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತು ನಿರ್ವಾಣಯ್ಯನವರು ಚನ್ನಣ್ಣಗೆ ಆಶೀರ್ವಾದ ಕಳುಹಿಸಿದ ವಾಲೆಯಿಂದ ನೋಡಿಕೊಂಡೆವು. ಕೂಡಲೀಮಠಕ್ಕೆ ಉತ್ತಾರವಾದ ಮಾಚೇನಹಳ್ಳಿ ಗಡಿಕಲ್ಲಿನ ವಳಗಣ ಭೂಮಿಯನ್ನೂ ನಿದಿಗೆ ಸಂಕಲಾಪುರದಗ್ರಾಮದ ವರು ವತ್ತಿಗೆಯ್ದುಕೊಳ್ಳುಥಾರೆಂದು ಆ ಮಠದವರು ಬಂದು ಹೇಳಲಾಗಿ ಹೊಕ್ಕುನೋಡಿ ವತ್ತಿಗೆಯ್ದು ಯಿಹದು ಅಹುದಾ ದರೆ ಆ ಭೂಮಿಯ ಬಿಡಿಸಿಕೊಡುವುದು ಎಂದು ಮೊದಲು ಬರಸಿದಲ್ಲಿ ನೀನೂ ಶ್ಯಾನುಭೋಗರೂ, ಶೀಮೆ ಗೌಡಗಳು ಠಾಣಾದಾರ ಸಿವಯ್ಯ ಸಹ ಹೋಗಿ ನೋಡಿದಲ್ಲಿ ನಿದಿಗೆ ಗ್ರಾಮಕ್ಕೆ ಚೆನ್ನಾಗಿ ಮಾಚೇನಹಳ್ಳಿ ಗ್ರಾಮಕ್ಕೆ ಮುಖವಾಗಿ ನೆಟ್ಟಿರುವ ವಾಮನಮುದ್ರೆ ಕಲ್ಲುಗಳ ವಿವರಕ್ಕೆ ಉಳುವದಿ ಬರಸಿ ಕಳುಹಿಸಿ ಇದೇನೆ ಆ ಕಲ್ಲಿನ ವಳಗಣ ಭೂಮಿಯು ನಿದಿಗೆ ಸುಂಕಲಾಪುರದವರು ವತ್ತಿಗೆಯ್ದಭೂಮಿ. ವಕ್ಕಲುಗಳಕರಸಿ ಕೇಳಿದಲ್ಲಿ ಐವತ್ತೆರಡು ವರುಷಗಳ ಪರಿಯಂತ್ರ ಸಾಗುಬರಸಿ. ಯಿದಾರೆ ಹೀಗೆ ಯಿದ್ದಲ್ಲಿ ಅಪ್ಪಣೆ ಹೊರತಾಗಿ ಬಿಡಿಸಿ ಕೊಡುವುದಿಲ್ಲವೆಂಬದರಿಂದ ಯಿಲ್ಲಿಗೆ ಬರಸಿ ಕಳುಹಿಸಿ ಯಿದ್ದೇನೆ: ಯಿಂದು ಬರದು ಯಿಥೆ. ವಾಮನ ಮುದ್ರೆ ಕಲ್ಲಿನ ವಳಗಣ ಭೂಮಿಯಾ ನಿದಿಗೆ ಗ್ರಾಮ ದವರು ವತ್ತಿಗೆ ಯಿದ ಸಂಬಂಧವೇನು ಮಾಚೇನಹಳ್ಳಿ ಗ್ರಾಮದವರಿಗೆ ಬಿಡಿಸಿಕೊಟ್ಟು ಆ ವಿವರಕ್ಕೆ ಬರಸಿ ಕಳುಹೋ ದಾಗಿ ಯೀ ವಾಲೆಯು ಶಾನಭಾಗರ ಕಡಿತಕ್ಕೆ ಬರಸಿ ತಿರುಗಿ ಮಠದ ನರಶಿಂಹ ಭಟ್ಟನ ವಶಕ್ಕೆ ಕೊಡುಸೋ ದಾಗಿ॥

---

### ೮೮. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ ಶ. 1717.

ಶ್ರೀಮತ್ಸಕಲ ಗುಣ ಸಂಪನ್ನರಾದ ಮಹದೇವ ಪುರದ ಶಿವಯ್ಯನವರಿಗೆ ನಿರ್ವಾಣಯ್ಯನವರು ಮಾಡುವ ಶರಣಾರ್ಥಿ ನಾವು ಪರುಣಾಮದಲ್ಲಿಯಿದ್ದೆವೆ. ನಿಮ್ಮ ಪರುಣಾಮಕ್ಕೆ ಬರಸಿ ಕಳುಹೋದು ಕೂಡಲೀ ಮಠಕ್ಕೆ ಉತ್ತಾರವಾದ ಮಾಚೇನ ಹಳ್ಳಿ ಗ್ರಾಮದ ಗಡಿಗೆ ನೆಟ್ಟ ವಾಮನ ಮುದ್ರೆಕಲ್ಲಿನ ವಳಗಣ ಭೂಮಿಯನ್ನು ನಿದಿಗೆ ಸೋಕಲಾಪುರದ ಗ್ರಾಮದವರು ವತ್ತಿಗೇಯ್ಯುತ್ತಿದ್ದಾರೆಂಬ ವಿಚಾರಕ್ಕೆ ಹೊಕ್ಕು ನೋಡಿದ ಅಭಿಪ್ರಾಯಕ್ಕೆ ಬರಸಿ ಕಳುಹಿದ್ರೀ ಆ ಭೂಮಿಯನ್ನು ಮಾಚೇನಹಳ್ಳಿ ಗ್ರಾಮದವರಿಗೆ ಬಿಡಿಸಿ ಕೊಡುವ ರೀತಿಗೆ ಮಣೆಹಗಾರ ಚನ್ನಣ್ಣಗೂ ಬರಸಿ ಯಿಥೇವೆ. ನೀವೂ ತಾಕೀತಿಮಾಡಿ ಆ ಭೂಮಿಯನ್ನು ಅವರಿಗೆ ಬಿಡಿಸಿಕೊಟ್ಟು ಆ ವಿವರಕ್ಕೆ ಬರಸಿ ಕಳು ಹೋದಾಗಿ॥

---

### ೮೯. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮುತು ನಿರ್ವಾಣಯ್ಯನವರು. ಉಡುಗಣಿತಾಣದಾರ ಶಿವಲಿಂಗಯ್ಯಗೆ ಶರಣಾರ್ಥಿ. ಕೂಡಲೀಮಠದವರು. ಆ ಪ್ರಾಂತ್ಯದ ಅಗ್ರಹಾರಗಳು ಮುಂತಾದ ಬ್ರಾಹ್ಮಣರ ಅಚಾರ ವಿಚಾರವ ವಿಚಾರಿಸಿಕೊಳ್ಳುತಿದ್ದಲ್ಲಿ. ವಂದರೆ ತಡವುತ್ತಿದ್ಧಾರಂತೆ. ಪೂರ್ವಪ್ರಕಾರವಿಚಾರಿಸಿ. ಕೊಂಡಾರು. ಮೇಲಾದವರು. ಆತಳಿ ಹೋಗದ ರೀತಿ. ಕಟ್ಟುಮಾಡಿಸುವುದಾಗಿ ॥

---

### ೯೦. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತುಗುಡುವೆ ಲಿಂಗಯ್ಯನಿಗೆ. ನಿರ್ವಾಣಯ್ಯನವರ ಶರಣಾರ್ತಿ. ಮಹದೇವಪುರದ ಶೀಮೆ ಅಗ್ರಹಾರಗಳು. ಮುಂತಾದ ಬ್ರಾಹ್ಮರ ಆಚಾರ ವಿಚಾರ ಮುಂತಾಗಿ ಕೂಡಲೀ ಮಠದವರು. ಪೂರ್ವಪ್ರಕಾರ ವಿಚಾರಿಸಿಕೊಳ್ಳುತಿದ್ದಲ್ಲಿ ವಂದರೆ ತಡವುತ್ತಿದ್ದಾರಂತೆ. ಯಂದಿನ ರೀತಿ ಈ ಕೂಡಲಿಯವರು ವಿಚಾರಿಸಿಕೊಂಡಾರು ಮೇಲಾದವರು. ಆ ತಳಿ ಹೋಗದ ರೀತಿ ಕಟ್ಟುಮಾಡುವುದಾಗಿ ॥

---

### ೯೧. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ.ಶ. 1717.

ಶ್ರೀಮತು ನಿರ್ವಾಣಯ್ಯನವರು. ಉಡುಗಣಿ ಮಹದೇವಪುರದ ಜಡೆಯದ ಶೀಮೆ. ಅಗ್ರಹಾರಗಳ ಬ್ರಹ್ಮಪುರಿಗೆ ಆಶೀರ್ವಾದ ಈ ಪ್ರಾಂತ್ಯದಲ್ಲ ಆಚಾರ ವಿಚಾರ ಮುಂತಾಗಿ ಕೂಡಲೀ ಮಠದವರು. ವಿಚಾರಿಸಿಕೊಳ್ಳುತ್ತಿದ್ದಲ್ಲಿ ವಂದರೆ ತಡದು ಮಾಡುಧಾರಂತೆ. ಯಂದಿನ ರೀತಿ ಕೂಡಲೀ ಮಠದವರು ಪೂರ್ವಪ್ರಮಾಣ ವಿಚಾರಿಸಿಕೊಂಡಾರು ಯಿದರವಳಗಾಗಿ ಯಿಂದಿನ ರೀತಿ ನಡಕೊಂಬೋ ಹಾಗೆ ಕಟ್ಟುಮಾಡಿಸೋದು ॥

---

### ೯೨. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತು ಮಹದೇವಪುರದ ಶಿವಯ್ಯಗೆ—ನಿರ್ವಾಣಯ್ಯನವರ ಶರಣಾರ್ತಿ. ಕೂಡಲೀ ಶೃಂಗೇರಿ ಮಠದವರು. ಕುಂಬುಸೆಯಲ್ಲಿ ಪೂರ್ವಾರಭ್ಯ. ದಕ್ಷಿಣೆ ತಾಂಬೂಲವ ತೆಗೆದುಕೊಂಡು. ಬರುತ್ತಿದ್ದಲ್ಲಿ. ಶೃಂಗೇರಿ ಮಠದವರು. ಯಿತ್ತಲಾಗಿ ತೊಡರುಮಾಡುಧಾರಂತೆ ಈ ರೀತಿ ಆಗಬಾರದಲ್ಲಾ. ಕೂಡಲ ಶೃಂಗೇರಿ ಮಠದವರು ದಕ್ಷಿಣೆ ತಾಂಬೂಲವ ಪೂರ್ವಪ್ರಮಾಣ ತೆಗೆದುಕೊಂಡಾರು. ಶೃಂಗೇರಿ ಮಠದವರು ಈಗ ತೊಡರುಮಾಡದ ಹಾಗೆ. ಕಟ್ಟುಮಾಡಿಸುವುದಾಗಿ ॥

---

### ೯೩. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತ್ಸಕಲಗುಣ ಸಂಪನ್ನರಾದ ಚನ್ನಯ್ಯನವರಿಗೆ. ನಿರ್ವಾಣಯ್ಯನವರು ಮಾಡುವ ಶರಣಾರ್ತಿ. ನಾವು ಪರಿಣಾಮದಲ್ಲಿ ಯಿಥೇವೆ. ನಿಮ್ಮ ಪರಿಣಾಮಕ್ಕೆ ಬರಸಿಕಳುಹೋದೂ, ಕೂಡಲೀ ಶೃಂಗೇರಿ ಮಠದವರು. ಹೊನ್ನಾಳೀ ಶೀಮೆಯಲ್ಲಿ ದಕ್ಷಿಣೆ ತಾಂಬೂಲ ತೆಗೆದುಕೊಂಡು. ಬರುತ್ತಿದ್ದಲ್ಲಿ. ಶೃಂಗೇರಿಯವರು ಯಿತ್ತಲಾಗಿ ತೊಡರುಮಾಡುಥಾರಂತೆ. ಯಿಾ ರೀತಿ ಆಗಬಾರದಲ್ಲಾ. ಕೂಡಲೀ ಶೃಂಗೇರಿ ಮಠದವರು. ಪೂರ್ವಪ್ರಮಾಣ ತೆಗೆದುಕ್ಕೊಂಡಾರು. ಶೃಂಗೇರಿ ಮಠದವರು. ಯಿಾಗ ತೊಡರುಮಾಡದ ಹಾಗೆ ತಾಕೀತೀ ಮಾಡಿಸೋದಾಗಿ ॥

---

೯೪. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತು ನಿರ್ವಾಣಯ್ಯನವರು. ಕುಂಬುಸೆ ಬಸವಪ್ಪಗೆ ಶರಣಾರ್ತಿ. ಗಾಜನೂರು ಯಡತೊರೆ ಶೀಮೆ. ಅಗ್ರಹಾರಗಳಲ್ಲಿ ಸಹಾ ಕೂಡಲೀ ಶೃಂಗೇರಿ ಮಠದವರು. ದಕ್ಷಿಣೆ ತಾಂಬೂಲವನ್ನು ಪೂರ್ವಾರಭ್ಯ ತೆಗೆದುಕೊಳ್ಳು ತ್ತಿದ್ದಲ್ಲಿ. ಈಗ ಶೃಂಗೇರಿಯವರು ತಮಗೆ ಬರಬೇಕು ಯೆಂದು. ದುಡುಕುಮಾಡುಥಾರಂತೆ. ಯಿಾ ಬಗ್ಗೆ ನ್ಯಾಯವ ಮಾಡಿಕೊತ್ತಿದ್ದಲ್ಲ. ಉಭಯತರನ್ನೂ ಯಿಲ್ಲಿಗೆ ಕರಸಿ ವಿಚಾರಿಸಿ. ಪೂರ್ವಪ್ರಮಾಣ ದಕ್ಷಿಣೆ ತಾಂಬೂಲ ವನ್ನು ಕೂಡಲೀ ಶೃಂಗೇರಿ ಮಠದವರು. ತೆಗೆದುಕ್ಕೊಂಬಹಾಗೂ ಶೃಂಗೇರಿಯವರು ಹೊಸಕಟ್ಳೇಮಾಡಿ. ದುಡುಕ ಮಾಡಲಾಗದೆಂದು. ಸಹ ಮೊದಲು ಕಟ್ಟುಮಾಡಿ ಕಳುಹಿಸ್ತ ಪ್ರಕಾರ ಯಿಂದಿನ ಪರಿಯಂತ್ರ. ನಡಕೊಂಡು. ಈಗ ಈ ರೀತಿ ಮಾಡಿದರೆ ಸರಿಯೇ. ಮೊದಲು ಕಟ್ಟುಮಾಡಿಸ್ತರೀತಿ. ದಕ್ಷಿಣೆ ತಾಂಬೂಲವನ್ನು ಪೂರ್ವ ಪ್ರಮಾಣ ಕೂಡಲೀ ಶೃಂಗೇರಿ ಮಠದವರು. ತೆಗೆದುಕೊಂಡು ಬಂದಾರೂ, ಈ ಬಗ್ಗೆ ಶಿಮೊಗ್ಗೆ. ಕೋಟೆ ಠಾಣೇ ದಾರಗೂ. ಬರಸಿಯಿದ್ದೀತು. ಶೃಂಗೇರಿ ಮಠದವರ ಕರಶಿ. ಅ ರೀತಿ ದುಡುಕು ಮಾಡದ ಹಾಗೆ ತಾಕೀದಿ ಮಾಡುವುದಾಗಿ

ಯಿಂತಿ ಶರಣಾರ್ಥಿ ॥ ೧ ॥

---

೯೫. ಲೇಖನ.—(ಸುಮಾರು) ವಿಳಂಬಿ, ಶಾ. ಶ. ೧೬೩೯, ಕ್ರಿ. ಶ. 1717.

ಶ್ರೀಮತು ಮಂಡಿಗಟ್ಟದ ಶಿದ್ದಪ್ಪಗೆ. ನಿರ್ವಾಣಯ್ಯನವರ ಶರಣಾರ್ತಿ. ಗಾಜನೂರು ಯಡತೊರೆ ಶೀಮೆ ಅಗ್ರಹಾರಗಳು. ಹೊಳೆ ಹೊನ್ನೂರು ಶೀಮೆಯಲ್ಲಿ. ಸಹ. ದಕ್ಷಿಣೀ ತಾಂಬೂಲವನ್ನು ಕೂಡಲೀ ಶೃಂಗೇರಿ ಮಠದವರು. ಪೂರ್ವಾರಭ್ಯ ತೆಗೆದುಕೊಳ್ಳುತ್ತಿದ್ದಲ್ಲಿ. ಶೃಂಗೇರಿಯವರು. ಈಗ ತಮಗೆ ಬರಬೇಕೆಂದು. ದುಡುಕು ಮಾಡಥಾರಂತೇ । ಈ ಬಗ್ಗೆ ಶಿವಮೊಗ್ಗೆ ಠಾಣಾದಾರ. ಮಣೆಹಗಾರರಗೇ ಸಹಾ ಬರಸಿಯಿದ್ದೀತು. ಕೂಡಲೀ ಶೃಂಗೇರಿ ಮಠದವರು. ಸ್ಥಾನಕ್ಕೆ ಬಂದಾಗ ದುಡುಕು ಆಗದ ರೀತಿ. ಹೊನ್ನೂರ ಕೋಟೆಯಿಂದ ಠಾಣ್ಯದವರ ಕಳುಹಿಸಿಕೊಟ್ಟು ವಿಚಾರಿಸುವ ಹಾಗಿ.

ಇಂತಿ ಶರಣಾರ್ತಿ ॥ ೨ ॥

---

೯೬. ಲೇಖನ.—ರುಧಿರೋದ್ಗಾರಿ, ಕಾರ್ತಿಕ ಶು. ೫, ಶಾ. ಶ. ೧೬೬೫, ಕ್ರಿ. ಶ. 1743.

ರುಧಿರೋದ್ಗಾರಿ ಸಂವತ್ಸರದ ಕಾರ್ತೀಕ ಶು ೫ಲ್ಲು ಶ್ರೀಮತ್ಕೆಳದಿ ಬಸವಪ್ಪನಾಯಕರು ಹ। ವೆಂಕಣ್ಣಗೆ ಬರಸಿ ಕಳುಹಿದಕಾರ್ಯ. ಆದಿಶಂಕರಾಚಾರ್ಯಪರಂಪರಾಪ್ರಾಪ್ತರಾದ ಶೃಂಗೇರಿ ಸ್ವಾಮಿಗಳು. ಮಹಾಯಾತ್ರೆ. ದೇಶ ಸಂಚಾರಕ್ಕೆ ಸಹ ಚಿತ್ತಯಿಸಿದ ವ್ಯಾಳ್ಯದಲ್ಲಿ. ಕೆಲವು ದಿವಸದ ಮೇಲೆ ಇಲ್ಲಿ ಸ್ಥಳದ ಮಹಾಜನಂಗಳು. ಮುಂತಾ ದವರು ಅಸ್ತವ್ಯಸ್ತ ಸಮಾಚಾರ ಹುಟ್ಟಿಸಿಕೊಂಡು. ಬದಲು ಪುಸ್ತಕ ಸನ್ಯಾಸಾಶ್ರಮ ಕೊಡಿಸಿ ಕೆಲವು ದಿವಸದ ಮೇರೆ. ಮೇಲೆ ಬರೆದ ಸ್ವಾಮಿಯವರು. ಕೂಡಲೀ ಸ್ಥಳಕ್ಕೆ ಬಂದು. ಈ ಸಮಾಚಾರ ಕೇಳಿ ಹುಜೂರಿಗೆ ಬರಕೊಂಡಲ್ಲಿ. ಉಭಯತರನ್ನೂ ಕರಶಿ ವಿಚಾರ್ಸಿದ್ದಲ್ಲಿ ಅಲ್ಲಿ ಮಹಾಜನಗಳು ಜಿದ್ದಿನಿಂದ ಪುಸ್ತಕ ಸನ್ಯಾಸಮಾಡಿದ್ದು ಸರಿಯಂತಾ, ನಿಶ್ಚಯಿಸಿದ್ದಾಯ್ತು ಆದಾಗ್ಯೂ ಉಪದೇಶ ಸನ್ಯಾಸವಿಧಿ ಮುಂತಾಗಿ ಇವರೇ ಕೊಡಬೇಕು। ಪುಸ್ತಕ ಸನ್ಯಾಸವಾದ ವರು ಸ್ಥಳದಲ್ಲಿ ಯಿದ್ದುಕೊಂಡು. ಶಾರದಾ ಅಮ್ಮನವರ ಪೂಜಾರಾಧನೆ ಮಾಡಿಕೊಂಡು. ಮಠದಲ್ಲಿ ಕಟ್ಟಳೇಗಳು- ನಡಸಿಕೊಂಡು ಸ್ವಸ್ಥಚಿತ್ತದಿಂದ. ಇರಬೇಕು. ಶಂಕರಾಚಾರ್ಯಪರಂಪರಾಪ್ರಾಪ್ತರಾದ ಸ್ವಾಮಿಗಳು. ಸಮಸ್ತ ದೇಶ ಸಂಚಾರ ಮುಂತಾದ್ದು ಮಾಡಿಕೊಂಡು ಕೂಡಲೀ ಸ್ಥಳದಲ್ಲಿ ಇರಬೇಕಾಗಿ ತಹ ಮಾಡಿರುವಲ್ಲಿ. ಈಗ ಶೃಂಗೇರಿಯಲ್ಲಿ ರುವ ಸ್ವಾಮಿಗಳು. ಸಂಚಾರ ಮಾಡುವ ಬಗ್ಗೆ. ಹೊರಡುತ್ತಾರಾಗಿ ಕೂಡಲೀ ಶೃಂಗೇರಿಯವರು ಶ್ರೀರಾಮಚಂದ್ರ ಪುರಕ್ಕೆ ಚಿತ್ತೈಸಿ. ರಾಯಸ ಮಂತ್ರಾಕ್ಷತೆ. ಕಳುಹಿಸಿದ್ದರಿಂದಾ ನಾಗಣ್ಣಗೆ ವಿಚಾರಿಶಿದ್ದರಲ್ಲಿ. ಮೇಲೆ ಬರೆದ ಪ್ರಕಾರ

ಸಮವೆಂದು। ಬರವಾದ ಅನುಭವವರಿತು. ಅರಿಕೆಮಾಡಿದ ಸಂಬಂಧ. ನಿನಗೆ ಬರಸಿರುವುದು ಯೇನೆಂದರೆ. ನೀನು ಆ ಸ್ವಾಮಿಗಳು ಯಿದ್ದಲ್ಲಿಗೆ ಹೋಗಿ. ಅವರು ಕೇಳಿದ ಸಾಮಾನು ಕೊಡಿಸಿದಲ್ಲಿ. ಲೆಖ್ಖವಾದ್ದು ಸರಕಾರದಿಂದ ಕೊಡಿಸುತ್ತದೆ. ಯಿಂತ್ತಾ ಯಿ ಕಾಗದ ಸಮೇತ. ಶ್ರೀಮದ್ರಾಮಚಂದ್ರಪುರದ. ಮಠದ ಸರ್ವಾಧಿಕಾರಿ. ಪರಮೇಶ್ವರ ಭಟ್ಟ ರಿಗೆ ತೋರಿಸಿ ಹೇಳಿ ಶೃಂಗೇರಿಗೆ ಹೋಗಿ. ಆ ಸ್ವಾಮಿಗಳಿಗೆ. ಸಂಚಾರ ಹೊರಡಕೂಡದು. ಪೂರ್ವದಲ್ಲಿ ತಹಾನಾಡಿದ ಪ್ರಕಾರ ಉಭಯಿತರೂ ನಡಕೊಳ್ಳಬೇಕಲ್ಲದೆ ವ್ಯತ್ಯಸ್ತನಡಿಸಿದಾದ್ದರೆ. ಬಹಳದಣುಕೊಂಡೀರಾಗಿ. ಚನ್ನಾಗಿ ಹೇಳಿಬರುವುದು ಈ ಕಾಗದ ಕಡತಕ್ಕೆ ಬರಸಿ ತಿರಗಿ ಅಸಲು ಕೂಡ್ಲಿ ಶೃಂಗೇರಿ ಸ್ವಾಮಿಗಳ ವಶಕ್ಕೆ ಕೊಡುವುದಾಗಿ.




———

೯೭. ಲೇಖನ.—ವಿಭವ, ಭಾದ್ರಪದ ಶು. ೧೦, ಶಾ. ಶ. ೧೬೭೦, ಕ್ರಿ. ಶ. 1748.

ವಿಭವ ಸಂವತ್ಸರದ ಭಾದ್ರಪದ ಶು ೧೦ ಲ್ಲೂ. ಶ್ರೀಮತ್ಕೆಳದೀ ಬಸಪ್ಪನಾಯಕರೂ, ಕಳಸಣ್ಣಗೆ ಬರಸಿ ಕಳುಹಿಸಿದ ಕಾರ್ಯ. ಕೂಡಲಿಯಲ್ಲಿ ತನ್ನ ಅಜ್ಜ. ಸಬ್ಬುನೀಸ ಕೃಷ್ಣಯ್ಯನು ದೇವಸ್ಥಾನವ ಕಟ್ಟಿಸಿ. ಪ್ರತಿಷ್ಠೆಮಾಡಿದ ಚಂದ್ರಮೌಳೇಶ್ವರ ದೇವರಿಗೆ. ಕೂಡಲೀ ಶಂಕರಭಾರತೀ ಸ್ವಾಮಿಗಳು. ತಮ್ಮ ಮಠಕ್ಕೆ ಉತ್ತಾರವಾದ ಹೊಳೇ ಹೊನ್ನೂರು ಶೀಮೆ ಆನೇವೇರಿಪಾಲ. ಕನಶಿನಕಟ್ಟೆ ಗ್ರಾಮದಲ್ಲಿ. ಪ್ರಾಕು ಉತ್ತಾರವಕೊಟ್ಟಿದ್ದು ಗ ೨೨ ಹೊರತಾಗಿ ಉಳಿದ ಗ್ರಾಮವನ್ನು ಈ ದೇವರ ಅಮೃತಪಡಿನಂದಾದೀಪ, ಪಂಚಪರ್ವ ಅಭಿಷೇಕ। ಸಹಸ್ರನಾಮ, ಮಂತ್ರ ಪುಷ್ಪ ವಾದ್ಯ ಮುಂತಾದ ವಿನಿಯೋಗದ ಬಗ್ಗೆ ಶಿವಾರ್ಪಿತವಾಗಿ ಕೊಟ್ಟಿಥೇವೆಂದು [1]ಶಾಸನವ ಬರಕೊಟ್ಟಲ್ಲಿ ಆ ರೀತಿ ನಡದುಬರುತ್ತದೆ. ಅವರು ಕೊಟ್ಟ ಉತ್ತಾರ ಗ ೨೨ಕ್ಕೆ ಲಿಂಗಾದೀಕ್ಷಿತನ ಮಗ ತಿಮ್ಮಭಟ್ಟಗೆ ಗ ೬ ತರೀಕೆರೆ ವೆಂಕಟೇಶಭಟ್ಟಗೆ ಗ ೬ ಉಭಯಂಗ ೧೨ ವರಹನ್ನು ಆವಂದಿರು ಅನುಭವಿಸಿ ಬಾಹಾಗೂ, ಮೇಲಾಗಿ ದೇವರಿಗೆ ಕೊಟ್ಟ ಬಗೆಯಲ್ಲೂ. ಗ೩ಲ ಚೌಡಪನ ನರಸಣ್ಣಗೆ. ಕೊಟ್ಟ ಬಗೆಯಲ್ಲೂ. ಗ ೬ ಪನ್ನಶಾಮೀಭಟ್ಟಗೆ, ಕೊಟ್ಟಬಗೆಯಲ್ಲೂ ಗಳ ಉಭಯಂ ಭೂಮಿಬೀಳು ಬಿದ್ದಬಗೆಯಲ್ಲೂ ಗ೧೦ ಉಭಯ ಂಗಳಲ ಉಭಯಂ ಗ೬ಂಕ್ಕೆ ಈ ಶೀಮೆಯು ಕ್ರೋಧಿ ಸಂವತ್ಸರದಲ್ಲೂ, ಅರಮನೆ ಹವಾಲೆಯಾದಲ್ಲಿ ಯಿ ಬಗ್ಗೆ ಕಾಣಿಕ ಗ೧ಕ್ಕೆ ಗ೨ಲ್ಲೂ ಬರದ ಗ೧೨ಂನು ನಾನೇ ಕೊಟ್ಟು ಪಗುದಿ ಹಾಕಿದಾಗಲೂ ಸಲುವಹಣ. ನಾನೇ ಕೊಟ್ಟಿದ್ದೆ ಈಗಲೂ ಕಾಣಿಕೆ ಕೊಟ್ಟೇನು. ಸ್ವಾಮಿಗಳು ಕೊಟ್ಟಿದ್ದ ಬಗೆಯಲ್ಲೂ. ಗ೩ಲ ನರಸಣ ಶಾಮೀಭಟ್ಟಗೆ ಕೊಟ್ಟಿದ್ದ ಬಗೆಯಲ್ಲೂ ಬೀಳಾಗಿದ್ದುದು. ಗ೧೦ ಉಭಯಂ ಗಳಲ ಸ್ವಾಸ್ಥೆಯನು ಈ ಚಂದ್ರ ಮೌಳೇಶ್ವರ ದೇವರ. ದೇವತಾವೆಚ್ಚಕ್ಕೆ ಕೊಟ್ಟದ್ದೇವೆಂಬ ಹಾಗೆ ನಿರೂಪಕೆ ಅಪ್ಪಣೆ ಆಗಬೇಕೆಂದು. ಸಬ್ಬುನೀಸ ಕೃಷ್ಣಯ್ಯನು. ಹೇಳಿಕೊಂಡ ಸಂಬಂಧ ಈತನ ಕೈಯ್ಯಕಾಣಿಕೆ ಪ್ರಾಕು ಬಂದಗ ೧೨೦ ಹೊರತಾಗಿ ಈಗ ಗ೧೮ಂನ್ನೂ . . . . . . . . . . . . . ನ್ನೂ ಅರಮನೆಗೆ ತೆಗೆದುಕೊಂಡು ಕೂಡಲೀ ಶಂಕರಭಾರತೀ ಸ್ವಾಮಿಗಳ್ಳೈ ಹೊಳೆ ಹೊನೂರು ಶೀಮೆ ಕನಸಿನಕಟ್ಟೆ ಗ್ರಾಮವಂದಕ್ಕೆ ರೇಖೆ ಗ೬ಂಕ್ಕೆ ಆಸ್ವಾಮಿಗಳ . . . . . . . ಬಗೆಯಲ್ಲೂ ಲಿಂಗಾದೀಕ್ಷಿತನ ಮಗ ತಿಮ್ಮಭಟ್ಟಗೆ ಗ೬ ತರೀಕೆರೆ ವೆಂಕಟೇಶಭಟ್ಟಗೆ ಗ೬ ಉಭಯಂ ಆವಂದಿರು ಅನುಭವಿಸಿಬಾಹದು. ಗ೧೨ನ್ನುಳಿದು. ಶುದ್ಧಗ ೪ಲಕ್ಕೆ ವಿವರ ಪ್ರಾಕು ದೇವರಿಗೆ ಕೊಟ್ಟಿದ್ದ ಬಗೆಯಲ್ಲೂ. ಗ೩ಲ ಚೌಡಪ್ಪನ ನರಸಣ್ಣನ ಬಗೆಯಲ್ಲೂ. ಗ೬ ಪನ್ನಶಾಮಿಭಟ್ಟನ ಬಗೆಯಲ್ಲೂ ಗಳ ಉಭಯಂ ಗ೧೦

[1] ಈ ಶಾಸನವು "ಎಪಿಗ್ರಾಫಿಕ ಕರ್ಣಾಟಕ"ದ ೭ನೆಯ ವಾಲ್ಯೂಂನಲ್ಲಿ ಶಿವಮೊಗ್ಗ ತಾಲ್ಲೂಕು ೮೨ನೆಯ ಶಾಸನವಾಗಿ ಮುದ್ರಣವಾಗಿದೆ.

ಉಭಯಂಗೆ ೪೮ ನಾಲ್ವತ್ತೆಂಟು ವರಹಾನ ಸ್ವಾಸ್ಥೆಯನು ಸಬ್ಬುನೀಸಕೃಷ್ಣಯ್ಯನು ಕೂಡಲಿಯಲ್ಲೂ ದೇವಸ್ಥಾನವ ಕಟ್ಟಿಸಿ ಸ್ರತಿಷ್ಠೆಮಾಡಿದ ಚಂದ್ರಮೌಳೀಶ್ವರ ದೇವರ ದೇವತಾವೃಚ್ಚಕ್ಕೆ ಶಿವಾರ್ಪಿತವಾಗಿ ಕೊಟ್ಟು ಪ್ರಾಕು ಉತ್ತಾರವನ್ನು ಪೂರ್ವ ಪ್ರಮಾಣ ನಡಿಸಿ ಬಹರೀತಿ ಕಟ್ಟುಮಾಡಿಸಿ ಕಳುಹಿಸಿದ್ದೇವೆ. ಈ ಗ್ರಾಮವನು ಈತನ್ಯ ಹವಾಲೆ ಮಾಡಿಕೊಟ್ಟು ಈ ಕಾಗದವಶಾನಬಾವರ ಕಡಿತಕ್ಕೆ ಬರಸಿ ತಿರುಗಿ ಈತನ ವಶಕ್ಕೆ ಕೊಡುವುದಾಗಿ.




---

## D. ಚಿತ್ರದುರ್ಗ ಪಾಳೆಯಗಾರರು.

೯೮. ಲೇಖನ.—(ಸುಮಾರು) ಶಾ. ಶ. ೧೬೦೦, ಕ್ರಿ. ಶ. 1678.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯಪದವಾಕ್ಯ । ಪ್ರಮಾಣ । ಪಾರಾವಾರ ಪಾರೀಣ । ಯಮನಿಯ ಮಾಸನಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಚ್ಛಿನ್ನ ಗುರುಪರಂಪರಾಪ್ರಾಪ್ತ । ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನಶಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ । ಸಾಂಖ್ಯತ್ರಯ ಪ್ರತಿಪಾಲಕ । ಸಕಲನಿಗಮಾಗಮಸಾರಹೃದಯ । ವೈದಿಕಮಾರ್ಗ ಪ್ರವರ್ತಕ । ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾ ರಾಜಧಾನೀ । ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾ ಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ । ತುಂಗಭದ್ರಾತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ನರಶಿಂಹಭಾರತೀ ಸ್ವಾಮಿ ಗಳ್ವೈಯ್ಯನವರ ಕರಕಮಲ ಸಂಜಾತರಾದ ಶೃಂಗೇರೀ ಶ್ರೀ ಶಂಕರಭಾರತೀಸ್ವಾಮಿಗಳ್ವೈಯ್ಯನವರ ದಿವ್ಯ ಶ್ರೀಪಾದ ಪದ್ಮಂಗಳಿಗೆ—

ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಚಿಕ್ಕಣ್ಣನಾಯಕರು ಮಾಡುವ ಬಿನ್ನಹ—ದೇವರವರ ಕೃಪೆಯಿಂದ ನಾವು ಪರಿಣಾಮದಲ್ಲಿದ್ದೇವೆ—ದೇವರವರ ಕ್ಷೇಮ ವೈಭವಗಳಿಗೆ ಬುದ್ಧಿಗಲಸಿ ಕಳುಹಿಸುವ ಹಾಗೆ ಮಾಡುವುದು. ಈ ಮರ್ರ್ಯಾದೆಯಲ್ಲಿ ದೇವರವರು ಕೃಪೆಯಿಟ್ಟು ಕಳುಹಚಿತ್ತೈಸ್ತ ಉಡುಗರೇ ವಿಭೂತಿ ಪ್ರಸಾದ ವನ್ನು ತೆಗೆದುಕೊಂಡು ಶಿರಸಾವಹಿಸಿಕೊಂಡು ಕೃತಾರ್ಥನಾದೆನು । ದೇವರವರ ಬಗೆ, ಬ್ರಹ್ಮಾಭಟ್ಟರ ವಶಕ್ಕೆ ಬಾಗೂರು ಶೀಮೆ ವಳಗಣ । ಮಾರಬಗಟ್ಟೆಯಂಬ ಗ್ರಾಮವನ್ನು ಕೃಷ್ಣಾರ್ಪಣವಾಗಿ ಧಾರೆನೆರೆದು ನಾಲ್ಕು ಮೂಲೆಗೂ ವಾಮನಮುದ್ರೇ ಕಲ್ಲನೆಡಸಿ * ದಾನಪಟ್ಟೆಯನ್ನು ಬರಸಿಕೊಟ್ಟು ಪ್ರತಿಯಾಗಿ ದೇವರವರ ದಿವ್ಯ ಶ್ರೀಪಾದಕ್ಕೆ ಉಡುಗರೆಯನ್ನು ಕಳುಹಿಸಿಯಿದ್ದೇವೆ. ದಾವಾಗ್ಯೂ ದೇವರವರ ಶೇವೆಗೆ ತಗುಲಾದವರಲ್ಲದೆ ಮತ್ತೊಂದಲ್ಲಾ । ಯಿ ವಿವರ ಬ್ರಹ್ಮಾಭಟ್ಟರು ಬಿನ್ನಹಮಾಡಲಾಗಿ ಕೇಳ ಚಿತ್ತೈಸುವ ಹಾಗೆ ಮಾಡಿಸುವುದು.

---

* ಈ ದಾನಪಟ್ಟೆ ಸಿಕ್ಕಿಲ್ಲ. ೧೦೦ನೇ ದಾನಶಾಸನದಲ್ಲಿ ಹಿರೀ ಮದಕರಿ ನಾಯಕರು ಪುನಃ ಈ ಗ್ರಾಮದಾನ ಮಾಡು ವಾಗಲೂ ತಮ್ಮ ದೊಡ್ಡಪ್ಪ ಚಿಕ್ಕಣ್ಣನಾಯಕರ ದಾನವನ್ನು ಮೊದಲಿಗೆ ಉಲ್ಲೇಖಿಸುತ್ತಾರೆ.

೯೯. ದಾನಶಾಸನ.—ಶುಕ್ಲ, ಮಾಘ ಶು. ೭, ಶಾ. ಶ. ೧೬೧೧, ಕ್ರಿ. ಶ. 1689.

ಕಾಮಗೇತಿ ಕಸ್ತೂರಿ ಭರಮಂಣ ನಾಯಕರಮೆದಕರಿ ನಾಯಕರು

ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರಚಾರವೇ । ತ್ರೈ
ಲೋಕ್ಯನಗರಾರಂಭ । ಮೂಲಸ್ತಂಭಾಯಶಂಭವೇ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನಶಕ ವರುಷಂಗಳು. ೧೬೧೧ನೆಯ ಶುಕ್ಲನಾಮ ಸಂವತ್ಸರದ ಮಾಘ ಶುದ್ಧ ೭ಲ್ಲೂ. ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ । ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಷ್ಟಾಂಗ । ಯೋಗಾನುಷ್ಠಾನುನಿಷ್ಠ । ತಪಶ್ಚಕ್ರವರ್ತಿ । ಅನಾದ್ಯವಿಛ್ಛಿನ್ನ । ಗುರುಪಂಪರಾಪ್ರಾಪ್ತ । ಷಡ್ದರ್ಶನಸ್ಥಾಪನಾಚಾರ್ಯ। ವ್ಯಾಖ್ಯಾನ ಸಿಂಹಾಸನಾಧೀಶ್ವರ । ಸಕಲವೇದಾರ್ಥಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ । ಸಕಲನಿಗಮಾಗಮಸಾರಹೃದಯ । ವೈದಿಕಮಾರ್ಗಪ್ರವರ್ತಕ । ಸರ್ವತಂತ್ರಸ್ವತಂತ್ರ ಆದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನಪ್ರತಿಷ್ಠಾಪನಾಚಾರ್ಯ । ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ । ತುಂಗಭದ್ರಾತೀರವಾಸ । ಋಷ್ಯಶೃಂಗ ಪುರವರಾಧೀಶ್ವರ । ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀ ಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ಅಭಿನವ ವಿದ್ಯಾರಣ್ಯಭಾರತೀ ಸ್ವಾಮಿಗಳೈಯ್ಯನವರ ಕರಕಮಲಸಂಜಾತರಾದ ಶ್ರೀ ನರಶಿಂಹಭಾರತೀ ಸ್ವಾಮಿಗಳೈಯ್ಯನವರ ಕುಮಾರಕರಾದ ಶ್ರೀ ಶಂಕರಭಾರತೀ ಸ್ವಾಮಿಗಳೈಯ್ಯನವರ ಮಠಕ್ಕೆ ವಾಲ್ಮೀಕಿ ಗೋತ್ರದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತೀ ಕಸ್ತೂರಿ ರಂಗಪ್ಪನಾಯಕರ ಪೌತ್ರರಾದ । ಮದಕರಿ ನಾಯಕರ ಪುತ್ರರಾದ ಭರಮಣನಾಯಕರು ನಮ್ಮ ಹಿರಿಯರುಗಳಿಗೆ ಪುಣ್ಯಸುಕೃತವಾಗಬೇಕೆಂದು ನಾವು ಆಳುವಂಥಾ ರಾಜ್ಯ ಭರಮಣನಾಯಕರ ದುರ್ಗದಶೀಮೆ ಜಾಜೂರು ಹೋಬಳಿ ವಳಗಣ । ಹನುಮನಹಳ್ಳಿ ಎಂಬ ಗ್ರಾಮವನ್ನು ಈ ಪುಣ್ಯದಿವಸದಲ್ಲೂ ಸಹಿರಣ್ಯೋದಕದಾನಧಾರಾಪೂರ್ವಕವಾಗಿ ತ್ರಿವಾಚ ತ್ರಿಕರಣಯುಕ್ತವಾಗಿ ಶಿವಾರ್ಪಿತವಾಗಿ ಕೊಟ್ಟು ಇದ್ದೇವೆ. ಈ ಗ್ರಾಮಕ್ಕೆ ಸಲುವ ಕಾಡಾರಂಭ ನಿರಾರಂಭ । ನಿಧಿ ನಿಕ್ಷೇಪ ಜಲ ಪಾಷಾಣ । ಅಕ್ಷಿಣಿ ಆಗಾಮಿ । ಸಿದ್ಧಸಾಧ್ಯಂಗಳೆಂಬ । ಅಷ್ಟಭೋಗತೇಜೋಪಾರ್ಜನೆಯನ್ನೂ, ಸ್ವಾಮಿಗಳವರ ಶಿಷ್ಯಪಾರಂಪರ್ಯವೂ । ಅನುಭವಿಸಿಕೊಂಡು। ಆಚಂದ್ರಾರ್ಕಸ್ಥಾಯಿಗಳಾಗಿ ಸುಖದಲ್ಲಿ ಇಹುದು ಎಂದು ಬರಸಿಕೊಟ್ಟ ದಾನಪತ್ರ ॥ ಇದಕ್ಕೆ ಸಾಕ್ಷಿ ॥ ಆದಿತ್ಯಚಂದ್ರಾವನಿಲೋನಲಶ್ಚ । ದ್ಯೌರ್ಭೂಮಿರಾಪೋಹೃದಯಂ ಯಮಶ್ಚ । ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೆ । ಧರ್ಮಸ್ಯ ಜಾನಾತಿ ನರಶಸ್ಯವೃತ್ತಂ ॥ ೧ ॥ ಸ್ವದತ್ತಾದ್ವಿಗುಣಂ ಪುಣ್ಯಂ । ಪರದತ್ತಾನುಪಾಲನಂ । ಪರದತ್ತಾಪಹಾರೇಣ । ಸ್ವದತ್ತಂ ನಿಷ್ಫಲಂ ಭವೇತ್ ॥ ೨ ॥ ಸ್ವದತ್ತಾ ಪುತ್ರಿಕಾಧಾತ್ರೀ । ಪಿತೃದತ್ತಾ ಸಹೋದರೀ ಅನ್ಯದತ್ತಾ ಚ ಮಾತಾ ಚ । ಪಿತೃದತ್ತಾ ವಸುಂಧರಾ ॥ ೩ ॥

---

ಶುಭಮಸ್ತು

೧೦೦. ನಿರೂಪ.—(ಸುಮಾರು) ಸೌಮ್ಯ, ಶಾ. ಶ. ೧೬೫೧, ಕ್ರಿ. ಶ. 1729.

'ಶಂಕರಭಾರತೀ
ರಾ॥ ಕರ್ತರಯ್ಯನವರು.

ನಮ್ಮ ಗಡಿಗಳ ನಾಯಕ ದಳವಾಯಿ ನಾಡಿಗವುಡರಿಗೆ ನಿರೂಪ । ಶ್ರೀ ಶೃಂಗೇರಿ * ಸ್ವಾಮಿಗಳವರು ದುರ್ಗಕ್ಕೆ ಬರುತ್ತಾರೆ । ಯಿಳಿದ ಬಳಿಯ । ಹುಲ್ಲುಸಪ್ಪು ಅಡಿಗಬ್ಬು ಪರಾಮರಿಕೆ ಮಾಡಿ ಕಳುಹೋದು ॥

---

೧೦೧. ದಾನಶಾಸನ.—ಸೌಮ್ಯ, ಜೇಷ್ಠ ಶು. ೫, ಶಾ. ಶ. ೧೬೫೧, ಕ್ರಿ. ಶ. 1729.

ಕಾಮಗೇತಿ ಕಸ್ತೂರಿ ಬರಮಂಣಾ ನಾಯಕರ ಮೆದಕರಿ ನಾಯಕರು

ಹರೇರ್ಲೀಲಾ ವರಾಹಸ್ಯ ದಂಷ್ಟ್ರಾದಂಡಃ ಸಪಾತುವಃ
ಹೇಮಾದ್ರಿ ಕಲಶಾಯತ್ರ । ಧಾತ್ರೀ ಛತ್ರಶ್ರಿಯಂದಧೌ.

ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರಚಾರವೇ । ತ್ರೈಲೋಕ್ಯ ನಗರಾರಂಭ । ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿಜಯಾಭ್ಯುದಯ ಶಾಲೀವಾಹನಶಕ ವರ್ಷಂಗಳು ೧೬೫೧ನೆಯ ಸೌಮ್ಯನಾಮ ಸಂವತ್ಸರದ ಜೇಷ್ಠ ಶು. ೫ಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ ಪದವಾಕ್ಯ ಪ್ರಮಾಣ ಪಾರವಾರ ಪಾರೀಣ ಯಮನೀಯಮಾಸನ ಪ್ರಾಣಾಯಾಮ ಪ್ರತ್ಯಾಹಾರ। ಧ್ಯಾನಧಾರಣ। ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಗುರುಪರಂಪರಾ ಪ್ರಾಪ್ತ ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ । ಸಾಂಖ್ಯತ್ರಯ ಪ್ರತಿಪಾಲಕ ಸಕಲನಿಗಮಾಗಮ ಸಾರಹೃದಯ ವೈದಿಕಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನರಶಿಂಹ ಭಾರತೀ ಸ್ವಾಮಿಗಳ್ವೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರ ಭಾರತೀ ಸ್ವಾಮಿಗಳ್ವೈಯ್ಯನವರ ದಿವ್ಯ ಶ್ರೀಪಾದ ಪದ್ಮಂಗಳಿಗೆ ವಾಲ್ಮೀಕಿ ಗೋತ್ರದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಮೆದಕರಿ ನಾಯಕರ ಪೌತ್ರರಾದ ಭರಮಣ್ಣ ನಾಯಕರ ಪುತ್ರರಾದ ಮೆದಕರಿ ನಾಯಕರು ಬರಸಿಕೊಟ್ಟ ದಾನಪತ್ರ ಕ್ರಮವೆಂತೆಂದರೆ ನಾವಾಳುವ ರಾಜ್ಯಬಾಗೂರಶೀಮೆಯೊಳಗಣ ಮೂರಬ ಗಟ್ಟೆಯಂಬ ಗ್ರಾಮ ನಮ್ಮ ದೊಡ್ಡಪ್ಪ ಚಿಕ್ಕಣ್ಣನಾಯಕರ ವಿದ್ಯಮಾನದಲ್ಲಿ ನಿಮ್ಮ ಮಠಕ್ಕೆ ಕೊಟ್ಟುಯಿದ್ದಲ್ಲಿ ಆದಾರಭ್ಯ ಈ ವರೆಪರ್ಯಂತ್ರ ಅಭ್ಯಂತ್ರವಾಗಿ ಬಂದು ಇರಲಾಗಿ ನಮ್ಮ ಹಿರಿಯರುಗಳಿಗೆ ಪುಣ್ಯಸುಕೃತವಾಗಬೇಕೆಂದು ಈ ದಿವಸ ನಮ್ಮ ತಂದೆಗಳ ಪುಣ್ಯದಿವಸದ ಕಾಲದಲ್ಲೂ ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ಶಿವಾರ್ಪಣಾವಾಗಿ ಈ ಮೂರಬಗಟ್ಟೆ ಗ್ರಾಮವನ್ನು ಕೊಟ್ಟು ಇದೇವೆ ಈ ಗ್ರಾಮಕ್ಕೆ ಸಲ್ಲುವ ಕಾಡಾರಂಭಿ ನಿರಾರಂಭಿ ನಿಧಿನಿಕ್ಷೇಪ ಜಲಪಾಷಾಣ ಅಕ್ಷಿಣಿ ಆಗಮೀ॥ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜೋಪಾರ್ಜನೆಯನ್ನು ನಿಮ್ಮ ಶಿಷ್ಯ ಪಾರಂಪರ್ಯವಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಸುಖದಲ್ಲಿ ಅನುಭವಿಸಿಕೊಂಡು ಇಹ ದೆಂದು ತ್ರಿವಾಚ ತ್ರಿಕರಣಯುಕ್ತವಾಗಿ ಬರಸಿಕೊಟ್ಟ ದಾನಪತ್ರ ಸ್ವದತ್ತಾದ್ವಿಗುಣಂ ಪುಣ್ಯಂ। ಪರದತ್ತಾನು ಪಾಲನಂ। ಪರದತ್ತಾಪಹಾರೇಣ । ಸ್ವದತ್ತಂ ನಿಷ್ಫಲಂಭವೇತ್' । ದಾನಪಾಲನಯೋರ್ಮಧ್ಯೇ। ದಾನಾಛ್ರೇಯೋನುಪಾಲನಂ ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ॥

ಶುಭಮಸ್ತು.

---

೧೦೨. ನಿರೂಪ.—(ಸುಮಾರು) ಸೌಮ್ಯ, ಶಾ. ಶ. ೧೬೫೧, ಕ್ರಿ. ಶ. 1729.

*ಶೃಂಗೇರೀ

ರಾ । ಕರ್ತರ್ರೈಯ್ಯನವರು.

ನಮ್ಮಶೀಮೆ ನಾಡಿಗಗವುಡಗೆ ನಿರೂಪ । ಶ್ರೀ।*...... ಸ್ವಾಮಿಗಳವರು ದೇಶಸಂಚಾರಕ್ಕೆ ಹೋಗುತ್ತಾರೆ. ಉಳದ ಬಳಿಯ ಹುಲ್ಲು ಸವುದೆ ಪರಾಮರಿಕೆ ಮಾಡಿಕಳುಹೋದು.

---

* ರಾಜಾಧರಮಪ್ಪನಾಯಕರು ಶಾ. ಶ. ೧೬೪೨ ನೇ ಪ್ಲವ ಸಂವತ್ಸರದ ಜ್ಯೇಷ್ಠ ಶು. ೫ ಶನಿವಾರ ಸ್ವರ್ಗಸ್ಥರಾದ್ದರಿಂದ ಇದು ಅವರ ಎಂಟನೇ ವರ್ಷದ ಮೃತ ತಿಥಿ.

೧೦೩. ನಿರೂಪ.—ಸೌಮ್ಯ, ಜೇಷ್ಠ ಶು. ೫, ಶಾ. ಶ. ೧೬೫೧, ಕ್ರಿ. ಶ. 1729.

*ಶಂಕರಭಾರತೀಸ್ವಾಮಿಗಳಿಗೆ—

ರಾ. ಕರ್ತರೈಯ್ಯನವರು.

ಬಾಗೂರುಶೀಮೆ ನಾಡಿಗ ಕೆಂಚನಾಗಯ್ಯ ಶ್ಯಾನುಭೋಗ ನಾರಣಪ್ಪಗೆ ನಿರೂಪ। ಮಾರಬಗಟ್ಟೆಗ್ರಾಮಃವನ್ನೂ ರಾ। ಮೊದಲೇ ನಮ್ಮ ದೊಡ್ಡಪ್ಪ ಚಿಕ್ಕಣ್ಣನಾಯ್ಕರ ದಿವಸದಲ್ಲಿ ಕೊಟ್ಟುಯಿರಲಾಗಿ ಯಿತ್ತಲಾಗಿ ನಿಂತು ಯಿತ್ತಾದಕಾರಣ। ಸ್ವಾಮಿಗಳು ದುರ್ಗಕ್ಕೆ ಬಂದುಯಿದ್ದಾಗ ಸೌಮ್ಯನಾಮ ಸಂ। ರದ ಜ್ಯೇಷ್ಠ ಶು ೫ಲ್ಲೂ ರಾ॥ ಯುವರತಿಥಿ ದಿವಸ ಸಹಿರಣ್ಯೋದಕ ದಾನಧಾರಾ ಪೂರ್ವಕವಾಗಿ ಧಾರೆಯೆರೆದು ದಾನಪತ್ರ ಬರಸಿಕೊಟ್ಟು ಯಿದ್ದೇವೆ. ಈ ಗ್ರಾಮವನ್ನು ಸ್ವಾಮಿಗಳಬಗ್ಗೆ ಬ್ರಾಹ್ಮಣರವಶಕ್ಕೆ ತೋರಣಾಹಾಕಿಸಿಕೊಡಿಸಿ ಆ ಗ್ರಾಮದಕಡಿಯ್ಯ ಮತ್ತೇನು ಕೋಸಿಸುಮಾಡದೆ ಸುರಕ್ಷಿತವಾಗಿ ಸಾರೋದ್ಧಾರವಾಗಿ ನಡಸಿಕ್ಕೊಂಡುಬಾಹುದು. ಆಗ್ರಾಮದ ಗಡಿ ನಿಮ್ಮಬಗೆಯವರು ಹೊಯಿಮಾಲೆಮಾಡಿದರಾಯಿತೆ ಯಿದಕ್ಕೆ ತಕ್ಕಬುದ್ಧಿ ಹೇಳಿಸುತ್ತಾ ಇದೇವೆ ಎಂಬುದನ್ನರಿತು ಸುರಕ್ಷಿತವಾಗಿ ನಡಿಸಿಕೊಂಡುಬಾಹುದು ........

---

೧೦೪. ನಿರೂಪ.—ಸೌಮ್ಯ, ಜೇಷ್ಠ ಶು. ೫, ಶಾ. ಶ. ೧೬೫೧, ಕ್ರಿ. ಶ. 1729.

ಶುಭಮಸ್ತು

* ಸ್ವಾಮಿಗಳ

ಸೌಮ್ಯ ಸಂ.। ದ। ಜೇಷ್ಠ ಶು. ೫ ಲು

ರಾ॥ ಕರ್ತರೈಯ್ಯನವರು.

ಬಾಗೂರುಶೀಮೆ ಮಾರಬಗಟ್ಟೆ ಗವುಡರಿಗೆ ಬರಸಿಕೊಟ್ಟ ಪಟ್ಟೆನಿರೂಪದ ಕ್ರಮವೆಂತೆಂದರೆ ನಿನ್ನಗ್ರಾಮವನ್ನು ಶೃಂಗೇರೀ ವರ ಮಠಕ್ಕೆ ಅಗ್ರಹಾರವಾರ ಪಾಲಿಸಿಕೊಂಡುಯಿಧೇವೆ ಹಣವಣಿಹುರ್ವೇದರು ಅವರ ಮಠ ಕಂಡು ನಡಕೊಂಬದು ಸ್ತಾನಮಾನ್ಯ ಪೂರ್ವ ಮರ್ರ್ಯಾದೆ ಸಕಲಬಾಬೂ ಮ್ಯಾಲು ಪಡಿಸಹವಳಗೂ

---

೧೦೫. ನಿರೂಪ.—ಅಕ್ಷಯ, ವೈಶಾಖ ಶು. ೧೦, ಶಾ. ಶ. ೧೬೬೮, ಕ್ರಿ. ಶ. 1746.

ಶುಭಮಸ್ತು

ಅಕ್ಷಯನಾಮ ಸಂ। ದ ವೈಶಾಖ ಶುದ್ಧ ೧೦ಲ್ಲೂ

*ಶೃಂಗೇರಿ ಶ್ರೀ ಸ್ವಾಮಿಗಳಿಗೆ—

ರಾ। ಕರ್ತರೈಯ್ಯನವರು—

ಗಟಪರ್ತಿ ಸುಂಕದ ಹವಾಲ್

ಶ್ಯಾನುಭೋಗ ಅಚ್ಚಣ್ಣಗೆ ನಿರೂಪದ ಕ್ರಮವೆಂತೆಂದರೆ ಶ್ರೀ* ಮಟಕ್ಕೆ ಗಟಪರ್ತಿಯಲ್ಲೂ ಸುಂಕದರು ಸುಮಿನಲ್ಲೂ ಹೇರು ೧ಕ್ಕೆ ೯೦—ಪ್ರಕಾರ ಅಪ್ಪಣೆಕೊಟ್ಟುಯಿದ್ದೀತು. ಹೇರುವಂದಕ್ಕೆ ವೀಸದಪ್ರಕಾರ ಕೊಟ್ಟುಕೊಂಡುಬರುವುದು.

---

೧೦೬. ನಿರೂಪ.--(ಸುಮಾರು) ಅಕ್ಷಯ, ಶಾ. ಶ. ೧೬೬೮, ಕ್ರಿ. ಶ. 1746.

*ಶಂಕರಭಾರತಿಸ್ವಾಮಿ

ರಾ । ಕರ್ತರ್ಯೈಯ್ಯನವರು.

ಬನವಾಪಟ್ಟಣದಶೀಮೆ ದೇಶಾಯಿಕೆಮುತಾಲಿಕ ದೇಶಪಾಂಡೇ ಕೃಷ್ಣಯ್ಯಗೆ ನಿರೂಪ ಮಲೇ ಬೆನ್ನೂರುಶೀಮೆ ಯೊಳಗೆ ಮೂಕರಗೊಂದಿಯಂಬ ಗ್ರಾಮ ಮ॥ ರಾ॥*........ ಗಳವರ ಮಠಕ್ಕೆ ನಡೆಯುತ್ತಾಯಿದ್ದಿತಷ್ಟೆ ಆಗ್ರಾಮದ ದೇಶಾಯಿ ಕೆ. ಸರದೇಶಾಯಿ ಕೆ. ನಾಡತಳವಾರಿಕೆ ಮುಂತಾದ ವರ್ತನೆ ಹೊಲವನ್ನು ರಾ * ಸ್ವಾಮಿ ಗಳವರ ಮಠಕ್ಕೆ ನಡೆವರೀತಿಗೆ ಅಪ್ಪಣೆಕೊಟ್ಟುಯಿದ್ದೇವೆ. ಅದೇ ರೀತಿಗೆ ನಡಸಿಕೊಡುವುದು. ಅಭ್ಯಂತರಲಾಗದು....

---

೧೦೭. ನಿರೂಪ. —(ಸುಮಾರು) ಶುಕ್ಲ ಸಂ, ಶಾ. ಶ. ೧೬೭೧, ಕ್ರಿ. ಶ. 1749.

*ಶಂಕರಭಾರತೀಸ್ವಾಮಿ ।

ರಾ । ಕರ್ತರ್ಯೈಯ್ಯನವರು

ಸು । ವೀರಯ್ಯ ಮಲ್ಲಯ್ಯ ಪದ್ಮಯ್ಯ ಹನುಮಂತಯ್ಯ ಇವರಿಗೆ ನಿರೂಪ । ರಾ ಗಳವರ. ಮಠಕ್ಕೆ ಗಟಪರ್ತಿ ಕಟ್ಟೆಯಲ್ಲಿ ಮೇಲುಗಾಸುನಡೆವುತ್ತಾ ಇದ್ದೀತೆಂದು ಹೇಳಿಕೊಂಡಲ್ಲ ಅಪ್ಪಣೆಕೊಟ್ಟುಯಿದ್ದಿತು ಯಥಾಪ್ರಕಾರ ಮೊದಲು ನಡೆಯುತ್ತಾಯಿದ್ದಂಥಾ ಮೇಲುಗಾಸುನು ಮಠಕ್ಕೆ ನಡಿಸಿಕೊಡುವುದು.

---

೧೦೮. ದಾನಶಾಸನ.—ಭಾವ, ಕಾರ್ತಿಕ ಬ. ೨, ಶಾ. ಶ. ೧೬೭೬, ಕ್ರಿ.ಶ. 1754.

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ । ಪಾರಾವಾರಪಾರೀಣ । ಯಮನಿಯ ಮಾಸನ ಪ್ರಾಣಾಯಾಮ । ಪ್ರತ್ಯಾಹಾರಧ್ಯಾನಧಾರಣ । ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ । ತಪಶ್ಚಕ್ರ ವರ್ತ್ಯನಾದ್ಯವಿಛ್ಛಿನ್ನಗುರುಪರಂಪರಾ ಪ್ರಾಪ್ತಷಡ್ದರ್ಶನಸ್ಥಾಪನಾಚಾರ್ಯ । ವ್ಯಾಖ್ಯಾನಸಿಂಹಾಸನನಾಧೀಶ್ವರ । ಸಕಲ ವೇದಾರ್ಥಪ್ರಕಾಶಕ। ಸಾಂಖ್ಯತ್ರಯ ಪ್ರತಿಪಾಲಕ । ಸಕಲನಿಗಮಾಗಮಸಾರಹೃದಯ । ವೈದಿಕಮಾರ್ಗಪ್ರವರ್ತಕ । ಸರ್ವತಂತ್ರಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಶಿಂಹಾಸನ ಪ್ರತಿಷ್ಠಾಪನಾ ಚಾರ್ಯ। ಶ್ರೀಮದ್ರಾಜಾಧಿರಾಜಗುರುಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗಪುರವರಾಧೀ ಶ್ವರ। ಶೃಂಗೇರಿ ಶ್ರೀವಿದ್ಯಾಶಂಕರದೇವ ದಿವ್ಯಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀನರಶಿಂಹಭಾರತೀ ಸ್ವಾಮಿ ಗಳೈಯ್ಯನವರ ಕರಕಮಲಸಂಜಾತರಾದ ಶೃಂಗೇರಿ ಶ್ರೀಶಂಕರಭಾರತೀಸ್ವಾಮಿಗಳೈಯ್ಯನವರ ದಿವ್ಯ ಶ್ರೀಪಾದ ಪದ್ಮಂಗಳಿಗೆ.

ಶೇ। ಕಾಪುಗೇತಿ ಕಸ್ತೂರಿ ರಂಗಪ್ಪನಾಯಕರ ರಾಜಾಮೆದಕರಿನಾಯಕರು ಬರಸಿಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂದರೆ ನಮ್ಮ ಹಿರಿಯರಿಗೆ ಪುಣ್ಯಸುಕೃತವಾಗಬೇಕೆಂದು ಭಾವನಾಮ ಸಂವತ್ಸರದ ಕಾರ್ತಿಕ ಬಹುಳ ೨ ಸ್ಥಿರವಾರ ನಮ್ಮ ವಿವಾಹಮಹೋತ್ಸವದ ಅತಿಶಯದಲ್ಲೂ ಗುಂಟನೂರು ಮಲ್ಲಪ್ಪನ ಭಾವಿತೋಟದ ಭೂಮಿ ಸಹ ಸಹಿರಣ್ಯೋದಕದಾನ ಧಾರಾಪೂರ್ವಕವಾಗಿ ಶಿವಾರ್ಪಿತವಾಗಿಕೊಟ್ಟುಯಿದ್ದೇವೆ. ಆಚಂದ್ರಾರ್ಕಸ್ಥಾಯಿಯಾಗ ಅನುಭವಿಸಿಕೊಂಡು ಸುಖದಲ್ಲಿಹುದು. ಎಂದು ಬರಸಿಕೊಟ್ಟದಾನಪತ್ರ॥

ಸ್ವದತ್ತಾದ್ವಿಗುಣಂಪುಣ್ಯಂ। ಪರದತ್ತಾನುಪಾಲನಂ ಪರದತ್ತಾಪಹಾರೇಣ। ಸ್ವದತ್ತಂ ನಿಷ್ಫಲಂ ಭವೇತ್.॥೧॥



೧೮೯. ಲೇಖನ.—(ಸುಮಾರು) ಈಶ್ವರ, ಶಾ. ಶ. ೧೬೭೯, ಕ್ರಿ. ಶ. 1757.

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಪದವಾಕ್ಯಪ್ರಮಾಣ ಪಾರವಾರಪಾರೀಣ । ಯಮನಿಯಮಾಸನ । ಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣ । ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಚ್ಛಿನ್ನಗುರುಪರಂಪರಾಪ್ರಾಪ್ತ । ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ । ಸಕಲವೇದಾರ್ಥ ಪ್ರಕಾಶಕ । ಸಾಂಖ್ಯತ್ರಯಪ್ರತಿಪಾಲಕ । ಸಕಲನಿಗಮಾಗಮಸಾರಹೃದಯ । ವೈದಿಕಮಾರ್ಗಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ತುಂಗ ಭದ್ರಾತೀರವಾಸ । ಋಷ್ಯಶೃಂಗಪುರವರಾಧೀಶ್ವರ । ಶ್ರೀಶೃಂಗೇರೀ ಶ್ರೀವಿದ್ಯಾಶಂಕರದೇವರದಿವ್ಯ ಶ್ರೀಪಾದಪದ್ಮಾ ರಾಧಕರಾದ ಶೃಂಗೇರಿನರಸಿಂಹಭಾರತೀಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿಶಂಕರಭಾರತೀಸ್ವಾಮಿ ಗಳವರ ದಿವ್ಯಶ್ರೀಚರಣಾರವಿಂದಗಳಿಗೆ—

ಸೆ॥ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಕಸ್ತೂರಿರಂಗಪ್ಪನಾಯಕರ ರಾಜಾಮದಕರಿ ನಾಯಕರು ಸದ್ವಿನಯಭಯಭಕ್ತಿಯಿಂದ ಶಿರಸಾಷ್ಟಾಂಗವೆರಗಿ ಪೊಡಮಟ್ಟು ಪಾದದ ಮೇಲೆ ಬಿದ್ದು ಮಾಡುವ ಅನೇಕ ಸಹಸ್ರಬಿನ್ನಹ. ಯಿವರಿಗೆ ದೇವರವರ ಆಶೀರ್ವಾದಾನುಗ್ರಹದಿಂದ ನಾವು ಪರಿಣಾಮದಲ್ಲಿದ್ದೇವೆ । ಸ್ವಾಮಿ ಗಳವರ ಯೋಗಾನಂದಾತಿಶಯ ಮುಂತಾಗಿ । ಕಳುಹಿದ ಆಶೀರ್ವಾದಪತ್ರಿಕೆಯಿಂದಲೂ ಮಠದ ಮಾಧವಭಟ್ಟ ಮಾಣಿ ಕೇಶ್ವರಭಟ್ಟರ ಮುಖವಚನದಿಂದೆಲ್ಲಾಭಿಪ್ರಾಯಗಳನ್ನೂ ಕೇಳಿ ಸಂತೋಷಿತರಾದೆವು. ಈ ಬಾರಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಹಾವನೂರಲ್ಲಿ ಕುಳಿತು ಇಧೇವೆ. ಆತದಂಗ ಉಡುಗರೆ ವ್ಯಾಸಾಕ್ಷತೆ ವಿಭೂತಿ ಫಲಪ್ರಸಾದ ಮುಂತಾಗಿ ಕಳುಹಿಸಿ ಇದ್ದೇವೆಂಬಹಾಗೆ ಬುದ್ಧಿಗೊಟ್ಟು ಬರಸಿದಾ ಆಶೀರ್ವಾದ ಪತ್ರಿಕೆಯನ್ನು ಶಿರಸಾವಹಿಸಿಕೊಂಡೆವು. ಸ್ವಾಮಿ ಗಳವರ ಕೃಪಾನುಗ್ರಹವೆಂಬಂಥಾದ್ದು ನಮಗೆ ವಜ್ರಕವಚವಾಗಿ ಹಲ್ಲಿ । ಫಲಪ್ರಸಾದವಿಭೂತಿಮಂತ್ರಾಕ್ಷತೆಯೇ ಸಾಲವೆ । ಉಡುಗರೆ ಕಳುಹಬೇಕೆಂಬುದೇನಿತ್ತು ಆದರೂ ತಾತ್ಪರ್ಯದಿಂದ ಕಳುಹಿದಂಥಾ ಉಡುಗರೆಯನ್ನು ಶಿರ ಸಾವಹಿಸಿಕೊಂಡು ಬದಲು ಉಡುಗರೆಯನ್ನು ಕಟ್ಟಿಸಿ ಮಠದ ಮಾಧವಭಟ್ಟ ಮಾಣಿಕೇಶ್ವರಭಟ್ಟರ ಸಂಗಡ ಕಳುಹಿಸಿ ಯಿದ್ದೀತು ಚರಣ ಸ್ಪರ್ಶಮಾಡಿ ಕೃತಾರ್ಥರಮಾಡುವುದು । ಮೇಲಾಗೆಲ್ಲಾ ಉಭಯತರೂ ವಿಜ್ಞಾಪನೆ ಮಾಡಲಾಗಿ ಚಿತ್ತಕ್ಕೆ ತರ ಚಿತ್ತೈಸಿ । ಸ್ವಾಮಿಗಳವರ ಕ್ಷೇಮಾದಿ ಶುಭೋದಯಗಳಿಗೆ ಆಶೀರ್ವಾದ ಪತ್ರಿಕೆಯನ್ನು ಕಳುಹಕಟ್ಟು ಮಾಡಿಸಬೇಕು. ಇಂತಿ ಪಾದದ ಮೇಲೆ ಬಿದ್ದು ಮಾಡುವ ಸಹಸ್ರ ಬಿನ್ನಹ॥

———

೧೯೦. ಲೇಖನ.—(ಸುಮಾರು) ಪ್ರಮಾಥಿ, ಶಾ. ಶ. ೧೬೮೧, ಕ್ರಿ.ಶ. 1759.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ । ಪದವಾಕ್ಯಪ್ರಮಾಣ । ಪಾರಾವಾರಪಾರೀಣ । ಯಮನಿಯ ಮಾಸನಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ । ಸಮಾಧ್ಯಷ್ಟಾಂಗಯೋಗಾನುಷ್ಠಾನ ತಪಶ್ಚಕ್ರವರ್ತ್ಯನಾದ್ಯ ವಿಚ್ಛಿನ್ನ । ಗುರುಪರಂಪರಾಪ್ರಾಪ್ತ । ಷಡ್ದರ್ಶನಸ್ಥಾಪನಾಚಾರ್ಯ । ವ್ಯಾಖ್ಯಾನಸಿಂಹಾಸನಾಧೀಶ್ವರ । ಸಕಲವೇದಾರ್ಥ ಪ್ರಕಾಶ । ಸಾಂಖ್ಯತ್ರಯಪ್ರತಿಪಾಲಕ । ಸಕಲ ನಿಗಮಾಗಮಸಾರಹೃದಯ । ವೈದಿಕಮಾರ್ಗಪ್ರವರ್ತಕ । ಸರ್ವತಂತ್ರ ಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನೀ । ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ರಾಜಗುರು ಭೂಮಂಡಲಾಚಾರ್ಯ । ತುಂಗಭದ್ರಾತೀರವಾಸ । ಋಷ್ಯಶೃಂಗಪುರವರಾಧೀಶ್ವರ । ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ । ಶೃಂಗೇರಿ ಶ್ರೀ ನರಸಿಂಹಭಾರತೀಸ್ವಾಮಿ ಗಳೈಯ್ಯನವರ । ಕರಕಮಲ ಸಂಜಾತರಾದ ಶ್ರೀ ಶೃಂಗೇರಿ ಶಂಕರಭಾರತೀಸ್ವಾಮಿಗಳೈಯ್ಯನವರ ದಿವ್ಯ ಶ್ರೀ ಚರಣಾರ ವಿಂದಗಳಿಗೆ—

ಸೇ॥ ಶ್ರೀಮಾನ್ ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ರಂಗಪ್ಪನಾಯಕರ। ರಾಜಾಮದಕರಿನಾಯಕರು ಸದ್ವಿನಯ ಭಯ ಭಕ್ತಿಯಿಂದ ಶಿರಸಾಷ್ಟಾಂಗವೆರಗಿ ಪೊಡಮಟ್ಟು ಪಾದದಮೇಲೆ ಬಿದ್ದು ಮಾಡುವ ಅನೇಕ ಸಹಸ್ರ ಬಿನ್ನಹ। ನಾವು ಸ್ವಾಮಿಗಳವರ ಆಶೀರ್ವಾದಾನುಗ್ರಹದಿಂದ ಪರಣಾಮದಲ್ಲಿದ್ದೇವೆ. ಸ್ವಾಮಿಗಳವರ ಯೋಗಾನಂದಾತಿಶಯಕ್ಕೆ ಕಳುಹ ಚಿತ್ತೈಸಿದ॥ ಆಶೀರ್ವಾದಪತ್ರಿಕೆ ಯಿಂದೆಲ್ಲಾ ಬುದ್ಧಿಯನ್ನು ನೋಡಿಕೊಂಡೆವು। ಈ ಸಂವತ್ಸರ ಚಾತುರ್ಮಾಸ್ಯ ಪ್ರಯುಕ್ತ। ಈಶ್ವರಾರಾಧನೆಗೆ ಗೋಕಾವಿದೇಶದಲ್ಲಿ। ಸಂಕಲ್ಪಿಸಿ ವಾಸ್ತವ್ಯಮಾಡಿ ತಂದಂಗವ್ಯಾಸಾಕ್ಷತೆ ಉಡುಗರೆಯನ್ನು ವೇ ಮಾಣಿಕೇಶ್ವರಭಟ್ಟ ಮಹಾದೇವಭಟ್ಟರ ಸಂಗಡ ಕಳುಹಿಸಿದ್ಧೀತೆಂಬಹಾಗೆ ಬುದ್ಧಿಗೊಟ್ಟು ಇದ್ದಲ್ಲ ಕೃತಾರ್ಥರಾದೆವು. ದೇವರವರ ಆಶೀರ್ವಾದಾನುಗ್ರಹವೆಂಬ ವಜ್ರಾಂಗಮೇಲಾಗಿದ್ದಲ್ಲ ವ್ಯಾಸಾಕ್ಷತೆಯೇಸಾಲದೇ। ಉಡುಗರೆಕಳುಹಿಸಬೇಕೆಂಬುದೇನಿತ್ತು ಆದಾಗ್ಯೂ ಪ್ರೀತಿಯಿಂದ ದಯಮಾಡಿ ಕಳುಹಿಸಿದ ಉಡುಗರೆಯನ್ನು ತೆಗೆದುಕೊಂಡು ಹರ್ಷಿತರಾದೆವು। ಸಾಂಪ್ರತ. ಸ್ವಾಮಿಗಳವರಿಗೆ। ಉಡುಗರೆ ಕಟ್ಟಿಸಿ ಕಳುಹಿಸಿ ಇದ್ದೀತು ಪಾದಸ್ಪರ್ಶಮಾಡಿಸಿ ಕೃತಾರ್ಥರ ಮಾಡಿಸಬೇಕು। ಅವ ಶೇಷ ವೇ। ಮಣಿಕೇಶ್ವರ ಭಟ್ಟ, ಮಹಾದೇವ ಭಟ್ಟರು। ಬಿನ್ನಹವಮಾಡಲಾಗಿ ದಿವ್ಯ ಚಿತ್ತಕ್ಕೆ ತರಚಿತ್ತೈಸಿ ಕೊಡತಕ್ಕ ಬುದ್ಧಿಗೆ ಆಶೀರ್ವಾದ ಪತ್ರಿಕೆ ಕಳುಹ ಕಟ್ಟುಮಾಡಿಸಬೇಕು। ಯಿಂತಿ ಸಹಸ್ರ ಭಿನ್ನಹ॥

---

೧೧೧. ಲೇಖನ—(ಸುಮಾರು) ವಿಕ್ರಮ, ಶಾ. ಶ. ೧೬೮೨, ಕ್ರಿ.ಶ. 1760.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನ್ನಾಧ್ಯವಿಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶ ಸಾಂಖ್ಯತ್ರಯಿ ಪ್ರತಿಪಾಲಕ ಸಕಲ ನಿಗಮಾಗಮ ಸಾರ ಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ನರಸಿಂಹಭಾರತೀ ಸ್ವಾಮಿಗಳವರ ಕರ ಕಮಲ ಸಂಜಾತರಾದ ಶೃಂಗೇರಿ ಶಂಕರಭಾರತೀ ಸ್ವಾಮಿಗಳ ವರ ದಿವ್ಯ ಶ್ರೀಪಾದ ಪದ್ಮಂಗಳಿಗೆ.

ಸೆ॥ ಶ್ರೀಮನ್ ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಕಸ್ತೂರಿ ರಂಗಪ್ಪನಾಯಕರ ರಾಜಾ ಮದಕರಿ ನಾಯಕರು ಸದ್ವಿನಯ ಭಯಭಕ್ತಿಯಿಂದ ಶಿರಸಾಷ್ಟಾಂಗ ವೆರಗಿ ಪೊಡಮಟ್ಟು ಪಾದದ ಮೇಲೆ ಬಿದ್ದುಮಾಡುವ ಅನೇಕ ಸಹಸ್ರ ಬಿನ್ನಹ ।ನಾವು ಪರಿಣಾಮದಲ್ಲಿದ್ದೇವೆ। ಸ್ವಾಮಿಗಳವರ ಯೋಗಾನಂದಾತಿಶಯಕ್ಕೆ ಹರಸಿ ಕಳುಹಿಸ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಬುದ್ಧಿಯನ್ನು ನೋಡಿಕೊಂಡು ಚಿ॥ ಪರಶುರಾಮಪ್ಪನ ವಿವಾಹ ಪ್ರಯುಕ್ತ ವಸ್ತ್ರ ಮಂತ್ರಾಕ್ಷತೆ ಕಳುಹಿಸಿದ್ದಲ್ಲ ಬರನೋಡಿ ಶಿರಸಾವಹಿಸಿ ಕೊಂಡೆವು। ಸಾಂಪ್ರತ । ವಿವಾಹ ತದಂಗ ವಸ್ತ್ರವನ್ನು। ವೆ॥ ಮಾಧವಭಟ್ಟ।ಮಾಣಿಕಭಟ್ಟರ ಸಂಗಡ ಕಟ್ಟಿಸಿಕಳುಹಿಸಿಯಿದ್ದೀತು। ಪಾದಸ್ಪರ್ಶಮಾಡಿಸಿ ಕೃತಾರ್ಥರಾಗುವಂತೆ ಮಾಡಿಸುವುದು। ಅವಶೇಷ ಪ್ರಸಂಗ ಉಭಯ ವೇದ ಮೂರ್ತಿಗಳು ಬಿನ್ನಹವಮಾಡಲಾಗಿ ದಿವ್ಯಚಿತ್ತಕ್ಕೆ ತರಚಿತ್ತೈಸಿಕೊಡತಕ್ಕ ಬುದ್ಧಿಗೆಆಶೀರ್ವಾದ ಪತ್ರಿಕೆಯನ್ನು ಕಳುಹಕಟ್ಟುಮಾಡಿಸಬೇಕು। ಯಿಂತಿ ಪಾದದ ಮೇಲೆ ಬಿದ್ದುಮಾಡುವ ಅನೇಕ ಸಹಸ್ರ ಬಿನ್ನಹ॥

---

*೧೧೨. ಲೇಖನ.—(ಸುಮಾರು) ಸ್ವಭಾನು, ಶಾ. ಶ. ೧೬೮೫, ಕ್ರಿ.ಶ. 1763.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧ್ವೀಶ್ವರ ಸಕಲ ವೇದಾರ್ಥ ಪ್ರಕಾಶ ಸಾಂಖ್ಯತ್ರಯಿ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರ ಆದಿ ರಾಜಧಾನೀ ವಿದ್ಯಾನಗರ ಮಹಾ ರಾಜಧಾನಿ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀನರಸಿಂಹ ಭಾರತೀ ಸ್ವಾಮಿಗಳೈಯ್ಯನವರ ಕರಕಮಲ ಸಂಜಾತರಾದ ಶ್ರೀ ಶೃಂಗೇರೀ ಶಂಕರಭಾರತೀ ಸ್ವಾಮಿಗಳೈಯ್ಯನವರ ದಿವ್ಯ ಶ್ರೀಚರಣಾರವಿಂದಗಳಿಗೆ.

ಸೇ॥ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಕಸ್ತೂರಿ ರಂಗಪ್ಪನಾಯಕರ ರಾಜಾ ಮದಕೇರಿ ನಾಯಕರು ಸದ್ವಿನಯ ಭಯ ಭಕ್ತಿಯಿಂದ ಶಿರಸಾಷ್ಟಾಂಗವೆರಗಿ ಪೊಡಮಟ್ಟು ಪಾದದ ಮೇಲೆ ಬಿದ್ದು ಮಾಡುವ ಅನೇಕ ಸಹಸ್ರ ಬಿನ್ನಹ। ನಾವು ಸ್ವಾಮಿಗಳವರ ಆಶೀರ್ವಾದಾನುಗ್ರಹದಿಂದ ಪರಿಣಾಮದಲ್ಲಿದ್ದೇವೆ। ಸ್ವಾಮಿಗಳವರ ತಪಃ ಪ್ರಭಾವಾತಿಶಯುಗಳಿಗೆ ವೆ। ದೇವಗಿರಿ ಮಲ್ಲಭಟ್ಟರ ಸಂಗಡ ಕಳಹ ಚಿತ್ತೈಸಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಬುದ್ಧಿಯನ್ನು ನೋಡಿಕೊಂಡು ವಿಭೂತಿ ಫಲಮಂತ್ರಾಕ್ಷತೆ ಉಡುಗರೆ ಬರ ನೋಡಿಸಿ ಶಿರಸಾವಹಿಸಿಕೊಂಡು ಕೃತಾರ್ಥರಾದೆವು। ತರುವಾಯ। ಹೊಳಲು ಕೋಟೆಯು ನಮ್ಮ ಸ್ವಾಧೀನವಾದ್ದು ಕೇಳಿ ಪರಮ ಸಂತೋಷವಾಯಿತು. ಉತ್ತರತ್ರ ಯಿತೋಪ್ಯಧಿಕ ದುರ್ಗಾಧಿಪತ್ಯವಾಗಬೇಕೆಂಬ ಹಾಗೆ ಈಶ್ವರ ಪ್ರಾರ್ಥನೆ ಮಾಡುತ್ತೇವೆ. ಮಠದ ಧರ್ಮಕ್ಕೆ ಮೈಲಾರಗ್ರಾಮ ನಡವುತ್ತಾ ಇತ್ತು. ಪೂರ್ವ ಪ್ರಕಾರ ನಡೆಸಿಕೊಟ್ಟು ಧರ್ಮಸಂಪಾದನೆ ಮಾಡಬೇಕೆಂಬೇವ ಮಾಡಿ ಪೂರ್ವಕ ಬುದ್ಧಿ ಗೊಟ್ಟು ಯಿದ್ದಲ್ಲಿ ಸಂತೋಷವಾಯಿತು। ಯೇನೊಂದು ಆಗುವ ಶ್ರೇಯಸ್ಸೂ ತಮ್ಮ ಆಶ್ವೀರ್ವಾದಾನುಗ್ರಹದಿಂದಲ್ಲದೆ ಯಿತರವಲ್ಲ। ಹೀಗಿಹಲ್ಲಿ ಹೊಳಲುಯಾದರ ಮೈಲಾರ ಯಾರಡು ಸಕಲವೂ ತಮ್ಮದೇನೆ ಇದ್ದೀತು। ಏತದ್ವಿಚಾರಕ್ಕೆಲ್ಲಾ ವೆ। ದೇವಗಿರಿ ಮಲ್ಲಭಟ್ಟರ ಸಂಗಡ ಹೇಳಿ ಉಡುಗರೆ ಕಟ್ಟಿಸಿ ಕಳುಹಿಸಿಯಿದ್ದೀತು ಬಿನ್ನಹ ಮಾಡಲಾಗಿ ದಿವ್ಯ ಚಿತ್ತಕ್ಕೆ ತರಚಿತ್ತೈಸಿ ವಸ್ತ್ರವನ್ನು ಪಾದಸ್ಪರ್ಶ ಮಾಡಿಸಿ ಕೃತಾರ್ಥರಮಾಡಿಸಬೇಕು. ಯಿಂತ್ರಿ ಸಹಸ್ರ ಬಿನ್ನಹ.

———

೧೧೩. ನಿರೂಪ.—(ಸುಮಾರು) ವ್ಯಯ, ಜ್ಯೇಷ್ಠ ಶು ೬, ಶಾ. ಶ. ೧೬೮೮, ಕ್ರಿ.ಶ. 1766.

ಶ್ರೀ

ಮೈಲಾರ ಲಿಂಗ

ಪೂರ್ವಣಿ॥

ಸ್ವಾಮಿಗಳವರು। ಮೈಲಾರದ ಗ್ರಾಮದ ವಿಚಾರದಲ್ಲು। ಮೇಲು ಗಾಸಿನ ಬಗ್ಯೆ ಸಹಾ ಬುದ್ಧಿಗೊಟ್ಟು ಕಳುಹಿಸಿದಲ್ಲಿ। ಅದೇ ಪ್ರಕಾರ ಮೈಲಾರದ ಗ್ರಾಮವನ್ನು ಮಠದ ಧರ್ಮಕ್ಕೆ ಶಿವಾರ್ಪಿತವಾಗಿ ಕೊಟ್ಟು ಮೇಲು ಗಾಸಿಗೆ ಸಹಾ ನಿರೂಪಬರಸಿ ಕಳುಹಿಸಿ ಇದ್ದೀತು ಚಿತ್ತಕ್ಕೆ ತರಚಿತ್ತೈಸುವಂತೆ ಮಾಡಿಸಬೇಕು ಶ್ರೀ* . . . . . . ಸ್ವಾಮಿಗೆ ನಡವಂಥ ಧರ್ಮ ಪೂರ್ವ ಪ್ರಕಾರ ನಡೆಸಿಕ್ಕೊಂಡು ಬರುವಲ್ಲಿ ಸ್ವಾಮಿಗಳವರು ಸರ್ವಜ್ಞ ಚಿತ್ತರು ಯಿಂತಿ ಸಹಸ್ರ ಬಿನ್ನಹ.

---

* ಈ ಲೇಖನಕ್ಕ ಕಾಲ ನಮೂದಿಲ್ಲಾ. ಮದಕರಿ ನಾಯ್ಕನು ಹೈದರನೊಡನೆ ೧೬೮೫ನೇ ಸುಭಾನು ಸಂವತ್ಸರದಲ್ಲ ಬಂಕಾಪುರದ ಮುತ್ತಿಗೆಯಲ್ಲಿ ಭಾಗವಹಿಸಿದಂತೆ ಚಿತ್ರದುರ್ಗದ ಪಾಳೆಯಗಾರರ ಚರಿತ್ರೆ (ಪುಟ 66) ಯಿಂದ ತಿಳಿಯಬರುತ್ತೆ. ಮುತ್ತಿಗೆಯಿಂದ ಹಿಂದಿರುಗುವಾಗ ಹೊಳಲುಕೋಟೆಯನ್ನು ಜಯಿಸಿರಬಹುದೆಂತ ಊಹಿಸಿ ಮೇಲಿನ ಕಾಲ ನಮೂದಿಸಿದೆ.

೧೧೪. ಲೇಖನ.— ವ್ಯಯ, ಶಾ. ಶ. ೧೬೮೮, ಕ್ರಿ. ಶ. 1766.

* ಶೃಂಗೇರಿ ನರಸಿಂಹ ಭಾರತೀ

ವ್ಯಯನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೬ ಶುಕ್ರವಾರದಲ್ಲೂ

ರಾ|ಕರ್ತರ್ಯೈಯ್ಯನವರು

ಬಾಗೂರು ಶೀಮೆ ನಾಡಿಗ ಹಲಗಯ್ಯಗೆ ನಿರೂಪ| ಬಾಗೂರು ಶೀಮೆ ಮಾರಪಗಟ್ಟೆ ಯಂಬ ಗ್ರಾಮವನು *ಶ್ರೀ . . . . . . . . . . . . . . ಸ್ವಾಮಿಗಳವರಿಗೆ ಶಿವಾರ್ಪಿತವಾಗಿ ಕೊಟ್ಟುಯಿದ್ದೀತು ಮಾರಪಗಟ್ಟೆ ಗ್ರಾಮವನ್ನು ಅವರಧೀನ ಮಾಡುವದೂ. ಶುಭಮಸ್ತು.



———

೧೧೫. ನಿರೂಪ.—(ಸುಮಾರು) ವ್ಯಯ, ಶಾ. ಶ. ೧೬೮೮, ಕ್ರಿ.ಶ. 1766.

ನರಸಿಂಹ ಭಾರತೀ

ರಾ॥ ಕರ್ತರ್ಯೈಯ್ಯನವರು

ನಮ್ಮ ಶೀಮೆ ಪಾ| ಗಾರು, ನಾಡಿಗ ಗೌಡ, ಶ್ಯಾನುಭೋಗ್ಯೆ ಸಹ ನಿರೂಪ| ಈಗ ಕಾಲಾಡಿ ಕಳುಹಿಸಿಧೀತೆ ಶ್ರೀ*. . . . . . . . . . . . . . . . ಸ್ವಾಮಿಗಳವರು ದಿಗ್ವಿಜಯಕ್ಕೆ ತೆರಳುತ್ತಾರೆ ನಿಮ್ಮಲ್ಲಿಗೆ ಬಂದಲ್ಲಿ ಕಾಯಿ ಸೊಪ್ಪು ಹಾಲು ಮೊಸರು ಕುಂಬಾರಸ್ವರೂಪು ಅಡಿಗಬ್ಬು ಹುಲ್ಲು ಮುಂತಾದ್ದನ್ನು ಪರಾಮರಿಕೆ ಮಾಡಿ ಸುರುಕ್ಷಿತ ಮುಂದಾಗಿ ಸಾಗಿಸಿ ಕಳುಹೋದು.

———

೧೧೬. ನಿರೂಪ.—(ಸುಮಾರು) ವ್ಯಯ, ಶಾ. ಶ. ೧೬೮೮, ಕ್ರಿ.ಶ. 1766.

ಶ್ರೀ ನರಸಿಂಹಭಾರತೀ

ರಾ॥ ಕರ್ತರ್ಯೈಯ್ಯನವರು

ನಮ್ಮ ಗಡಿಗಳ ನಾಯಕ ದಳವಾಯಿ ರಾಣಿವೆ ಗುರಿಕಾರರಿಗೆ ನಿರೂಪ| ಶ್ರೀ . . . . . . . ಸ್ವಾಮಿಗಳವರು ದಿಗ್ವಿಜಯಕ್ಕೆ ತೆರಳುತ್ತಾರೆ. ನಿಮ್ಮಲ್ಲಿಗೆ ಬಂದಲ್ಲಿ ವಾಲಗ ಭಜಂತ್ರಿಯಿಂದಾ ಯದುರು ಹೋಗಿ ಕರಕೊಂಡು ಬಂದು ವಳ್ಳೇ ಅಪ್ಪಂಥ ಸ್ಥಳಾ ನೋಡಿಸಿ ಕೋಟೆವಳಗೆ ವಳ್ಳೇ ಮನೆ ಕೊಟ್ಟು ಯಿಟ್ಟುಕೊಂಡು ನಾಡಿಗರ ಮುಖಾಂತರ ಸಾಮಗ್ರಿಯನ್ನೆಲ್ಲಾ ತರಿಸಿ ಹಾಕಿಸಿ, ಹೋಗುವಾಗ್ಗೆ ವಳ್ಳೇ ಬ ೨೫ ಮಂದಿ ವಾಲೇಕಾರರ ಕೊಟ್ಟು ಸುರುಕ್ಷಿತ ಸಾಗಿಸಿ ಕಳುಹೋದು| ಕಾಲಾಡಿ ಕಳುಹಿಸಿದ್ದೀತು| ತಿಳಿದಿಹದು ದಂಡಿನ ಉದ್ದಿಶ್ಯ ನಿಂತಲ್ಲಿ ಊರಾಗೆ ನಾಲ್ಕು ದಿವಸ ಯಿಟ್ಟಿಕೊಂಬೋದು.

———

೧೧೭. ನಿರೂಪ.—(ಸುಮಾರು) ಸರ್ವಜಿತು, ಶಾ. ಶ. ೧೬೮೯, ಕ್ರಿ.ಶ. 1767.

ಶೃಂಗೇರಿ ನರಶಿಂಹ ಭಾರತೀ

ರಾ. ಕರ್ತರೈಯ್ಯನವರು

ನಮ್ಮ ಶೀಮೆ ಗಡಿಗಳ ನಾಯಕ ದಳವಾಯಿ ರಾಣಿವೆ ಗುರಿಕಾರರಿಗೆ ನಿರೂಪ ಶ್ರೀ* . . . . . . . ಸ್ವಾಮಿಗಳವರಬಗೆ ಬ್ರಾಹ್ಮಣರು ಬಂದಲ್ಲಿ ಅವರ ಊರಾಕೆ ಬಿಟ್ಟುಕೊಂಬೋದು ತಮ್ಮ ಶಿಷ್ಯರ ಮೇಲೆ ದೀಪಾರಾಧನೆ ಭಿಕ್ಷಾ ಪಾದಪೂಜೆ ಹಣ ತಕ್ಕೊಳ್ಳುತ್ತಾರೆ. ಊರಾಕೆ ಬಿಟ್ಟುಕೊಂಬೋದು

———

೧೧೮. ನಿರೂಪ.—ಸರ್ವಜಿತು, ಮಾರ್ಗಶಿರ ಶು. ೬, ಶಾ. ಶ. ೧೬೮೯, ಕ್ರಿ.ಶ. 1767

ಶೃಂಗೇರಿ ಸ್ವಾಮಿಗಳವರ

ಸರ್ವಜಿತುನಾಮ ಸಂ। ಮಾರ್ಗಶಿರ ಶು ೬ಯಲ್ಲೂ

ರಾ. ಕರ್ತರೈಯ್ಯನವರು

ಮಾರ್ಗ ಸುಂಕದ್ವೈಕಲ್ಲಯ। ಗಟ್ಟಪರ್ತೆ ಕಟ್ಟೆ ಮಣೇಗಾರ ಶ್ಯಾನುಭೋಗರಿಗೆ ನಿರೂಪ ನಿನ್ನ ಕಟ್ಟೆಯಲ್ಲೂ ನಡೆವಂತಾ ಮೇಲುಗಾಸಿನವರಿಗೆ। ನಿಗದಿಮಾಡಿ ಪಾಲಿಸಿಕಾವಿವರಾ॥ ಮಠದ ಮೇಲುಗಾಸು ಸರ್ವಜಿತು ಸಂವತ್ಸರದ ಆಶ್ವಯುಜ ಶುದ್ಧ ೨ ಆರಭ್ಯ ಹುಟ್ಟುವಳಿ ಆದಂತಾದ್ದ ಸಾರೋದ್ಧಾರವಾಗಿ ನಡಶಿಕೊಡೋದು.

———

ಶುಭಮಸ್ತು

೧೧೯. ಲೇಖನ.—ನಂದನ, ಶ್ರಾವಣ ಶು. ೧, ಶಾ.ಶ. ೧೬೯೪, ಕ್ರಿ.ಶ. 1772.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರವರಾಧೀಶ್ವರ, ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನೃಸಿಂಹಭಾರತೀ ಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿಗಳೈಯ್ಯನವರ ದಿವ್ಯಶ್ರೀಚರಣಾರವಿಂದಗಳಿಗೆ

ಸೇ॥ ಶ್ರೀಮನ' ಮಹಾನಾಯಕಾಚಾರ್ಯ ಕಾಮಗೇತೀ ಕಸ್ತೂರಿ ಕಸ್ತೂರಿ ರಂಗಪ್ಪನಾಯಕರ ರಾಜಾ ಮದಕೇರಿನಾಯಕರು ಸ ದ್ವಿನಿಯ ಭಯಭಕ್ತಿಯಿಂದಾ ಸಿರಸಾಸ್ವಾಂಗವೆರಗಿ, ಪೊಡಮಟ್ಟುಪಾದದಮೇಲೆ ಬಿದ್ದುಮಾಡುವ ಸಹಸ್ರ ಬಿನ್ನಹ ಈ ಶ್ರಾವಣ ಶುದ್ಧ ೧ ನಿರು।ಕ್ಕೆ ದೇವರವರ ಕೃಪಾನುಗ್ರಹದಿಂದ ಪರಿಣಾಮದಲ್ಲಿದ್ದೇವೆ ದೇವರವರ ಯೋಗಾನಂದಾತಿಶಯ ಮುಂತಾಗಿ ಕಳುಹಚಿತ್ತೈಸಿದ ಆಶೀರ್ವಾದ ಪತ್ರಿಕೆಯಿಂದಲೂ ವಿರೂಪಾಕ್ಷ ಶಾಸ್ತ್ರಿಗಳು ಮಠದ ಮಹದೇವ ಭಟ್ಟರೂ ಸೂಚಿಸಿದ್ದರಿಂದೆಲ್ಲಾಭಿಪ್ರಾಯಗಳನ್ನು ಕೇಳಿ ಶಿರಸಾವಹಿಸಿಕೊಂಡು ಸಕಲ ಬುದ್ಧಿ

ಯನ್ನೂ ನೋಡಿಕೊಂಡೆವು. ಶ್ರೀ ಸ್ವಾಮಿಗಳವರ ಆಶೀರ್ವಾದವೆಂಬಂಥಾದ್ದೇ ವಜ್ರಾಂಗಿಯಾಗಿರುವಲ್ಲಿ ವಿಭೂತಿ, ಗಂಧ, ಫಲ, ಪ್ರಸಾದವೇ ಸಾಲದೇ ಉಡುಗರೆ ಕಳುಹಿಸಬೇಕೆಂಬುದೇನಿತ್ತು? ಆದಾಗ್ಯೂ ತಾತ್ಪರ್ಯದಿಂದ ಕಳುಹಿಸಿದಂಥಾ ಉಡುಗರೆಯನ್ನು ಧರಿಸಿಕೊಂಡು ಸನಾಥರಾದೆವು। ಸಾಂಪ್ರತ ವಿರೂಪಾಕ್ಷ ಶಾಸ್ತ್ರಿಗಳು ಮಠದ ಮಾಧವ ಭಟ್ಟರ ಸಂಗಡ ಹೇಳುವಂಥಾ ಪ್ರಸಂಗವನ್ನು ಹೇಳಿ ಉಡುಗೆರೆಯನ್ನು ಕಟ್ಟಿಸಿ ಕಳುಹಿಸಿದ್ದಿತು. ಪಾದಸ್ಪರ್ಶಮಾಡಿಸಿ ಕೃತಾರ್ಥರ ಮಾಡಬೇಕು ಅವಶೇಷ ಪ್ರಸಂಗವನ್ನು ಉಭಯತ್ರರು ವಿಜ್ಞಾಪನೆ ಮಾಡಲಾಗಿ ದಿವ್ಯಚಿತ್ತಕ್ಕೆ ತರಚಿತ್ತೈಸಿಕೊಡಲುಳ್ಳ ಬುದ್ಧಿಮಾರ್ಗಗಳಿಗೆ ಆಶೀರ್ವಾದ ಪತ್ರಿಕೆ ದಯಪಾಲಿಸಬೇಕು ಇಂತಿ ಪಾದದ ಮೇಲೆ ಬಿದ್ದು ಮಾಡುವಾನೇಕ ಸಹಸ್ರ ಬಿನ್ನಹ॥

---

೧೨೦ ಲೇಖನ.—(ಸುಮಾರು) ವಿಜಯ, ಶಾ. ಶ. ೧೬೯೫, ಕ್ರಿ.ಶ. 1773.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠತಪಶ್ಚಕ್ರವರ್ತಿ ಅನಾದ್ಯ ವಿಚ್ಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರಾ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರ ಆದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ನರಸಿಂಹಭಾರತೀಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರೀ ಶಂಕರಭಾರತಿ ಸ್ವಾಮಿಗಳವರ ದಿವ್ಯ ಶ್ರೀ ಚರಣಾರವಿಂದಗಳಿಗೆ.

ಸೆ॥ ಶ್ರೀಮನ್ ಮಹಾನಾಯಕಾಚಾರ್ಯ ಕಾಮಗೇತೀ ಕಸ್ತೂರಿ ಕಸ್ತೂರಿ ರಂಗಪ್ಪನಾಯಕರ ರಾಜಾ ಮೆದಕೇರಿ ನಾಯಕರು ಸದ್ವಿನಯ ಭಯಭಕ್ತಿಯಿಂದ ಶಿರಸಾಷ್ಟಾಂಗವೆರಗಿ ಪೊಡಮೊಟ್ಟು ಪಾದದ ಮೇಲೆ ಬಿದ್ದು ಮಾಡುವ ಸಹಸ್ರ ಬಿನ್ನಹ ದೇವರ ಕೃಪಾನುಗ್ರಹದಿಂದ ನಾವು ಪರಿಣಾಮದಲ್ಲು ಇದ್ದೇವೆ ಶ್ರೀಸ್ವಾಮಿಗಳವರ ಯೋಗಾನಂದಾತಿಶಯಗಳು ಮುಂತಾಗಿ ಕಳಹಚಿತ್ತೈಸಿದ ಆಶೀರ್ವಾದ ಪತ್ರಿಕೆಯಿಂದಲೂ ವೆ॥ ಮಾಧವಭಟ್ಟರಮುಖ ವಚನದಿಂದೆಲ್ಲಾಭಿಪ್ರಾಯಗಳನ್ನು ಕೇಳಿ ಶಿರಸಾವಹಿಸಿಕೊಂಡು ಸಕಲ ಬುದ್ಧಿಯನ್ನೂ ನೋಡಿಕೊಂಡೆವು। ತರುವಾಯ ಚಾತುರ್ಮಾಶ್ಯ ಸಂಕಲ್ಪ ಸಂಬಂಧ ವ್ಯಾಸಾಕ್ಷತೆ ಗಂಧ ಪ್ರಸಾದ ವಸ್ತ್ರಗಳ ಸಹ ಕಟ್ಟಿಸಿ ಕಳುಹಿದ್ದಲ್ಲಿ ಶ್ರೀ॥ಸ್ವಾಮಿಗಳವರ ಆಶೀರ್ವಾದವೆಂಬಂಥಾದ್ದೇವಜ್ರಾಂಗಿಯಾಗಿರುವಲ್ಲಿ ವ್ಯಾಸಾಕ್ಷತೆ, ವಿಭೂತಿ, ಗಂಧ ಪ್ರಸಾದ ಸಾಲದೆ ಉಡುಗರೆ ಕಳುಹಿಸಿಕೊಡಬೇಕೆಂಬುದೇನಿತ್ತು । ಆದಾಗ್ಯೂ ದಯಮಾಡಿ ಕಳುಹಿಸ್ತ ಉಡುಗರೆಯನ್ನು ಧರಸಿಕೊಂಡೆವು. ಈಗ ಬದಲು ಉಡುಗರೆಯನು ಕಟ್ಟಿಸಿ ಕಳುಹಿಸಿದ್ದಿತ್ತು. ಪಾದಸ್ಪರ್ಶಮಾಡಿಸಿ, ಕೃತಾರ್ಥರಮಾಡುವ ಹಾಗೆ ಮಾಡಿಸಬೇಕು. ಮೇಲಾಗೆಲ್ಲಾ ಮಠದ ಮಾಧವಭಟ್ಟರು ಬಿನ್ನೈಸಲಾಗಿ ದಿವ್ಯಚಿತ್ತಕ್ಕೆ ತರಚಿತ್ತೈಸಿಕೊಡಲ ಬುದ್ಧಿಮಾರ್ಗಗಳಿಗೆ ಆಶೀರ್ವಾದ ಪತ್ರಿಕೆ ದಯಪಾಲಿಸಬೇಕು। ಇಂತಿ ಪಾದದ ಮೇಲೆ ಬಿದ್ದುಮಾಡುವ ಸಹಸ್ರ ಬಿನ್ನಹ ॥

---

೧೨೯. ಲೇಖನ.—ವಿಜಯ, ಮಾರ್ಗಶಿರ ಶು. ೧೨, ಶಾ. ಶ. ೧೬೯೫, ಕ್ರಿ.ಶ. 1773.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛ್ಛಿನ್ನ ಗುರುಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕಾ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರ ಆದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನಿ ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾ ಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರವರಾ ಧೀಶ್ವರಾ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ನರಸಿಂಹಭಾರತೀ ಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶಂಕರಭಾರತೀ ಸ್ವಾಮಿಗಳಯ್ಯನವರ ದಿವ್ಯ ಶ್ರೀ ಚರಣಾರ ವಿಂದಗಳಿಗೆ.

ಸೇ॥ ಶ್ರೀಮನ್ ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಕಸ್ತೂರಿ ರಂಗಪ್ಪನಾಯಕರ ರಾಜಾಮದ ಕರಿ ನಾಯಕರು ಸದ್ವಿನಯ ಭಯಭಕ್ತಿಯಿಂದ ಶಿರಸಾಷ್ಟಾಂಗವೆರಗಿ ಪೊಡಮಟ್ಟು ಪಾದದ ಮೇಲೆ ಬಿದ್ದುಮಾಡುವ ಸಹಸ್ರ ಬಿನ್ನಹ. ಮಾರ್ಗಶಿರ ಶುದ್ಧ ೧೨ ನಿರುದ್ಧಕ್ಕೆ ದೇವರ ಕೃಪಾನುಗ್ರಹದಿಂದ ಪರಿಣಾಮದಲ್ಲಿದ್ದೇವೆ। ದೇವರವರ ಯೋಗಾನಂದಾತಿಶಯಗಳಿಗೆ ಆಗಾಗ್ಯೆ ಆಶೀರ್ವಾದ ಪತ್ರಿಕೆ ಕಳುಹಕಟ್ಟುಮಾಡಿಸಬೇಕು. ದೇವರವರು ಮಠದ ಮಾಧವ ಭಟ್ಟ ಹೊನ್ನಾವಧಾನಿಗಳ ಸಂಗಡ ಫಲ ಮಂತ್ರಾಕ್ಷತೆ ವಿಭೂಶಿ ಗಂಧ ಪ್ರಸಾದ ಉಡುಗರೆ ಸಹ ಪಾಲಿಸಿ ಕಳುಹಿಸಿದಲ್ಲಿ ಶಿರಸಾವಹಿಸಿಕೊಂಡು ಸನಾಥರಾದೆವು. ಸ್ವಾಮಿಗಳವರ ಆಶೀರ್ವಾದವೆಂಬಂಥಾದು ವಜ್ರಾಂಗಿಯಾಗಿರುವಲ್ಲಿ ಫಲ ಮಂತ್ರಾಕ್ಷತೆ ವಿಭೂತಿ ಗಂಧ ಪ್ರಸಾದ ಸಾಲದೆ। ಉಡುಗರೆ ಕಳುಹಬೇಕೆಂಬುದೇನಿತ್ತು. ಆದಾಗ್ಯೂ ತಾತ್ಪರ್ಯದಿಂದ ಕಳುಹ ಚಿತ್ತೈಸಿದ ಉಡುಗೊರೆಯನ್ನು ಧರಿಸಿಕೊಂಡೆವು. ಈಗ ಬದಲು ಉಡುಗೆರೆ ಕಟ್ಟಿಸಿ ಕಳುಹಿಸಿದ್ದೀತು. ಪಾದಸ್ಪರ್ಶ ಮಾಡಿ ಕೃತಾರ್ಥರ ಮಾಡಬೇಕು. ಅವಶೇಷ ಪ್ರಸಂಗವನ್ನು ಮಠದ ಮಾಧವ ಭಟ್ಟರು ಹೊನ್ನಾವಧಾನಿಗಳು ವಿಜ್ಞಾಪನೆ ಮಾಡಲಾಗಿ ದಿವ್ಯ ಚಿತ್ತಕ್ಕೆ ತಗಚಿತ್ತೈಸಿಕೊಡಲುಳ್ಳ ಬುದ್ಧಿಮಾರ್ಗಗಳಿಗೆ ಆಶೀರ್ವಾದ ಪತ್ರಿಕೆ ದಯ ಪಾಲಿಸಬೇಕು. ಇಂತೀ ಪಾದದ ಮೇಲೆ ಬಿದ್ದುಮಾಡುವಾನೇಕ ಸಹಸ್ರ ಬಿನ್ನಹಾ॥

---

## E. ಹರಪನಹಳ್ಳಿ ಪಾಳೆಯಗಾರರು

೧೨೨. ದಾನಶಾಸನ.— ವಿಭವ, ಭಾದ್ರಪದ ಶು. ೧೦, ಶಾ.ಶ. ೧೬೨೩, ಕ್ರಿ.ಶ. 1701.

ಶ್ರೀ

ಶುಭಮಸ್ತು

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।
ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ನೃಪ ಶಾಲೀವಾಹನ ಶಕ ವರುಷ ೧೬೨೩ನೆಯ ವಿಭವ ಸಂವತ್ಸರದ ಭಾದ್ರಪದ ಶು. ೧೦ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ। ಪದವಾಕ್ಯ ಪ್ರಮಾಣ ಪಾರವಾರ ಪಾರೀಣ। ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನು ಷ್ಠಾನನಿಷ್ಠ। ತಪಶ್ಚಕ್ರವರ್ತಿ। ಅನಾದ್ಯವಿಚ್ಛಿನ್ನ ಗುರುಪರಾಪರಂಪ್ರಾಪ್ತ। ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ। ಸಕಲವೇದಾರ್ಥ ಪ್ರಕಾಶಕ। ಸಾಂಖ್ಯತ್ರಯ ಪ್ರತಿಪಾಲಕ। ಸಕಲ ನಿಗಮಾಗಮ ಸಾರಹೃದಯ। ವೈದಿಕಮಾರ್ಗಪ್ರವರ್ತಕ। ಸರ್ವತಂತ್ರಸ್ವತಂತ್ರಾದಿರಾಜಧಾನೀ। ವಿದ್ಯಾನಗರ ಮಹಾ

ರಾಜಧಾನೀ। ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರು ಭೂಮಂಡಲಾ ಚಾರ್ಯ ತುಂಗಭದ್ರಾ ತೀರವಾಸ। ಋಷ್ಯಶೃಂಗ ಪುರಾವರಾಧೀಶ್ವರ । ಶೃಂಗೇರಿ ಶ್ರೀ ವಿದ್ಯಾಶಂಕರಭಾರತೀ, ದೇವರದಿವ್ಯ ಶ್ರೀ ಪಾದಪದ್ಮಾ ರಾಧಕರಾದ ಶೃಂಗೇರಿ ಶ್ರೀಶಂಕರಭಾರತೀ ಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ನೃಸಿಂಹಭಾರತಿ ಸ್ವಾಮಿಗಳವರ ಮಠ ಧರ್ಮಕ್ಕೆ.

ಶ್ರೀಮನ್‌ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವ ನಾಯಕರ ಗಂಡ ಮರೆಹೊಕ್ಕವರ ಕಾವ, ಮಾರಾಂತ ಕರಗೆಲ್ವ ಬಾಗಳಿ ಮುಮ್ಮಡಿ ಬಸವಪ್ಪನಾಯಕ ಐಯ್ಯನವರು. ಯಿಸಂ।ದ ಶ್ರಾವಣ ಶು. ೧೫ ಯಲ್ಲೂ ಸೋಮೋಪರಾಗ ಪುಣ್ಯಕಾಲದಲ್ಲಿ ದಾನಧಾರಾ ಪೂರ್ವಕವಾಗಿ ಶಿವಾರ್ಪಿತವಾಗಿ ಹಲಿವಾಗಿಲ ಬಳಿಯಣ, ತುಂಗಭದ್ರಾ ತೀರದ ಬಸವಾಪುರದ ಗ್ರಾಮವನ್ನು ಸರ್ವಮಾನ್ಯವಾಗಿ ಸದಾಶಿವಪ್ರೀತಿಯಾಗಿ ಈ ಗ್ರಾಮವನ್ನು ಕೊಟ್ಟುಯಿದ್ದೇವೆ ಈ ಗ್ರಾಮವನ್ನು ನಮ್ಮ ಪುತ್ರಪೌತ್ರ ಪಾರಂಪರ್ಯವಾಗಿ ಆಚಂದ್ರಾರ್ಕಸ್ಥಾಯಿಗಳಾಗಿಕೊಟ್ಟ ಗ್ರಾಮದಾನ ಪಟ್ಟೆಯಿದಕ್ಕೆ ಸಾಕ್ಷಿಗಳು ಆದಿತ್ಯ ಚಂದ್ರಾಪೃಥುವಿ ಅಪುತೇಜವಾಯು, ಆಕಾಶ ಪಂಚಭೂತಂಗಳು ಸಾಕ್ಷಿಯಾಗಿ ಕೊಟ್ಟುಯಿದ್ದೇವೆ. ಸ್ಥಾನವಾನ್ಯ ಪೂರ್ವಪ್ರಮಾಣಿ ಹರಪುರದಲ್ಲಿ ಇರುವ ಹೊಸಪೇಟೆಯಲ್ಲಿ ಮಠಸಹಾ ಗ್ರಾಮ ಸಹಾ ಶಿಲಾ ಸ್ಥಾಪನಮಾಡ್ಸಿ ಶಿವಾರ್ಪಿತವಾಗಿಕೊಟ್ಟುಯಿದ್ದೇವೆ. ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ। ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್॥ ದಾನಪಾಲನಯೋರ್ಮಧ್ಯೇ ದಾನಾ ಛ್ರೇಯೋನುಪಾಲನಂ। ದಾನಾತ್ಸ್ವರ್ಗಮವಾಪ್ನೋತಿ. ಪಾಲನಾದಚ್ಯುತಂಪದಂ॥ ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃದತ್ತಾ ಸಹೋದರಿ। ಪರದತ್ತಾ ಚ ಮಾತಾ ಚ ದತ್ತಾಂ ಭೂಮಿ ಪರಿತ್ಯಜೇತ್॥ ಮತ್ತಾ ಶ್ರೀ

---

೧೨೩. ದಾನಶಾಸನ.—ಚಿತ್ರಭಾನು, ಕಾರ್ತೀಕ ಶು. ೭, ಶಾ.ಶ. ೧೯೨೪, ಕ್ರಿ.ಶ. 1072.

ಶ್ರೀ

ನಮಸ್ತುಂಗಶಿರಶ್ಚುಂಬಿಚಂದ್ರಚಾಮರ ಚಾರವೇ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷಂಗಳು ೧೬೨೪ನೆಯ ಚಿತ್ರಭಾನು ಸಂವತ್ಸರದ ಕಾರ್ತೀಕ ಶುದ್ಧ ೭ರಲ್ಲೂ

ಶ್ರೀಮನ್ಮಹಾನಾಯಕಾಚಾರ್ಯರಾದ ಭಾಷಗೆ ತಪ್ಪುವ ನಾಯಕರಗಂಡ ಮರೆಹೊಕ್ಕವರಕಾಯ್ವ, ಮಾರಾಂತಕರಗೆಲ್ವ, ಬಾಗಳಿ ಮುಮ್ಮಡಿ ಬಸಪ್ಪನಾಯಕಅಯ್ಯನವರು ಶೃಂಗೇರಿ ಗಳವರಿಗೆಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂದರೆ, ಹರಪುರದ ಪ್ರಸನ್ನ ಶ್ರೀ ಸ್ವಾಮಿಗೆ ಅಮೃತಪಡಿಗೆ ಭಾಗಳೀ ಸ್ಥಳದಲ್ಲಿ ಬೀಜವರೀಲ ೧ ವಕ್ಕಳದ ಗದ್ದೇನು. ಧಾರಾದತ್ತವಾಗಿಕೊಟ್ಟುಯಿದ್ದೀತ್ತೇ ಅಲ್ಲಿಯೇನುಂಟಾದ ಅಕ್ಷಿಣಿ ಆಗಮಿ ಜಲಪಾಷಾಣ, ಸಿದ್ದಸಾದ್ಯಂಗಳೆಂಬ ಅಷ್ಟಭೋಗತೇಜೊಪಾರ್ಜನೆಯನು. ಆಗೂ ಮಾಡಿಸಿಕೊಂಡು ಶ್ರೀ ಸ್ವಾಮಿಗೆ ನೈವೇದ್ಯಂಗಳನ್ನು ಮಾಡಿಸಿಕೊಂಡು ಸುಖದಲ್ಲಿ ನಮಗೆ ಆಶೀರ್ವಾದವನ್ನು ಕೊಟ್ಟುಕೊಂಡು ಸುಖದಲ್ಲಿ ಆಚಂದ್ರಾರ್ಕಸ್ಥಾಯಿಗಳಾಗಿಹುದೆಂದು, ಬರೆಸಿಕೊಟ ಭೂದಾನಪಟ್ಟಿ॥ ಈಗದ್ದೇನೂ, ಸರ್ವಮಾನ್ಯವಾಗಿ ಕೊಟ್ಟು ಯಿದ್ದಿತು ॥ ದಾನಪಾಲನಯೋರ್ಮಧ್ಯೆ, ದಾನಛ್ರೇಯೋನುಪಾಲನಂ॥ ದಾನಾತ್ಸ್ವರ್ಗಮವಾಪ್ನೋತಿ, ಪಾಲ ನಾದಚ್ಯುತಂಪದಂ॥ ಕೊಟ್ಟೂರೇಶನ.

ಮೊಹರು

---

೧೨೪. ದಾನಶಾಸನ.—ವಿಕೃತಿ, ವೈಶಾಖ ಬ. ೧೦, ಶಾ.ಶ. ೧೬೩೨, ಕ್ರಿ.ಶ. 1710.

ಶ್ರೀ




ಶುಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಶಕ ವರುಷಂಗಳು ೧೬೩೨ ಸಾವಿರದಾರನೂರ ಮೂವತ್ತೆರಡನೆಯ ವಿಕ್ರುತ್ತು ನಾಮ ಸಂವತ್ಸರದ ವೈಶಾಖ ಬಹುಳ ೧೦ ರಲ್ಲೂ ಶ್ರೀಮನ್‌ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವನಾಯಕರ ಗಂಡ ಮರೆಹೊಕ್ಕರೆ ಕಾಯ್ವ ಮಾರಾಂತಗೆಲ್ವ ಬಾಗುಳಿ ಹರಿಯಪ್ಪನವರು ಜೋಯಿಸರ ಪ್ರಸನ್ನ ಭಟ್ಟಗೆ ಬರಿಶಿಕೊಟ್ಟ ದಾನಪಟ್ಟದ ಕ್ರಮವೆಂತೆಂದರೆ। ನೀನು ರಾ॥ ಶಂಕರಾಚಾರ್ಯರವರ ಮಠಾನು ಕಟ್ಟಿಸಿ ರಾ॥ ಸ್ವಾಮಿಗಳವರಿಗೆ ಈ ಮಠವನ್ನು ಕೊಟ್ಟಕಾರಣ ಅವರು ಶ್ರೀ ವಿರೂಪಾಕ್ಷೇಶ್ವರನ ಪ್ರತಿಷ್ಠೆ ಮಾಡಿದ ಕಾರಣ ದೇವರ ಅಮೃತಪಡಿಗೆ ಲಾ॥ ೧ ವಕ್ಕಳಗದ್ದೇನು ಬಾಗುಳೀಲಿ ಕೊಟ್ಟು ಯಿದಲ್ಲಿ ರಾ॥ ಸ್ವಾಮಿಗಳವರು ನಿನಗೆ ಸ್ವಾಸ್ತಿಯ ಕೊಡ್ತೆವೆಯೆಂದು ವಾಕ್ಯಕೊಟ್ಟು. ಯಿದ್ದಕಾರಣ ಈಗ ನಿನ್ನ ಸಂಗಡ ಪಾದಗಾಣಿಕೆಗೆ ೧೦ ಹತ್ತು ವರಹವನ್ನು ತೆಗೆದುಕೊಂಡು ಬಾಗುಳಿಲಿಕೊಟ್ಟು. ಇದ್ದ ಅಮೃತ ಪಡಿಗದ್ದೆನು. ನಿನಗೆ ಪಾಲಿಸಿಕೊಂಡು ಇದ್ದೇವೆ. ನಿನ್ನ ಪುತ್ರಪೌತ್ರಪಾರಂಪರಿಯಲೂ ಅನುಭವಿಸಿಕೊಂಡು ಸುಖದಲ್ಲಿ ಇಹುದೆಂದು ಬರಸಿಕೊಟ್ಟ ದಾನಪಟ್ಟಿ.




---

೧೨೫. ಲೇಖನ.—ಪಾರ್ಥಿವ, ಶಾ.ಶ. ೧೬೮೭, ಕ್ರಿ.ಶ. 1766.

ಶ್ರೀಮತುಸಕಲ ಗುಣ ಸಂಪನ್ನರಾದ ಅಖಂಡಿತ ಲಕ್ಷ್ಮೀಅಲಂಕೃತರಾದ ಮಹಮ್ಮೇರುವಿಗೆ ಸರಿಸಮಾನರಾದ ರಾಜಮಾನ್ಯ ರಾಜೇ ಶ್ರೀ ಮಾಧವರಾವ್ ಪ್ರಧಾನರವರಿಗೆ—

ಶ್ರೀಮನ್ ಮಹಾನಾಯಕಾಚಾರ್ಯರಾದ ಬಾಗುಳಿ ಬಸಪ್ಪನಾಯಕರ ಸೋಮಶೇಖರ ನಾಯಕರವರು ಮಾಡುವ ಶರಣಾರ್ಥಿ. ಅದಾಗಿ ನಾವು ಪರಿಣಾಮದಲ್ಲಿ ಇದ್ದೇವೆ. ತಮ್ಮ ಪರಿಣಾಮದ ಸ್ಥಿತಿ ಮುಂತಾದ ವಿವರಗಳಿಗೆ ಆಗಾಗ್ಯೆ ಬರಸಿ ಕಳುಹೋಹಾಗೆ ಮಾಡಿಸೋದು. ತರುವಾಯ ಕಳುಹಿಸ್ತಲಿ॥ ವನ್ನ ವೋದಿಸಿಕೇಳಿ ಅಭಿಪ್ರಾಯ ಅವಗತವಾಯ್ತು ಮೈಲಾರದ ಗ್ರಾಮದ ವಸೂಲಾತಿ. ಐವಜದಬಗ್ಗೂ ಆ ಗ್ರಾಮದ ಹೊಲ ಮೇರೆ ಬಗ್ಗೆ ಕುರುವತ್ತಿಯವರು ವುಪಸರ್ಗ ಮಾಡದಹಾಗೆ. ಕಟ್ಟಮಾಡಿಸಬೇಕೆಂಬ ಹಾಗೆ ಬರಸಿದಲ್ಲಿ ಈ ಕಾಲ ಸಂಸ್ಥಾನದ ಶಕ್ತಿಮಿಾರಿ ಖಂಡಣೆ ತೆಗೆದುಕೊಂಡದ್ದರಿಂದ. ಸಂಸ್ಥಾನ ನಿತ್ರಾಣತೆ ಬಿದ್ದು ದಣುಕೊಂಬುವಂಥಾದ್ದು. ಪ್ರಸಿದ್ಧಿಯಾಗಿಯಿದ್ದಿತು. ತಾವು ಸರ್ವಸ್ವದಿಂದಲೂ, ಪೂರ್ಣಸ್ವಾಭಿಮಾನಿಸಿ ನಡೆಸಿದಲ್ಲದೆ. ಸಂಸ್ಥಾನ ಬಚಾವಣೆ ಆಗದು. ಏತದ್ವಿವರಗಳನ್ನೆಲ್ಲಾ. ತಮಗೆ ತಿಳಿಸುವಬಗ್ಗೆ. ವಕೀಲನ ತಮ್ಮ ಸಮೀಪಕ್ಕೆ ಕಳುಹಿಸುವದಮಾಡಿಯಿದ್ದೇವೆ ಬಂದು ಶೃತಗೊಳಿಸಿದರಿಂದ ಅಂತಃಕರಣಕೆ ವೇದ್ಯವಾದೀತು. ಹೊಲ ಮೆರೆಬಗ್ಗೆ ನೂತನ ಪ್ರವರ್ತಕಮಾಡದೆ, ಪೂರ್ವಪ್ರಕಾರ ವರ್ತಿಸುವಹಾಗೆ ಕುರುವತ್ತಿ ಗ್ರಾಮಸ್ಥರಿಗೆ ತಾಕೀದಿಮಾಡಿಸಿ ಅದೆ

ಬಸವ

ವಿಹಿತವಾದ ಪ್ರಸಂಗಕ್ಕೆ ಸಂಸ್ಥಾನದಿಂದ ಇತರ ವಿಚಾರ ಆಗಲರಿಯದು. ಈ ಸಂಸ್ಥಾನದ ಸಾಭಿಮಾನ ತಮ್ಮ ಪದರಿಗೆ ಬಂದುಯಿಹಲ್ಲಿ ವಿಶೇಷ ಬರಸುವುದೇನಿದೆ.




———

### ೧೨೬. ದಾನಶಾಸನ.—ಚಿತ್ರಭಾನು, ಕಾರ್ತೀಕ ಶು. ೭, ಶಾ. ಶ. ೧೬೨೪, ಕ್ರಿ.ಶ. 1702.

ಶ್ರೀ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನಶಕ ವರುಷಂಗಳು ೧೬೨೪ನೆಯ ಚಿತ್ರಭಾನು ಸಂವತ್ಸರದ ಕಾರ್ತೀಕ ಶುದ್ಧ ೭ ಯಲ್ಲೂ ಶ್ರೀಮನ್ ಮಹಾನಾಯಕಾಚಾರ್ಯರಾದ ಭಾಷೆಗೆ ತಪ್ಪುವ ನಾಯಕರ ಗಂಡ ಮರೆ ಹೊಕ್ಕವರ ಕಾಯ್ವ। ಮಾರಾಂತರ ಗೆಲ್ವ ಬಾಗಳಿ ಮುಮ್ಮಡಿ ಬಸಪ್ಪ ನಾಯಕ ಅಯ್ಯನವರು ಶ್ರೀ॥ .................... ಪುಷ್ಪಕ್ಕೆ ಕೊಟ್ಟ ಭೂದಾನ ಪಟ್ಟಿ ಕ್ರಮವೆಂತೆಂದರೆ. ಯೀ ಶ್ರೀ ಸ್ವಾಮಿ ಪುಷ್ಪಕ್ಕೆ ಕೆಸರಹಳ್ಳಿ ಗ್ರಾಮದಲ್ಲಿ ಯರೇ ಹೊಲದ ಬೀಜವರೀಲ ೦॥೦ ಹತ್ತಗಿದ್ದನದ ಹೊಲವನ್ನು ಧಾರಾ ದತ್ತವಾಗಿ ಕೊಟ್ಟುಯಿದ್ದೀತು. ಅಲ್ಲಿಯೇ ನುಂಬಂದಾರ್ಚನೆನೂ, ಅನುಭವಿಸಿಕೊಂಡು ಸುಖದಲ್ಲಿ ಇಹುದೆಂದು ಬರಕೊಟ್ಟ ಭೂದಾನ ಪಟ್ಟಿ — ಕೊಟ್ಟೂರೇಶನ




———

### ೧೨೭. ನಿರೂಪ.—ಖರ, ಚೈತ್ರ ಬ. ೮, ಶಾ.ಶ. ೧೬೯೪, ಕ್ರಿ.ಶ. 1772.

ಶ್ರೀ

ತಾಲೀಕು.

೦॥ ಖರ ಸಂವತ್ಸರದ ಚೈತ್ರಬಹುಳ ೮ ಯಲ್ಲೂ ಬಾಗಳಿ ಸೋಮಶೇಖರನಾಯಕರ ಬಸವಪ್ಪನಾಯಕಯ್ಯನವರು ಕುರವತಿ ಷ। ಕೆಂಚಣ್ಣ। ಕೊಟ್ರಣ್ಣ ಹನುಮಣ್ಣನಿಗೆ ಚೀಟಿ । ಈ ಗ್ರಾಮದ ಬಳಿಯಣ ಸೋಮಲಾಪುರ ಗ್ರಾಮವನ್ನು ಕೂಡ್ಲಿಗೆ ಮಠದ ನರಸಿಂಹ ಭಾರತೀಗಳಿಗೆ ದಾನ ಧಾರಾ ಪೂರ್ವಕವಾಗಿ ಉಮ್ಮಳಿಯಾಗಿ ಪಾಲಿಸಿಯಿದೀತೆ. ಆ ಗ್ರಾಮವನ್ನು ತೋರಣಾ ಕಟ್ಟಿಸಿ ಕೊಟ್ಟು ಹೇಳಿದ ಪ್ರಕಾರ ನಡಕೊಂಬ ಹಾಗೇ ತಾಕೀದಿ ಮಾಡಿಸಿಕೊಡೋದು. ಶ್ರೀ




———

೧೨೮. ಲೇಖನ.—ಪ್ಲವ, ಶಾ. ಶ. ೧೭೦೩, ಕ್ರಿ. ಶ. 1781.

ಶ್ರೀ

ಶ್ರೀಮತ್ ಪರಮಹಂಸ ಪರಿವ್ರಾಜಕಾ ಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮ ನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನು ನಿಷ್ಠ ತಪಶ್ಚಕ್ರ ವರ್ತಿ ಅನಾದ್ಯ ವಿಚ್ಛಿನ್ನ ಗುರು ಪರಂಪರಾ ಪ್ರಾಪ್ತಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರ ಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾ ಪನಾಚಾರ್ಯ ಶ್ರೀ ಮದ್ರಾಜಾಧಿರಾಜ ಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರವ ರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳ್ವೈಯ್ಯನವರ ಕರ ಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ—

ಶ್ರೀಮನ್ ಮಹಾನಾಯಕಾ ಚಾರ್ಯರಾದ ಬಾಗಳಿ ಸೋಮಶೇಖರ ನಾಯಕರ ಬಸವಪ್ಪ ನಾಯಕರವರು ಮಾಡುವ ಬಿನ್ನಹ ಅದಾಗಿ ನಾವು ಪರಿಣಾಮದಲ್ಲಿ ಯಿದ್ದೇವೆ. ತಮ್ಮ ಸಾಮ್ರಾಜ್ಯಾದಿ ವೈಭವಾತಿಶಯಗಳಿಗೆ ಆಗಾಗ್ಯೆ ಬರಸಿ ಕಳುಹೋ ರೀತಿ ಮಾಡಿಸಬೇಕು. ತರುವಾಯ ಹಂಪೆಯಲ್ಲಿ ಶ್ರೀ॥ ಸ್ವಾಮೀ ನೂತನ ರಥ ನಿರ್ಮಾಣ ಮಾಡಿಸಿ ಹಂಥಾದ್ದು. ತಾವು ತಿಳುಕೊಂಡು ಯಿದ್ದೀರಷ್ಟೆ ರಥದ ಕೆಲಸ ಗತಿ ಸಮಗ್ರ ಆದ ಕಾರಣ ರಥ ಪ್ರತಿಷ್ಠೆಯನ್ನು ಮಾಡಿ ಈ ಕಾಲ ಯಿದೇ ರಥದಿಂದಲೇ ರಥೋತ್ಸವ ಮಾಡಬೇಕೆಂಬ ಹಾಗೆ ನಿಶ್ಚಯಿಸಿ ಯಿಧೀತ್ತೇ. ತಾವು ಸಂಸ್ಥಾನದ ಶ್ರೇಯೋ ಲಾಭವೇ ಮುಖ್ಯವಾಗಿ ವ್ಯವಹರಿಸುವದರಿಂದ, ಈ ಮಹೋ ತ್ಸವಕ್ಕೆ ತಮ್ಮಆಗಮನವಾಗಬೇಕೆಂಬ ಅಪೇಕ್ಷೆಯಿದ್ದೀತೆ, ಯೇತದ್ವಿ ವರಗಳನ್ನುನಮ್ಮಯೋಗಾನಂದ ಸೋಮಯಾಜಿ ಗಳು ಬರದ್ದರಿಂದ ಸ್ವಾಂತಕ್ಕೆ ತಂದು ತಾವು ಅಗತ್ಯ ಚೈತ್ರ ಶು ೧ಕ್ಕೆ ಹಂಪಿಗೆ ಮುಟ್ಟುವಂತೆ ಸಾಗಿ ಬಾಹ ರೀತಿ ಮಾಡಿಸಬೇಕು.

ಮೊಹರು

---

೧೨೯. ಸನ್ನದು.—ಲೇಖನ, ಶುಭಕೃತ್, ಶಾ.ಶ. ೧೭೦೫, ಕ್ರಿ.ಶ. 1783.

ಶ್ರೀ

ಶ್ರೀ ಮತ್ಪರಮಹಂಸ ಪರಿವ್ರಾಜಕಾ ಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಶ್ಚಕ್ರ ವರ್ತಿ ಅನಾದ್ಯ ವಿಛಿನ್ನ ಗುರು ಪರಂಪರಾ ಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮ ಸಾರ ಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕ ಸಿಂಹಾಸನ ಪ್ರತಿಷ್ಠಾ ಪನಾಚಾರ್ಯ ಶ್ರೀ ಮದ್ರಾಜಾಧಿರಾಜ ಗುರುಭೂಮಂಡಲಾ ಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರ ವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳ್ವೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರ ಭಾರತೀ ಸ್ವಾಮಿಗಳವರಿಗೆ—

ಶ್ರೀಮನ್ ಮಹಾನಾಯಕಾ ಚಾರ್ಯರಾದ ಬಾಗಳಿ ಸೋಮಶೇಖರ ನಾಯಕರ ಬಸಪ್ಪ ನಾಯಕರು ಬರಸಿ ಕೊಟ್ಟ ಸರ್ವಮಾನ್ಯದ ಪಟ್ಟದ ಕ್ರಮವೆಂತೆಂದರೆ. ಅದಾಗಿ ತಾವು ಈ ಸಂಸ್ಥಾನದ ಶ್ರೇಯೋಭಿವೃದ್ಧಿಗಳಾಗ ಬೇಕೆಂದು ಶ್ರೀ॥ ದೇವರ ಪ್ರಾರ್ಥನೆ ಪೂರ್ವಾರಭ್ಯ ಮಾಡುತ್ತಾ ಯೀ ಧೀರಾದ ಕಾರಣ ಶ್ರೀ॥ ದೇವರಿಗೆ ದೀಪಾರಾಧನೆ ಬಗ್ಗೆ ಹೊಸೂರ ಯಿಂದ ವರ್ಷ ವಂದಕ್ಕೆ ನಾಣ್ಯ. ಗ. ೧೦೦ ನೂರು ವರಾದ

ಪ್ರಕಾರ ಕಾಲ ಕಾಲಕ್ಕೂ ಶಿವಾರ್ಪಿತವಾಗಿ ಕೊಟ್ಟು ಯಿದ್ದೀತೆಂದು ಬರಸಿ ಕೊಟ್ಟ ಸರ್ವಮಾನ್ಯದ ಪಟ್ಟೇವು ॥ ಸ್ವದತ್ತಾ ದ್ವಿಗುಣಂ ಪುಣ್ಯಂ। ಪರದತ್ತಾನು ಪಾಲನಂ। ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥೧॥




೧೩೦. ಲೇಖನ.—ಶುಭಕೃತ್, ಶಾ. ಶ. ೧೭೦೫, ಕ್ರಿ. ಶ. 1783.

ಶುಭಕೃತು ಸಂವತ್ಸರದ ಪುಷ್ಯ ಶ ೧೫ ಯಲ್ಲೂ ಬಾಗಳಿ ಸೋಮಶೇಖರನಾಯಕರ ಬಸವಪ್ಪನಾಯಕ ಅಯ್ಯನವರು, ಹೊಸೂರ ಹ । ವಾಸಪ್ಪ ಹನುಮಣ್ಣ ನೇಮಣ್ಣಗೆ ಚೀಟಿ ಈಪದಡಿ ಹಣದ ಇಂದ ಶೃಂಗೇರಿ ಶಂಕರಭಾರತೀ ಸ್ವಾಮಿಗಳಿಗೆ ವರುಷ ವಂದಕ್ಕೆ ನಾಣ್ಯ ನೂರು ವರಹಾದ ೧೦೦ ಪ್ರಕಾರ ಕಾಲಕಾಲಕ್ಕೂ ಕೊಡುವುದು ಉತ್ತಾರ ಕೊಟ್ಟೀತು ಶ್ರೀಬಸವ

## F. ಕನಕಗಿರಿ ಪಾಳೆಯಗಾರರು

೧೩೧. ದಾನಶಾಸನ.—ರಾಕ್ಷಸ, ವೈಶಾಖ ಶು. ೧೫, ಶಾ. ಶ. ೧೬೫೭, ಕ್ರಿ. ಶ. 1735.

ಶುಭಮಸ್ತು । ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರ ಚಾರವೇ
ತ್ರೈಲೋಕ್ಯನಗರಾರಂಭ । ಮೂಲಸ್ತಂಭಾಯ ಶಂಭವೇ ॥
ಹರೇರ್ಲೀಲಾವರಾಹಸ್ಯಾ । ದಂಷ್ಟ್ರಾದಂಡಸ್ಸಪಾತುನಃ । ಹೇಮಾ
ದ್ರಿಶಿಖರಾಯತ್ರ ದಾತ್ರೀಛತ್ರಶ್ರೀಯಂದಧೌ ॥

ಸ್ವಸ್ತಿಶ್ರೀಜಯಾಭ್ಯುದಯ ಶಾಲೀವಾಹನಶಕ ವರ್ಷ ೧೬೫೭ ನೆಯ ರಾಕ್ಷಸನಾಮಸಂ। ವೈಶಾಖ ಶು ೧೫ ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ । ಪದವಾಕ್ಯ ಪ್ರಮಾಣ ಪಾರಾವಾರಪಾರೀಣಯ ಮನಿಯಮಾಸನಪ್ರಾಣಾ ಯಾಮ ಪ್ರತ್ಯಾಹಾರ ಧ್ಯಾನ ಧಾರಣಾಸಮಾಧ್ಯಷ್ಟಾಂಗ ಯೋಗನಿರತರಾದ ಶೃಂಗೇರಿ ಶ್ರೀ ನೃಸಿಂಹಭಾರತೀಸ್ವಾಮಿ ಕರಕಮಲಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತೀಸ್ವಾಮಿಗಳೈಯ್ಯನವರ ಮಠ ಧರ್ಮಕ್ಕೆ

ದೇವರವರ ಶಿಷ್ಯರೂ ಶ್ರೀಮ್ರ್ ಮಹಾನಾಯಕಾಚಾರ್ಯ ನಾಯಕ ಶಿರೋಮಣಿಗಳಾದ ಕನಕಗಿರಿ ಲಕ್ಷನಾಗತಿ ರಾಜಾರಾಮ ಜಯಶಿಂಗ ಮುಮ್ಮಡಿ ಉಡಿಶಿನಾಯಕರ ಕೊಮಾರ, ಕನಕಪ್ಪ ಉಡಶಿನಾಯಕರು ಬರಸಿಕೊಟ್ಟ ಅಗ್ರಹಾರ ಗ್ರಾಮದ ದಾನಪಟ್ಟೀವು ಅದಾಗಿ ದೇವರವರು ದಿಗ್ವಿಜಯ ಮಾಡಿ ನಮ್ಮಮೇಲೆ ದಯಚಿತ್ತವಿಟ್ಟುಬಂದು ಶ್ರೀ . . . ಸ್ವಾಮಿ ದರ್ಶನವ ಮಾಡಿಸಿ. ನಮ್ಮ ಪುನೀತರ ಮಾಡಿದಲ್ಲಿ ನಮ್ಮ ಮಾತಾಪಿತೃಗಳಿಗೆ ಪುಣ್ಯ ಲೋಕ ಪ್ರಾಪ್ತಿಯಾಗಬೇಕೆಂದು. ಈ ವೈಶಾಖ ಶು ೧೫ ಪುಣ್ಯಕಾಲದಲ್ಲಿ ನಮ್ಮ ನಗರಕ್ಕೆ ಸಲ್ಲುವ ಗ್ರಾಮವ ೧ ನಮ್ಮ ಶೀಮೆವಳ ಗಣ ತೊಂಡೇಹಾಳ ಗ್ರಾಮವನ್ನು ನಿಮ್ಮಿಗೆ ಉಮ್ಮಳಿ ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ಕೃಷ್ಣಾರ್ಪಣವಾಗಿ ಕೊಟ್ಟುಯಿಥೇವೆ ಈ ಗ್ರಾಮುಕ್ಕೆ ಸಲ್ಲುವ ಚತುರ್ದಿಕವಳಗಣ। ನಿಧಿನಿಕ್ಷೇಪ ಜಲಪಾಷಾಣ, ಅಕ್ಷಿಣಿ ಆಗಮಿ

ಸಿದ್ಧ ಸಾಧ್ಯಗಳೆಂಬ ಅಷ್ಟಭೋಗ ತೇಜ. ಸಾಮ್ಯಗಳನ್ನು ನಿಮ್ಮ ಶಿಷ್ಯ ಪಾರಂಪರ್ಯವಾಗಿ ನಮ್ಮ ಪುತ್ರಪೌತ್ರಪಾರಂಪರ್ಯವಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸಿಕೊಂಡು ಬಹುದೆಂದು ಬರಸಿಕೊಟ್ಟ ಗ್ರಾಮದಾನಪಟ್ಟೀ ಉ ।

## ಶ್ಲೋಕಗಳು

॥ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂಯಮಶ್ಚ ಅಹಶ್ಚರಾತ್ರಿಶ್ಚ ಉಭೇಚಸಂಧ್ಯೆ ಧರ್ಮಶ್ಚಜಾನಾತಿನರಶ್ಚ ವೃತ್ರಂ। ಸ್ವದತ್ತಾ ದ್ವಿಗುಣಂ ಪುಣ್ಯಂ। ಪರದತ್ತಾನು ಪಾಲನಂ ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂಭವೇತ್ ॥೨॥ ಯಿಂದ್ರ ಪ್ರಭೃತಿ ಚಾಂಡಾಲಿ । ಕಿಮಿದಂಪಚ್ಯತೇತ್ವಯಾ । ಶ್ವಮಾಂಸಂಸುರ ಯಾಯುಕ್ತಂ। ಕರ್ಪಾನಜಿತಾಗ್ನಿನಾ । ಯೋಬ್ರಾಹ್ಮಣ ವೃತ್ತಿಶ್ಚಾ ನಾಶಯಂತಿ ಹರಂತಿಚ । ತೇಷಾಂಪಾದರಜೋಜಿತ್ತ ಕರ್ಮಣಾ ಪಿಹಿತಂಮಯಾ ॥೨॥ ಉಪಾಯನಾರ್ಥ ಶುಕ್ಲಾರ್ಥಂ ಗ್ರಾಮರಕ್ಷಾರ್ಥಮೇವಯಿ। ಗೃಹ್ಯಗ್ರಾಹರೆ ಸನ್ಧಂತ್ತೆ ಮಾತ್ರಗಾಮಿನಾ ॥೪॥ ಮಾತ್ಮಜಾಪರ ಮಹೀಪತಿ ವಂಶಜಾವಾ ಅನ್ಯನೃಪಾಸತತಮು ಜ್ವಲ ಧರ್ಮಚಿತ್ತಾ ಮಧರ್ಮ ಮ್ಮೈಮನಪಂ ಎರಪಾಲಯಂತಾಕತ್ರಾದ ಕದ್ವ ಮಹಂಸಿರಸಾಶಹಾಮಿ ॥೫॥ ವಾಗ್ದತ್ತಂಮ ನೋದತ್ತಂ ಧಾರಾದತ್ತಂದಿನೇ ದಿನೇ ।ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂಜಾಯತೇಕ್ರಿಮಿಃ ॥೬॥ ಸ್ವದತ್ತಾ ಪುತ್ರಿ ಕಾಧಾತ್ರಿ ಪಿತೃದತ್ತಾಸಹೋದರೀ ಪರದತ್ತಾ ಸ್ವಮಾತಾಚದತ್ತಾಂ ಭೂಮಿ ಪರಿತ್ಯಜೇತ್॥೭॥ ಯೇತ್ಯೈವಭಗಿನೀಲೋಕೇ ಸರ್ವೇಷಾಮೇವ ಭೂಭೂಜಾಂ । ನಭೋಜ್ಯನಕರ ಗ್ರಾಹ್ಯ ವಿಪ್ರದತ್ತಾವಸುಂಧರಾ ॥೮॥

---

೧೩೨. ದಾನಪತ್ರ.— ಸರ್ವಧಾರಿ, ಮಾಘ. ಶು. ೫, ಶಾ. ಶ. ೧೬೯೦, ಕ್ರಿ. ಶ. 1769.

ಶ್ರೀ

ಶುಭಮಸ್ತು ॥ ನಮಸ್ತುಂಗಶಿರಶ್ಚುಂಬಿ । ಚಂದ್ರ ಚಾಮರ ಚಾರವೆ ತ್ರೈಲೋಕ್ಯನಗರಾರಂಭ । ಮೂಲಸ್ತಂಭಾಯಶಂಭವೇ ॥೧॥ ಸ್ವಸ್ತಿ ಶ್ರೀಜಯಾಭ್ಯುದಯ, ಶಾಲೀವಾಹನ ಶಕವರ್ಷಂಗಳು ೧೬೯೦ನೆಯ ಸರ್ವಧಾರಿಸಂ।ರದ ಮಾಘ ಶು ೫ ಲ್ಲೂ

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ। ಸಮಾಧ್ಯಷ್ಟಾಂಗ ಯೋಗನಿರತರಾದ ಶೃಂಗೇರಿ ಶ್ರೀವಿದ್ಯಾಶಂಕರ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ಶಂಕರ ಭಾರತೀಸ್ವಾಮಿಗಳ್ಳೈಯ್ಯನವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ನರಸಿಂಹ ಭಾರತೀಸ್ವಾಮಿಗಳ್ಳೈಯ್ಯನವರ ಮಠದ ಧರ್ಮಕ್ಕೆ

ದೇವರ ಶಿಷ್ಯನು. ಶ್ರೀಮ್ಮ ಮಹಾನಾಯಕಾ ಚಾರ್ಯ ನಾಯಕ ಶಿರೋಮಣಿ, ಕನಕಗಿರಿ ಲಕ್ಷ್ಮಪ ನಾಗತ್ತಿ ರಾಜರಾಮ ಜಯಸಿಂಗ ಮುಮ್ಮಡಿ ಕನಕಪ ವುಡಿಸಿ. ನಾಯಕರ ಕುಮಾರ, ರಂಗನಾಯಕನು ಬರಸಿ ಕೊಟ್ಟ ಗ್ರಾಮದ ದಾನಪತ್ರ ಕ್ರಮವೆಂತ್ತೆಂದರೆ । ಪೂರ್ವದಲ್ಲಿ ರಾಜೇ ಶ್ರೀ ನಮ್ಮ ಹಿರೇ ಕರ್ತರು ಶ್ರೀ ಶೇವೆಗೆಮು । ತೊಂಡೇಹಾಳು ಗ್ರಾಮವನ್ನು ಸಮರ್ಪಣೆ ಮಾಡಿಯಿಧೇವೆಂಬ ಹಾಗೆ ದಾನ ಪತ್ರ ಬರಕೊಟ್ಟಿದಲ್ಲಿ. ಅದು ಅನುಭವಯಿಲ್ಲದೆ ಇದ್ದ ಕಾರಣ ಸಾಂಪ್ರತಾಯೀಸಂ । ರದಲ್ಲಿ ದೇವರವರು. ನಮ್ಮ ಸ್ಥಳಕ್ಕೆ ಅನುಗ್ರಹಮಾಡಿ ಬಂದು ನಮ್ಮನುಮಡಿತ್ತನೆ ಮಾಡಿದಲ್ಲಿ ತೊಂಡೇಹಾಳು ಗ್ರಾಮವಾದರೂ ನಉಲಶೀಮೆ, ಸರದೆ ಶಾಯಿಕೆ ಉಮ್ಮಳಿ ಕೊಟ್ಟ ಕಾರಣ ಅದರ ಬದಲಗೆ ತ॥ ತಲೆಕಾನಹಾಳು ನಮ್ಮತ್ತಿನಾಗೆಮು । ಜೂಲು ದೊಡ್ಡಿ ಗ್ರಾಮವನ್ನು ಧಾರಾದತ್ತಾ ಕೃಷ್ಣಾರ್ಪಣವಾಗಿ ಕೊಟ್ಟುಯಿಧೇನೆ. ಈ ಗ್ರಾಮಕ್ಕೆ ಸಲ್ಲುವ ಸುವರ್ಣಾದಾಯ ದವಸ ಆದಾಯ ನೀರಾರಂಭ, ಕಾಡಾರಂಭ, ಜಲಪಾಷಾಣ ನಿದಿ ನಿಕ್ಷೇಪ ಆಗಮಿ ಅಕ್ಷಿಣಿ ಸಿದ್ಧ ಸಾಧ್ಯಗಳೆಂಬ ಅಷ್ಟಭೋಗ ತೇಜೋಪಾರ್ಜನೆಯನ್ನು ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸುವುದಕ್ಕೆ ನಾನು ನನ್ನ ಪುತ್ರ ಪರಂಪರಾ ನಡಸುತ್ತೇವೆಂದು. ಬರಕೊಟ್ಟ ಮಾ॥ ಜೂಲುದೊಡ್ಡಿ ಗ್ರಾಮದ ಅಗ್ರಹಾರದ ದಾನಪತ್ರ

ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ । ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥ ದಾನಪಾಲನ ಯೋರ್ಮಧ್ಯೇ ದಾನಾಚ್ರೇ ಯೋನುಪಾಲನಂ । ದಾನಾತ್ ಸ್ವರ್ಗಮವಾಪ್ನೋತೀಪಾಲನಾದಚ್ಯುತಂಪದಂ॥

೧೩೩. ದಾನಶಾಸನ.—ಸರ್ವಧಾರಿ, ಮಾಘ ಶು. ೫, ಶಾ. ಶ. ೧೬೯೦, ಕ್ರಿ. ಶ. 1769.

ಶುಭಮಸ್ತು । ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ॥
ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥೧॥

ಸ್ವಸ್ತಿಶ್ರೀಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೬೯೦ನೆಯ ಸರ್ವಧಾರಿ ಸಂವತ್ಸರದ ಮಾಘ ಶು. ೫ ಯಲ್ಲಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಷ್ಟಾಂಗಯೋಗನಿರತರಾದ ಶೃಂಗೇರಿ ಶ್ರೀ ವಿದ್ಯಾಶಂಕರ ದೇವರ ದಿವ್ಯ ಶ್ರೀ ಪಾದಪದ್ಮಾರಾಧಕರಾದ ಶೃಂಗೇರಿ ಶಂಕರ ಭಾರತೀಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ನರಸಿಂಹ ಭಾರತೀಸ್ವಾಮಿಗಳವರ ಮಠದ ಧರ್ಮಕ್ಕೆ

ದೇವರವರಶಿಷ್ಯರು ಶ್ರೀಮನ್ ಮಹಾನಾಯಕಾಚಾರ್ಯ ನಾಯಕಶಿರೋಮಣಿ ಕನಕಗಿರಿ ಲಕ್ಷ್ಮನಾಗತಿ ರಾಜರಾಮಜಯಸಿಂಗ ಮುಮ್ಮಡಿ ಕನಕಪ್ಪವುಡಿಸಿನಾಯಕರ ಕುಮಾರ ರಂಗಪ್ಪನಾಯಕರು ಬರಸಿಕೊಟ್ಟ ಗ್ರಾಮದ ದಾನಪತ್ರದ ಕ್ರಮವೆಂತೆಂದರೆ ಪೂರ್ವದಲ್ಲಿ ರಾ॥ ನಮ್ಮ ಹಿರೇಕರ್ತರು ಶ್ರೀ ಸೇವೆಗೆ ಮ॥ತೊಂಡೇಹಾಳ ಗ್ರಾಮವನ್ನು ಸಮರ್ಪಣೆಮಾಡಿದೇವೆಂಬಹಾಗೆ, ದಾನಪತ್ರ ಬರಕೊಟ್ಟಲ್ಲಿ ಅದು ಅನುಭವಯಿಲ್ಲದೆ ಇದ್ದ ಕಾರಣ ಸಾಂಪ್ರತ. ಈ॥ ಸಂ॥ ದಲ್ಲಿ ದೇವರವರು ನಮ್ಮ ಸ್ಥಳಕ್ಕೆ ಅನುಗ್ರಹಮಾಡಿ ಬಂದು ನಮ್ಮನ್ನು ಪುನೀತರ ಮಾಡಿದಲ್ಲಿ ತೊಂಡೇಹಾಳು ಗ್ರಾಮವಾದರೂ. ನವುಲೆ ಶೀಮೆ ಸರಡೇಶಾಯಿಕೆ ಉಮ್ಮಳಿ ಕೊಟ್ಟಕಾರಣ ಅದರ ಬದಲಿಗೆ ತ॥ ತಲಕಾನಹಾಳಸಮ್ಮತ್ತಿನವಳಗೆ ಮ॥ ಸೂಕುಂಟಿ ಗ್ರಾಮವನ್ನು ಧಾರಾದತ್ತ ಕೃಷ್ಣಾರ್ಪಣವಾಗಿ ಕೊಟ್ಟಿದ್ದೇವೆ. ಈ ಗ್ರಾಮಕ್ಕೆ ಸಲ್ಲುವ ಸುವರ್ಣಾದಾಯ. ದವಸಾದಾಯ ನೀರಾರಂಭ, ಕಾಡಾರಂಭ, ನಿಧಿ ನಿಕ್ಷೇಪ ಜಲಪಾಷಾಣ ಆಗಮಿ, ಅಕ್ಷಿಣಿ, ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜೋಪಾರ್ಜನೆಯ ನಾಡು ಆ ಚಂದ್ರರ್ಕಸ್ಥಾಯಿಗಳಾಗಿ ಅನುಭವಿಸುವುದಕ್ಕೆ ನಾನು ನಮ್ಮ ಪುತ್ರ ಪೌತ್ರ ಪಾರಂಪರ್ಯ ನಡೆಸುತ್ತಿದ್ದೇವೆಯೆಂದು ಬರಪಿಕೊಟ್ಟ ಮ॥ ಸೂಕುಂಟಿ ಗ್ರಾಮದ ಅಗ್ರಹಾರದ ದಾನಪತ್ರವು.




ಸ್ವದತ್ತಾದ್ವಿಗುಣಂ ಪುಣ್ಯಂ। ಪರದತ್ತಾನುಪಾಲನಂ। ಪರದತ್ತಾಪಹಾರೇಣ। ಸ್ವದತ್ತಂನಿಷ್ಪಲಂ ಭವೇತ್ ॥೧॥ ದಾನಪಾಲನಯೋರ್ಮಧ್ಯೆ ದಾನಾತ್ ಛ್ರೇಯೋನುಪಾಲನಂ। ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ॥೨॥

---

## G. ಬುಕ್ಕಾಪಟ್ಟಣದ ಪಾಳೆಯಗಾರರು

೧೩೪. ದಾನಶಾಸನ.—ಪ್ಲವಂಗ, ಕಾರ್ತೀಕ ಶು. ೧೫, ಶಾ. ಶ. ೧೫೮೯, ಕ್ರಿ. ಶ. 1667.

ಶಿದ್ಧರಾಮೇಶ್ವರ
ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರ ಚಾರವೇ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿ ಶ್ರೀ ಜಯಾಭ್ಯುದಯ ನೃಪ ಶಾಲೀವಾಹನ ಶಕವರುಷ ೧೫೮೯ನೆಯ ಪ್ಲವಂಗ ಸಂ॥। ರದ ಕಾರ್ತೀಕ ಶುದ್ಧ ೧೫ರಲ್ಲೂ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ। ಪದವಾಕ್ಯ ಪ್ರಮಾಣ ಪರಾವಾರ

मनषूर फैज गंजूर बनामे आमीलानी सिरस्तेदारानी हालव इस्तकपालता ॥ शिवमोग्गे सरकार दारुल्ले रियासत मैइसूरसुदूर मयाबाद दरिविल्ला कुडली श्रृंगेरी नरसिंह भारती स्वामीयाचे मठास साबक पासून सरकारात हून तालूक एवज पै ॥ सालियाना हैदरी ५०० पांचशहेहोन्न प्रो वर्षाशन चालवून येत आहे की आज श्री स्वामीयानी मईशूरास आगमन केले असता सदरी एवज कडून नवरात्रा उछव इत्यादि शेवेस खर्च पुरवत नही म्हणोन हजूर संगीत लावरुन निरोपिले जाणिजे साबक पासेन चालणे च सदरी पाच शहेहोन्न सिवये दर नवरात्रा उछव बदल जास्ती हैदरी पाच शहेहोन्न मोकरर करून दिल्हे आहेतरी साबक व हाल जास्ती सुधा सालियाना हैदरी १००० येक हजार होन्न प्रो. ता॥ मजकूर एवज पै। नगद पावत करून देत जा णे मणिजे सर्वदा पाठप्रवचनादि सद्यासङ्ग करून घेवून सरकारा च श्रेयःप्रार्थन करून सुरक्षित तबतील हाल जास्त करून दिल्हेले सदर पाच शहेहोन्न आंगीरस संवछर आश्विन शु २ प्रतिपदा लागायेत पामील करून सुधा महीने काल नगद पावत करून देत आणे दर साल ताजा सनदे ची उजूर न करिता सरास पावत करून देणे या सनदेची नकलता ॥ मार सिरस्तेदार चे दप्तरास असल सनद श्री मठास वापस देणे तारीख २७ माहे सपटंबर सन्न १८१२ इसवी आंगीरस संवत्सर भाद्रपद वदी १० खत रामाजी पंत मुनशी हुजूर। ಶ್ರೀಕೃಷ್ಣ.

ಮನಶೂರ ಫೈಜ ಗಂಜೂರ ಬನಾಮ ಆಮಿಾಲಾನಿ ಶಿರಸ್ತೇದಾರಾನೀ ಹಾಲ ಇಸ್ತಕಪಾಲ ತಾಲೋಕೇ ಶಿವಮೊಗ್ಗೇ ಸರಕಾರ ದಾರೂಲ್ಲೇರಿಯಾನ ಮೈಸೂರ್ ಷರಫಸುದೂರ ಮೇಯಾಬಾದ ದರಿವಿಲ್ಲಾ-- ಕೂಡ್ಲಿ ಶೃಂಗೇರೀ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ಮಠಕ್ಕೆ ಪ್ರಾಕಾರಾಭ್ಯದಿಂದಾ ತಾಲ್ಲೂಕ್ ಮಜಕೂರ್ ಪೈಕಿ ಸರಕಾರದಲ್ಲಿ ಹೈದ್ರಿ ಗಾ. ೫೦೦-೦-೦ ಐನೂರು ವರಹಾ ವರ್ಷಾಶನ ನಡೆದು ಬರುತ್ತಾ ಬರುವುದು ಸರಿಯಷ್ಟೆ. ಈಗ ಶ್ರೀಯವರುಗಳು ಮೈಸೂರ್‌ಗೆ ಚಿತ್ತೈಶಿ ಈ ವರ್ಷಾಶನದಿಂದಾ ನವರಾತ್ರೆ ಉತ್ಸವ ಮುಂತಾದ ಬಗ್ಗೆ ಸಾಕಾಗುವುದಿಲ್ಲವೆಂಬುದಾಗಿ ಹೇಳದ ಕಾರಣ ಅಪ್ಪಣೆ ಕೊಡಿಶಿ ಇದ್ದೀತು ಸಾಬಕು ನಡೆದು ಬರುವಂತಾ ಸದ್ರೀ ಹೈದರೀ ಐನೂರು ವರಹಾ ಹೊರ್ತು ನವರಾತ್ರಿ ಉತ್ಸದದ ಬಗ್ಯೆ ಹಾಲಿ ಜಾಸ್ತಿ ಹೈದ್ರಿಗಾ ೫೦೦ ಐನೂರು ವರಹಾ ವನ್ನು ಅಪ್ಪಣೆ ಕೊಡಿಶಿದ್ದೀತಾದ ಕಾರಣ ಸಾದಪ್ಪ ಹಾಲೀ ಜಾಸ್ತಿ ಸಹಾ ಸಾಲಿಯಾನ ಹೈದ್ರಿ ೧೦೦೦ ಒಂದು ಸಾವಿರ ವರಹಾದ ಮೇರೆಗೆ ತಾಲ್ಲೂಕ್ ಮಜ್ಕೂರ್‌ನಿಂದ ನಗದು ಕೊಡುತ್ತಾ ಬರುವುದು. ಇವರು ದೇವತಾಸೇವೆ, ನವರಾತ್ರೆ ಉತ್ಸವ ಮುಂತಾಗಿ ಪಾಠ ಪ್ರವಚನಾದಿ ಸತ್ಕಾಲಕ್ಷೇಪವನ್ನು ಮಾಡಿಕೊಂಡು ಸರಕಾರದ ಶ್ರೇಯಃ ಪ್ರಾರ್ಥನೆ ಮಾಡಿಕೊಂಡಿರುತ್ತಾ ಸುರಕ್ಷಿತಾ ಇದ್ದುಕೊಂಡಿದ್ದಾರಾಗಿ, ಸದ್ರಿ ಜಾಸ್ತಿ ಅಪ್ಪಣೆ ಕೊಡಿಶಿರುವಂಥಾ ಹೈದ್ರಿ ೫೦೦ ವರಹಾವನ್ನೂ, ಅಂಗೀರಸ॥ ಸ॥ರದ ಅಶ್ವಯುಜ ಶು॥ ೧ರ ಲಾಗಾಯ್ತು ಆರಭ್ಯ ಸಾಬಕು ಹಾಲೀ ಜಾಸ್ತೀ ಸಹಾ ತಿಂಗಳುಗಟ್ಟಲೆ ಲೆಖ್ಖಾಚಾರದ ಪ್ರಕಾರ .... ನಗದು ಶ್ರೀ........ಗಳವರ ಮಠಕ್ಕೆ ಪ್ರತಿ ವರುಷದಲ್ಲೂ ತಾಜಾ ಸನ್ನದಿನ ಹುಜೂರ್ ಇಡದೇ ಸರಾಗವಾಗಿ ನಡಶಿಕೊಂಡು ಬರುವುದು, ಈ ಸನ್ನದಿನ ನಕಲನ್ನು ಸರಕಾರದ ದಪ್ತರಕ್ಕೆ ಬರೆಶಿ ಅಸಲು ಸನ್ನದನ್ನು.... ಶ್ರೀ........ ಮಠಕ್ಕೆ ವಾಪ್ಸು ಕೊಡುವುದು. ಅಂ॥ಸಂ॥ರದ ಭಾದ್ರಪದ ಬ॥ ೧೦ರಲ್ಲು ಮಂಗ-ಬ. ತಾ॥ ೨೯ನೇ ಮಾಹೆ ಸೆಪ್ಟೆಂಬರು, ಸ॥ ೧೮೧೨ನೇ ಇಸ್ವಿ ಖತ್ತ ಅಶ್ವತ್ಥ ನಾರಾಯಣೈಯ್ಯ ಮುನಷಿ ಹುಜೂರ. *ಸಾಬಕು ಹಾಲಿ ಜಾಸ್ತಿ ಸಹಾ ಸಾಲಿಯಾನಾ ಹೈದರಿ ಸಾವಿರ ವರಹಾ ಕೊಡುತ್ತಾ ಬರುವದು ಶ್ರೀಕೃಷ್ಣ.

---

* ಶ್ರೀಮನ್ಮಹಾರಾಜರ ಸ್ವಹಸ್ತ ಬರಹ.

೩೮೪. ನಿರೂಪ :—ಭಾವ, ಅಶ್ವಯುಜ ಶು. ೪, ೧೭೩೬, ಕ್ರಿ. ಶ. 1814.

ಶ್ರೀ

| ಶ್ರೀ चामराज वडेर तनुज कृष्णराज वडेर |
|---|

*ಕೃಷ್ಣರಾಜವಡಯರವರು

ಭಾವಸಂವತ್ಸರದ ಅಶ್ವೀಜ ಶು. ೪ರಲ್ಲೂ ಶ್ರೀ ಮತ್ತು ॥* ॥ ಅರಮನೆ ಶೀಮೆ ಗಡಿಗಳ ಅಮಿಲ್ ಕಿಲ್ಲೇದಾರರಿಗೆ ಬರಶಿ ಕಳುಹಿಸಿದ ನಿರೂಪ ಅದಾಗಿ. ಕೂಡ್ಲಿಯಲ್ಲಿರುವ ಶೃಂಗೇರಿ ಶ್ರೀ ಸ್ವಾಮಿಗಳ ಮಠಕ್ಕೆ ಸರಕಾರದಿಂದ ಇನಾಮಾಗಿ ಗಂಗಾ ಯಂಬ ವಂದಾನೆಯನ್ನು ಕೊಟ್ಟಿರುವುದನ್ನು ಅವರ ಕಡೆಯವರು, ಕೂಡ್ಲಿಗೆ ಸಾಗಿಸಿಕೊಂಡು, ಹೋಗುವದರಿಂದಾ ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಉಳದ ಒಂದು ದಿನಕ್ಕೆ ರೂ. ೧ ಆನೆ ವಂದಕ್ಕೆ ರಾತೀಪು ಅಕ್ಕಿ ಪಕ್ಕಾಶೇರು ೫ ಐದು. ಬೆಲ್ಲಾ ಕಚ್ಚಾ ಸೇರು ಯರಡು. ಚಾರಾ ಬಿಂಡೆ ಆರು ೬ ಸಹ ಕೊಡಿಸಿ ರಾತೀಪು ಸಂದದ್ದಕ್ಕೆ ಮಾವತನ ಕಡೆಯಿಂದ ರಶೀದಿ ತೆಗೆದುಕೊಂಡು ಗಡಿಯಿಂದಾ ಗಡಿಗೆ ವಂದಾಳ ಕೊಟ್ಟು, ರವಾನೇಮಾಡುವದು ತಾರೀಖು ೧೭ನೆ ಮಾಹೆ ಅಗಟಂಬರ ಸನ್ನ ೧೮೧೪ನೆ ಇಸವಿ ಖತ್ತು ತಿಮ್ಮಪ್ಪಾಮುನಷಿ ಹುಜೂರು. ಶ್ರೀ ಕೃಷ್ಣ.

———

೩೮೫. ನಿರೂಪ :—ಭಾವ, ಅಶ್ವಯುಜ ಬ. ೨, ಶಾ. ಶ. ೧೭೩೬, ಕ್ರಿ. ಶ. 1814.

ಶ್ರೀ

| ಶ್ರೀ चामराज वडेर तनुज कृष्णराज वडेर |
|---|

*ಕೃಷ್ಣರಾಜವಡೆಯರವರು

ಭಾವಸಂವತ್ಸರದ ಅಶ್ವೀಜ ಬಹುಳ ೨ ಭೌಮವಾರದಲ್ಲೂ ಶ್ರೀ ಮತ್ತು ॥* . ॥ ಹೊನ್ನಾಳಿ ಅಮೀಲ ಅಪ್ಪೂರಾಯಗೆ ಬರಶಿಕಳುಹಿಸ್ತ ನಿರೂಪ ಅದಾಗಿ. ಶೃಂಗೇರಿ ಕೂಡಲೀ ಮಠಕ್ಕೆ ತಾಲ್ಲೂಕಪೈಕಿ ಗೋಪಗೊಂಡನ ಹಳ್ಳಿ ಗ್ರಾಮ. ಸರಕಾರಕ್ಕೆ ಗ. ೨೯. ವರಹಾ ತೆಗೆದುಕೊಂಡು ನಡೆಯುತ್ತಾ ಇದ್ದದ್ದಕ್ಕೆ ಹಾಲಿ ತಿಮ್ಮಪ್ಪನು ಏಳೆಂಟು ವರಹ ಜಾಸ್ತಿಮಾಡಿರುವುದು ಮಾಫ್ ಆಗಬೇಕೆಂದು ಶೃಂಗೇರಿ ಮಠ ಮುದ್ರೆ ಲಿಂಗಾಭಟ್ಟರು, ಹಜೂರು ಅರಿಕೆ ಮಾಡಿದ ಕಾರಣ, ಅಪ್ಪಣೇಕೊಟ್ಟು ಇದ್ದೀತು. ಪ್ರಾಕಾರಭ್ಯಾ ಕೊಡುತಾಇದ್ದ ಮೇರೆಗೆ ಇಪ್ಪತ್ತು ವಂಭತ್ತುವರಹ ತೆಗೆದುಕೊಳ್ಳುತ್ತಾ ಸರಾಗದಲ್ಲಿ ನಡಸುವದು. ತಾರೀಖು. 20ನೆ ಮಾಹೇ ಅಗಟೋಬರ ಸನ್ ೧೮೧೪ನೇ ಇಸವಿ ಖತ್ತು ಪ್ರಸನ್ನೈಯ್ಯ ಮುನಷಿ ಹುಜೂರು.

ಶ್ರೀ ಕೃಷ್ಣ.

———

೩೮೭. ನಿರೂಪ :—ಭಾವ, ಅಶ್ವಯುಜ ಬ. ೨, ಶಾ. ಶ. ೧೭೩೬, ಕ್ರಿ. ಶ. 1814.

ಶ್ರೀ

ಶ್ರೀ ಚಾಮರಾಜ ವಡೇರ
ತನುಜ ಕೃಷ್ಣರಾಜ ವಡೇರ

*ಕೃಷ್ಣರಾಜವಡೆಯರವರು

ಭಾವ ಸಂವತ್ಸರದ ಆಶ್ವೀಜ ಬ ॥ ೨ ಯು ಭಾನುವಾರದಲ್ಲೂ ಶ್ರೀ ಮತ್ತು ॥* ॥ ಶಿವಮೊಗ್ಗೆ ಅಮಿಲ್ ಕೃಷ್ಣರಾಯಗೆ. ಬರಶಿಕಳುಹಿಶಿದ ನಿರೂಪ ಅದಾಗಿ. ಶ್ರಿಂಗೇರಿ ಕೂಡ್ಲಿಮಠಕ್ಕೆ ತಾಲ್ಲೂಕು ಮಜಕೂರು ಶೆಟ್ಟೀ ಹಳ್ಳೀಗ್ರಾಮ ಸರಕಾರಕ್ಕೆ ಗ ೩೭ ॥ ೧|೦ ತೆಗೆದುಕೊಂಡು ನಡೆಯುತ್ತಾ ಇದ್ದದ್ದಕ್ಕೆ ಹಾಲಿ ಆರು ವರಹಾ ಜಾಸ್ತೀ ಆಗಿ ಇರುವದು ಮಾಫು ಆಗಬೇಕೆಂದು ಶೃಂಗೇರೀ ಮಠದ ಮುದ್ರೆ ಲಿಂಗಾಭಟ್ಟರು ಹುಜೂರಲ್ಲಿ ಅರಿಕೇಮಾಡಿದ ಕಾರಣ ಕಟಲೇಮಾಡಿಶಿ ಇದ್ದಿತು. ಪ್ರಾಕಾರಭ್ಯ ಕೊಡುತ್ತಾ ಇದ್ದ ಮೇರಿಗೆ. ಮೂವ್ವತ್ತೇಳು ವರಹಾವು, ಆರು ಹಣ ಹಾಗೆ ತೆಗೆದುಕೊಳ್ಳುತ್ತಾ ಸರಾಗದಲ್ಲಿ ನಡೆಸುವದು. ತಾರೀಖು ೩೦ನೆ ಮಾಹೆ ಅಗಟಂಬರ ಸನ್ನ ೧೮೧೪ನೆ ಇಸವಿ ಖತ್ತ ಪ್ರಸನ್ನಯ್ಯ ಮುನಶಿ ಹಜೂರ. ಶ್ರೀ ಕೃಷ್ಣ.

———

೩೮೭. ನಿರೂಪ :—ಭಾವ, ಅಶ್ವಯುಜ ಬ. ೨, ಶಾ. ಶ. ೧೭೩೬, ಕ್ರಿ. ಶ. 1814.

ಶ್ರೀ

ಶ್ರೀ ಚಾಮರಾಜ ವಡೇರ
ತನುಜ ಕೃಷ್ಣರಾಜ ವಡೇರ

*ಕೃಷ್ಣರಾಜವಡೆಯರವರು

ಭಾವಸಂವತ್ಸರದ ಆಶ್ವೀಜ ಬಹುಳ ೨ ಭಾನುವಾರದಲ್ಲು ಶ್ರೀ ಮತ್ತು ॥* ॥ ಅರಮನೆ ಶೀಮೆಗಡಿಗಳ ಅಮೀಲ್ ಕಿಲ್ಲೇದಾರರಿಗೆ ಬರಶಿಕಳುಹಿಸ್ತನಿರೂಪ ಅದಾಗಿ. ಶೃಂಗೇರಿ ಕೂಡ್ಲಿಮಠದ ಶ್ರೀ ಸ್ವಾಮಿಗಳವರು ಉತ್ತರದೇಶದ ಸಂಚಾರಾರ್ಥವಾಗಿ ಹೋಗುವುದರಿಂದ ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಮರ್ಯಾದೆಯಿಂದ ಕರತಂದು, ಇಳಿಸಿ ಈ ಮಠದಲ್ಲಿ ಸಂಗಡ ಬಂದಿರುವ ಬ್ರಾಹ್ಮಣರ ಸಂತರ್ಪಣೆ, ಸ್ವಾಮಿಗಳವರ ಭಿಕ್ಷದ ಬಗ್ಗೆ ಸಹಾ, ಸರಕಾರದಇಂದಾ ಐನೂರು ಜನದ ಸೋಪಸ್ಕಾರ ಕೊಡಿಸಿ ಭಿಕ್ಷಾಮಾಡಿಸುವುದು. ಸಂಗಡ ಬಂದಿರುವ ಆನೆ ಕುದುರೆ ವಂಟೆ ಮುಂತಾದ ಯಲ್ಲಕ್ಕೆ ಬೇಕಾದಷ್ಟು ಹುಲ್ಲು ಸರಕಾರದಿಂದ ಕೊಡಿಸುವುದು. ಇವರ ಸಂಗಡ ಇರುವ ಶೂದ್ರಜನ. ನೂರಮೂವ್ವತ್ತಕ್ಕೆ ಅಕ್ಕಿ ಪಕ್ಕಾಶೇರು ನೂರಮೂವತ್ತು ೧೩೦ ಮೂರುಕಾಶಿನ ದರ ವಂದರ ಪ್ರಕಾರ ನೂರಮೂವತ್ತು, ಆನೆ ನಾಲ್ಕಕ್ಕೆ ಅಕ್ಕಿ ಪಕ್ಕಾಶೇರು ನಾಲುವತ್ತೊಂದು ೪೧ ಬೆಲ್ಲಾ ಕಚ್ಚಾಸೇರು ಹತ್ತು ೧೦ ತುಪ್ಪಾ ಕಚ್ಚಾಸೇರು ಮೂರು ೩ ಕುದುರೆ ಐವತ್ತು ವಂಟೆ ಆರಕ್ಕೆ ಸಹ ಹುರುಳಿ ಪಕ್ಕಾ ಸೇರು ನೂರತೊಂಭತ್ತೊಂಭತ್ತು ೧೯೯ ದಿನ ಒಂದಕ್ಕೆ ಕೊಟ್ಟು, ಇದರ ಕ್ರಯ ವಿವರದಪಟ್ಟಿ ಜಾರಿಗೆ ಕಳುಹಿಸು ವದು. ತಾರೀಖು ೩೦ನೆ ಮಾಹೆ ಅಗಟೋಬರ ಸ್ನ ೧೮೧೪ನೆ ಯಿಸವಿ ಖತ್ತ ಪ್ರಸನ್ನಯ್ಯ ಮುನಷಿ ಹುಜೂರ. ಶ್ರೀ ಕೃಷ್ಣ.

———

೩೮೮. ಲೇಖನ :—ಭಾವ, ಕಾರ್ತೀಕ ಶು. ೧೨, ಶಾ. ಶ. ೧೭೩೬, ಕ್ರಿ. ಶ. 1814.

ಶ್ರೀ

**ಶ್ರೀ ಚಾಮರಾಜ ವಡೇರ**
**ತನುಜ ಕೃಷ್ಣರಾಜ ವಡೇರ**

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ। ಪದವಾಕ್ಯ ಪ್ರಮಾಣಪಾರಾವಾರ ಪಾರೀಣಯಮ ನಿಯಮಾಸನಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ। ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠತಪಶ್ಚಕ್ರವರ್ತಿ। ಅನಾದ್ಯವಿಛ್ಛಿನ್ನಗುರುಪರಂಪರಾಪ್ರಾಪ್ತ ಷಡ್ದರ್ಶನಸ್ಥಾಪನಾಚಾರ್ಯ। ವ್ಯಾಖ್ಯಾನಸಿಂಹಾಸನಾಧೀಶ್ವರ। ಸಕಲ ವೇದಾರ್ಥಪ್ರಕಾಶಕ। ಸಾಂಖ್ಯತ್ರಯಪ್ರತಿಪಾಲಕ। ಸಕಲನಿಗಮಾಗಮಸಾರಹೃದಯ। ವೈದಿಕಮಾರ್ಗ। ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರಮಹಾರಾಜಧಾನೀ। ಕರ್ಣಾಟಕಸಿಂಹಾಸನ ಪ್ರತಿಷ್ಠಾಪನಾ ಚಾರ್ಯ ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ। ತುಂಗಭದ್ರಾತೀರವಾಸ। ಋಷ್ಯಶೃಂಗಪುರವ ರಾಧೀಶ್ವರಶೃಂಗೇರಿ ಶ್ರೀ ವಿದ್ಯಾಶಂಕರದೇವ ದಿವ್ಯ ಶ್ರೀಪಾದಪದ್ಮಾರಾಧಕ ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿ ನಾಂ ಕರಕಮಲ ಸಂಜಾತ ಶ್ರೀ ಶೃಂಗೇರಿ ಶ್ರೀ ನರಶಿಂಹಭಾರತೀಸ್ವಾಮಿಗಳವರ ಚರಣಸನ್ನಿಧಾನಂಗಳಿಗೆ.—

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ। ಬಿರುದಂತೆಂಬರ ಗಂಡ ಲೋಕೈಕವೀರ ಯದುಕುಲಪಯಃಪಾರಾವಾರಕಲಾನಿಧಿ ಶಂಖಚಕ್ರಾಂಕುಶಕುಠಾರಮತ್ಸ್ಯ ಶರಭಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಮೈಸೂರು ಕೃಷ್ಣರಾಜವಡೆಯರವರು ಸಾಷ್ಟಾಂಗ ಪ್ರಣಾಮಪೂರ್ವಕ ಮಾಡುವ ವಿಜ್ಞಾಪನಾ। ಭಾವಸಂವತ್ಸರದ ಕಾರ್ತೀಕ ಶುದ್ಧ ೧೨ ವರಿಗೆ ಶ್ರೀಯವರ ಅನು ಗ್ರಹದಿಂದಾ ಕ್ಷೇಮದಲ್ಲಿ ಇಧೇವೆ. ಶ್ರೀಮದೀಯ ತಪಃಸಾಮ್ರಾಜ್ಯಾತಿಶಯಗಳಿಗೆ ಅನವರತವೂ ಶ್ರೀಮುಖ ವನ್ನು ದಯಮಾಡಿಸತಕ್ಕದ್ದು. ಸಾಂಪ್ರತ! ಈ ಸಂವತ್ಸರದ ಚತುರ್ಮಾಶ್ಯಸಂಕಲ್ಪವನ್ನೂ ಕೂಡ್ಲಿ ಸ್ಥಳದಲ್ಲಿ ಮಾಡಿಸಿ ತದಂಗವ್ಯಾಸಾಕ್ಷತೆ ಶ್ರೀಮುಖವಸ್ತ್ರ ಫಲಮಂತ್ರಾಕ್ಷತೇಸಹಾ ಶಂಕರಶಾಸ್ತ್ರಿಗಳ ಸಂಗಡಾ ಅಪ್ಪಣೆಕೊಟ್ಟುಕಳುಹಿಸಿಕೊ ಟ್ಟಂಥಾದ್ದು ತೆಗೆದುಕೊಂಡು ಶಿರಸಾವಹಿಸ್ತೇವಾಗಿ ಈಗ ಶ್ರೀಯವರ ಧಾರಣಾರ್ಥವಾಗಿ ಶಹಲ್‌ಜೋಡಿ ೧ ಸಂಸ್ಥಾ ನಕ್ಕೆ ಶೋಭಿತವಾದ ಆನೆ ಸಂಚಾರದ ಬಗ್ಯೆ ರಹದಾರಿ ಸಹ ಈ ಶಾಸ್ತ್ರಿಗಳ ಸಂಗಡ ಅಪ್ಪಣೆಕೊಟ್ಟು ಕಳುಹಿಸಿ ಇರುವದ್ದರಿಂದಾ ಪರಾಂಬರಿಸುವಂತೆ ಮಾಡಿಸತಕ್ಕ ವಿವರಾಚಿತ್ತಕ್ಕೆತಾಹಾಗೆ ಮಾಡಿಸತಕ್ಕದ್ದು.

ಇತಿ ನಮಸ್ಕಾರ

———

೩೮೯. ನಿರೂಪ :—ಧಾತು, ಶ್ರಾವಣ ಬಹುಳ ೪, ಶಾ. ಶ. ೧೭೩೮, ಕ್ರಿ. ಶ. 1816.

ಶ್ರೀ

**ಶ್ರೀ ಚಾಮರಾಜ ವಡೇರ**
**ತನುಜ ಕೃಷ್ಣರಾಜ ವಡೇರ**

* ಕೃಷ್ಣರಾಜವಡೆಯರವರು

ಧಾತು ಸಂವತ್ಸರದ ಶ್ರಾವಣಬಹುಳ ೪ ಸೋಮವಾರದಲ್ಲೂ ಶ್ರೀ ಮತ್ತು ॥* ॥ಕೂಡ್ಲೀ ಮಠದ ಮೊಕಾಮು ಕೃಷ್ಣಶಾಸ್ತ್ರಿಗಳಿಗೆ ಬರೆಶಿ ಕಳುಹಿಸಿದ ನಿರೂಪ ಅದಾಗೀ ಅರಮನೇ ಪುರಾಣ ಕೊಠೀ ಸರಸ್ವತಿ ಭಂಡಾರಕ್ಕೆ ಪುಸ್ತಕಗಳು ಬೇಕಾಗಿರುವ ಕಾರಣ ಅಪ್ಪಣೆ ಕೊಡಿಶಿರುವ ವಿವರಾ—

| | |
|---|---|
| ೧ ಶಂಕರಭಾಷ್ಯಾ ನಾಲ್ಕು ಅಧ್ಯಾಯ | ೧ ವಿವರಣವಾಚಸ್ಪತ್ಯ |
| ೧ ಕಲ್ಪತರು | ೧ ನ್ಯಾಯರಕ್ಷಾಮಣಿ |

೧ ಅದ್ವೈತಸಿದ್ಧಿ
೧ ಅದ್ವೈತ ಪರಿಭಾಷ
೧ ಶಿದ್ಧಾಂತ ಲೇಶ ಸಂಗ್ರಹ
೧ ಬ್ರಹ್ಮವಿದ್ಯಾಭರಣ
೧ ಅದ್ವೈತ ದೀಪಿಕಾ
೧ ಗೌಡಬ್ರಮ್ಹಾನಂದೀಯ
೧ ನಾರಾಯಣಾಶ್ರಮೀಯ
೧ ಇದರ ವ್ಯಾಖ್ಯಾನ ರಾಮ ಕೃಷ್ಣ ದೀಕ್ಷತ್ರೀಯ ಅದ್ವೈತ ಪರಿಭಾಷಾ ವ್ಯಾಖ್ಯಾನ.

(೧೨) ಈ ಪ್ರಕಾರ ಹನ್ನೆರಡು ಪುಸ್ತಕಗಳನ್ನೂ ಅನುವಾದ ವಾಲೇವಳಗೆ ಕನ್ನಡಾಗಲೀ ತೆಲಗು ಅಕ್ಷರವಾಗಲೀ ಬುದ್ಧಿವಂತರ ಕಡೆಯಿಂದ ನಿರಾಪಧವಾಗಿ ಯರಡು ತಿಂಗಳೊಳಗೆ ಚನ್ನಾಗಿ ಸ್ಫುಟವಾಗಿ ಬರಶಿ ಇದರ ಲಾಗವಡ ಪಟ್ಟೀ ಸಹಾ ಹಜೂರಿಗೆ ಕಳುಹಿಸುವದು. ಪರಾಂಬರಿಶಿ ಅಪ್ಪಣೇ ಕೊಡಿಸಲಾಧೀತು ತಾ. ೧೨ನೇಮಾಹೇ ಆಗಸ್ಟ ಸನ್ನ ೧೮೧೬ ಇಸ್ವಿ.

ಖತ್ತ ಲಚ್ಚಾರಾವ ಮುನಷೀಹಜೂರ ಮೂರನೂರು.

ಶ್ರೀಕೃಷ್ಣ.

---

೩೯೦. ನಿರೂಪ :—ಧಾತು, ಶ್ರಾವಣ ಬ. ೫, ಶಾ. ಶ. ೧೭೩೮, ಕ್ರಿ. ಶ. 1816.

ಶ್ರೀ

श्री चामराज वडेर
तनुज कृष्णराज वडेर

*ಕೃಷ್ಣರಾಜವಡೆಯರವರು

ಧಾತು ಸಂವತ್ಸರದ ಶ್ರಾವಣ ಬ॥ ೫ ಮಂಗಳವಾರದಲ್ಲೂ. ಶ್ರೀ ಮತ್ತು ॥* ॥ ಶಿವಮೊಗ್ಗೆ ಆಮಿಲ ಕೃಷ್ಣರಾಯಗೇ ಬರಶಿಕಳುಹಿಶಿದ ನಿರೂಪ ಅದಾಗಿ, ಕೂಡ್ಲೀ ಶೃಂಗೇರಿ ಸ್ವಾಮಿಗಳ ಮಠಕ್ಕೆ ಚಾತುರ್ಮಾಶ್ಯ ವ್ಯಾಸಪೂಜೇ ಕಟ್ಲೆಗೆ ಸಾಲ ಬಸಾಲು ಖಜಾನೆಯಿಂದ ಸಲ್ಲುವದ ಮೋಖೂಪುಮಾಡಿ ಈಸ್ವರಸಂವತ್ಸರದಾರಭ್ಯ ತಾಲೂಕಿನಿಂದ ಕೊಡತಕ್ಕದ್ದಕ್ಕೆ ಅಪ್ಪಣೆಕೊಟ್ಟಿರೋ ವಿವರ. ನಗದು ಕಾಲಪೂರ್ತಿ ೩೦೦ ಮುನ್ನೂರುರೂಪಾಯಿ ಇದು ಹೊರ್ತು ಧೋತರದ ಜೋಡಿ ದರ ಮೂವ್ವತ್ತು ಹಣ ಕ್ರಯದ ಬಾಬ್ತನದು. ೧ ವಂದು ಸಹಾ ಈಶ್ವರ ಸಂವತ್ಸರದಾರಭ್ಯ ಹರಸಾಲ ತಾಜಾ ಸನ್ನದು ಉಜೂರ ಮಾಡದೇ, ಮಠಕ್ಕೆ ತಲ್ಪಿಶಿ ರಶೀದಿ ತೆಗೆದುಕೊಳ್ಳುತ್ತಾ ಬರೋದು. ತಾರೀಖು ೧೩ನೇ ಮಾಹೇ ಆಗಸ್ಟ ಸಂನ್ನ ೧೮೧೬ನೇ ಈಸವಿ ಖತ್ ಪ್ರಸನ್ನಯ್ಯ ಮುನಷಿ ಹಜೂರ.

ತಾಜಾಕಲಂ. ಈಸನದು ನಕಲು ತಾಲ್ಲೂಕು ಶಿರಸ್ತಾರ ದಫ್ತರಕ್ಕೆ ಬರಶಿ ಅಸಲು ಸನ್ನದು ವಾಪಸು ಕೊಡೋದು. ತಾರೀಖು ಸದರ್

*ಕಲಮು—ಮುನ್ನೂರು ರೂಪಾಯಿ. ಕಡಮೇ ಸದರೀ........ಅಪ್ಪಣೇ ಕೊಡಿಸಿರುವಮೇರೆಗೆ ಕೊಡಸುವುದು.

ಶ್ರೀಕೃಷ್ಣ.

---

*ಈ ಭಾಗ ಶ್ರೀಕೃಷ್ಣರಾಜವಡೆಯರವರ ಸ್ವಹಸ್ತಾಕ್ಷರದಲ್ಲದೆ.

೩೯೧. ನಿರೂಪ:—ಧಾತು, ಭಾದ್ರಪದ ಶು. ೭, ಶಾ. ಶ. ೧೭೩೮, ಕ್ರಿ. ಶ. 1816.

ಶ್ರೀ

| श्री चामराज वडेर<br>तनुज कृष्णराज वडेर |
|---|

*ಕೃಷ್ಣರಾಜವಡೆಯರವರು

ಧಾತು ಸಂವತ್ಸರದ ಭಾದ್ರಪದ ಶು॥ ೭ ಗುರುವಾರದಲ್ಲೂ ಶ್ರೀಮತು ॥* ॥ ಕೂಡ್ಲೀ ಶೃಂಗೇರಿ ಶ್ರೀಮಠದ ಪಾರುಪತ್ಯಗಾರ ಗಂಗಾಧರ ಶಾಸ್ತ್ರೀಗೆ ಬರಶಿ ಕಳುಹಿಶಿದ ನಿರೂಪ ಅದಾಗಿ ಕಳುಹಿಸಿದ ಅರ್ಜಿಯಿಂದ ಯಲ್ಲಾ ವಿವರವೂ ಶೃತವಾಯಿತು. ಹುಜೂರ ಅಪ್ಪಣೀ ಪ್ರಕಾರ ಸಮಸ್ತ ಪುಸ್ತಕಗಳನ್ನೂ ಬರಸತಕ್ಕ ಬಗ್ಗೆ ಪ್ರಾರಂಭಮಾಡಿ ಇದೆ ಬರದು ಆದ ಕೂಡ್ಲೆ ಕಳುಹಿಸುತ್ತಾ ಇಧೆ ಯಂಬದಾಗಿ ಬರದ್ದು ಸರಿಯಷ್ಟೆ? ಅದೇ ಪ್ರಕಾರ ಪುಸ್ತಕಗಳು ತಯಾರಾದದ್ದು ಕಳುಹಿಸುತ್ತಾ ಬರುವದು. ತಾರೀಖು ೨೯ನೇ ಮಾಹೆ ಆಗಸ್ಟು ಸನ್ನ ೧೮೧೬ನೆ ಈಸವಿ ಖತ್ತ ನಾರಾಯಣಪ್ಪ ಮುನಷಿ ಹುಜೂರು. ಶ್ರೀ ಕೃಷ್ಣ.

———

೩೯೨. ನಿರೂಪ:—ಧಾತು, ಮಾಘ ಶು. ೭, ಶಾ. ಶ. ೧೭೩೮, ಕ್ರಿ. ಶ 1817.

श्री
कृष्णराज वडेयर यानि
॥ श्री ॥

| श्री चामराज वडेर<br>तनुज कृष्णराज वडेर |
|---|

धातु संवत्सर माघ शु ॥ ७ शुक्रवार श्रीमतु ॥ ॥ कूडली श्रींगेरी मठ पारपत्येगार गंगाधरशास्त्रीस निरोपिले लेखनाज्ञा अैसाजे पुष्यवदि १० तारीखचे अर्ज पाठविले ते लेखनार्थ श्रुत जाहले त्यांत वेदांत परिभाष्य पोथि. व. विवरणपोथि व. सिद्धांतलेशपोथि रामकृष्णदिक्षतीये, असे च्यार पोथीही लिहववून शंकरशास्त्रि हता पाठविल आहे सांगोन लि॥ होता उत्तम केला असो. च्यारपोथिही हजूर पुराण कोठि सरस्वती भांडारास येऊन पावल. पहिल निरोपिल प्रे॥ बाकी पोथि ही सिद्ध लिहवऊन पावणे श्री मठात नित्यकट्ले देवास समर्पण करून ब्रामणास देणे बद्ल श्रीगंध पाहिजे लागते तर रोजिना तीनी शेर प्रो. देवितेस हुकुम व्हावे म्हणोन लिहिल होता त्या प्रो चारमण सालाकि सम पौ। दाहामण गंधाचि खोडके शिवमोगे ते॥ तं देवितेस नगर फौजदार सर्वोत्तमरायास निरूप सादर केल आहे आणऊन घेऊन प्रति नित्ये मठांत श्री देवांस समर्पण करऊन भोजन करणारब्राम्हणास विनयोग होये तैसे करवणे जाणिजे मरकुम तारीख २४ माहे जनेवरी संन १८१७ इसवि खत रामाजिपंत मुनषी हजूर ॥ ಶ್ರೀ ಕೃಷ್ಣ.

———

೩೯೩. ನಿರೂಪ:—ಧಾತು, ಫಾಲ್ಗುಣ ಬ. ೧೧, ಶಾ ಶ. ೧೭೩೮, ಕ್ರಿ.ಶ. 1817.

ಶ್ರೀ

श्री चामराज वडेर
तनुज कृष्णराज वडेर

*ಕೃಷ್ಣರಾಜ ವಡೆಯರವರು

ಧಾತು ಸಂವತ್ಸರದ ಫಾಲ್ಗುಣ ಬಹುಳ ೧೧ರಲ್ಲೂ ಶ್ರೀಮತು ॥ ॥ ಅರಮನೇ ಶೀಮೇ ಗಡಿಗಳ ಅಮೀಲ್ ಕಿಲ್ಲೇದಾರರಿಗೆ ಸಾಯಿರು ಮಣೇಗಾರರಿಗೆ ಸಹಾ॥ ಬರಶಿಕಳುಹಿಶಿದ ನಿರೂಪ ಆದಾಗೀ ಕೂಡ್ಲೀ ಶೃಂಗೇರಿ ಮಠಕ್ಕೆ ನಿತ್ಯ ಸಂತರ್ಪಣೆ ಬಗ್ಗೆ ್ಯ ಲಕ್ಕುವಳ್ಳಿ ಮಂಡಗದ್ದೇ ಹೊನ್ನಾಳೀ ವಗೈರೆ ತಾಲೂಕದಿಂದ ಅಕ್ಕೀ ಬ್ಯಾಳೇ ಮುಂತಾದ ಜೀನಸು ಖರೀದಿಗೆ ತರಶಿಕೊಳ್ಳುವದ್ದರಿಂದ ಸಾಬಕ ಮೇರಿಗೆ ಸುಂಕಾ ಕೇಳದೇ ಬಿಟ್ಟುಬಿಡುವದು. ತಾರೀಖು ೧೩ನೇ ಮಾಹೆ ಮಾರ್ಚಿ ಸನ್ನ ೧೮೧೭ನೆ ಇಸವಿ. ಖತ್ತು ತಿಮ್ಮಪ್ಪ ಮುನಷಿ ಹಜೂರ.

ಶ್ರೀ ಕೃಷ್ಣ.

———

೩೯೪. ನಿರೂಪ:—ಈಶ್ವರ, ಅಧಿಕ ಶ್ರಾವಣ ಬ. ೩೦, ಶಾ. ಶ. ೧೭೩೯, ಕ್ರಿ. ಶ. 1817.

श्री चामराज वडेर
तनुज कृष्णराज वडेर

*ಕೃಷ್ಣರಾಜವಡೆಯರವರು

ಈಶ್ವರ ಸಂವತ್ಸರದ ಅಧಿಕ ಶ್ರಾವಣ ಬಹುಳ ೩೦ ಮಂಗಳವಾರದಲ್ಲೂ ಶ್ರೀಮತ್ತು ॥* ॥ ಅರಮನೆ ಶೀಮೆ ಗಡಿಗಳ ಅಮೀಲ್ ಕಿಲ್ಲೇದಾರ್ರಿಗೆ ಬರಸಿಕಳುಹಿಸಿದ ನಿರೂಪ ಅದಾಗಿ ಕೂಡಲೀ ಶೃಂಗೇರಿ ಶ್ರೀ ಸ್ವಾಮಿಗಳವರು ದೇಶ ಸಂಚಾರಕ್ಕೆ ಹೋಗುವುದ್ದರಿಂದ ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ದಯಮಾಡಿದಲ್ಲ ಮರ್ಯಾದೆಯಿಂದ ಕರತಂದು ಯೋಗ್ಯವಾದ ಸ್ಥಳದಲ್ಲಿ ಇಳಸಿ ಶ್ರೀ ಸ್ವಾಮಿಗಳವರ ಭಿಕ್ಷಕ್ಕೆ ಬ್ರಾಂಹಣ ಸಂತರ್ಪಣೆಗೆ ಸಹಾ। ಐನೂರು ಜನಕ್ಕೆ ಲವಾಜಮೇ ಪ್ರಕಾರ ಸಕಲಸೋಬಸ್ಕರ ಕೊಟ್ಟು ಸಂಗಡ ಇರುವ ಆನೆ ನಾಲ್ಕಕ್ಕೆ ಅಕ್ಕಿ ಪಕ್ಕಾ ಶೇರು ನಾಲ್ವತ್ತುವಂದು, ಬೆಲ್ಲ ಕಚ್ಚಾ ಸೇರು ಹತ್ತು ತುಪ್ಪಾ ಕಚ್ಚಾ ಸೇರು ಐದು. ಶೂದ್ರ ಜನಾ ನೂರಾ ಮೂವ್ವತ್ತಕ್ಕೆ ಅಕ್ಕಿ ಪಕ್ಕಾ ಶೇರು ನೂರ ಮೂವ್ವತ್ತು ದುಡ್ಡು ನೂರಮೂವ್ವತ್ತು ಕುದುರೆ ಐವ್ವತ್ತು ವಂಟೆ ಆರಕ್ಕೆ ಸಹಾ ಹುರುಳಿ ಪಕ್ಕಾ ಶೇರು ನೂರತೊಂಭತ್ತೊಂಭತ್ತು ಈಮೇರಿಗೆ ಬಂದಿಳಿದ ವಂದು ದಿವಸ ಮಾತ್ರ ಕೊಡಿಶಿ ಕೊಟ್ಟು ಸಂದ ಸಾಮಾನಿಗೆ ರಶೀದಿ ತೆಗೆದುಕೊಂಡು ಕ್ರಯ ವಿವರದ ಪಟ್ಟಿ ಹುಜೂರಿಗೆ ಕಳುಹಿಸುವದು. ನಿಮ್ಮ ನಿಮ್ಮ ಗಡಿಯಲ್ಲಿ ಇರುವವರಿಗೂ ಹುಲ್ಲು ಸವುದೇ ಕಾಯಿ ಪಲ್ಯಾ ಮುಂತಾದ ಹಣ ಮುಟ್ಟಿದ ಸಾಮಾನು ಕೊಡಿಸಿ ಮುಂದಕ್ಕೆ ಹೋಗುವಲ್ಲ ಸಂಗಡ ಬೇಕಾದಷ್ಟು ಆಳುಗಳ ಕೊಟ್ಟುಕಳುಹಿಸುವದು. ತಾರೀಖು ೧೨ನೇ ಮಾಹೇ ಆಗಸ್ಟು ಸನ್ನ ೧೮೧೭ನೆ ಇಸವಿ ಖತ್ತ ಪ್ರಸನ್ನಯ್ಯ ಮುನಷಿ ಹುಜೂರು. ಶ್ರೀ ಕೃಷ್ಣ.

———

೩೯೫. ನಿರೂಪ:—ಬಹುಧಾನ್ಯ, ಮಾರ್ಗಶಿರ ಶು. ೧೫, ಶಾ. ಶ. ೧೭೪೦, ಕ್ರಿ. ಶ. 1818.

ಶ್ರೀ

| श्री चामराज वडेर<br>तनुज कृष्णराज वडेर |
|---|

*ಕೃಷ್ಣರಾಜವಡೆಯರವರು

ಬಹುಧಾನ್ಯ ಸಂವತ್ಸರದ ಮಾರ್ಗಶಿರ ಶುದ್ಧ ೧೫ ಸ್ಥಿರವಾರದಲ್ಲೂ ಶ್ರೀಮತು ‖ * ‖ ಅರಮನೇ ಶೀಮೆ ಗಡಿಗಳ ಅಮೀಲ್ ಕಿಲ್ಲೇದಾರರಿಗೆ ಬರಶಿ ಕಳುಹಿಸ್ತ ನಿರೂಪ ಅದಾಗಿ ಕೂಡ್ಲಿ ಶೃಂಗೇರಿ ಶ್ರೀ ಸ್ವಾಮಿಯ ವರು ದೇಶ ಸಂಚಾರಕ್ಕೆ ಹೋಗುವದ್ದರಿಂದಾ ನಿಮ್ಮನಿಮ್ಮ ಗಡಿಗಳ ಮಾರ್ಗವಾಗಿ ಬರುವಲ್ಲಿ ಮರ್ರ್ಯಾದೆಯಿಂದ ಕರ ತಂದು ಯೋಗ್ಯವಾದ ಸ್ಥಳದಲ್ಲಿ ಇಳಿಸಿ ಶ್ರೀ ಸ್ವಾಮಿಗಳವರ ಭಿಕ್ಷಕ್ಕೆ ಬ್ರಾಹ್ಮಣ ಸಂತರ್ಪಣೆಗೆ ಸಹಾ ಐನೂರು ಜನಕ್ಕೇ ಲವಾಜಮೇಪ್ರಕಾರಾ ಸಕಲ ಸೋಬಸ್ಕರವನ್ನೂ ಅಗುವಷ್ಟಕ್ಕೆ ಕೊಟ್ಟು ಸಂಗಡ ಬಂದ ಆನೆ ೪ ನಾಕಕ್ಕೆ ಅಕ್ಕಿ ಪಕ್ಕಾ ಶೇರು ನಾಲವತ್ತೊಂದು ಬೆಲ್ಲಾ ಕಚ್ಚಾ ಶೇರು ಹತ್ತು ತುಪ್ಪಾ ಕಚ್ಚಾ ಶೇರು ಐದು ಶೂದ್ರ ಜನ ೧೩೦ಕ್ಕೆ ಅಕ್ಕಿ ಪಕ್ಕಾ ಶೇರು ನೂರಮೂವತ್ತು ದುಡ್ಡು ನೂರಮೂವತ್ತು ಕುದುರೆ ೫೦ ವಂಟೆ ೭ಕ್ಕೆ ಸಹಾ| ಹುರುಳಿ ಪಕ್ಕಾ ಶೇರು ನೂರ ಇಪ್ಪತ್ತು ನಾಲ್ಕು ಈ ಮೇರೆ ಕೊಡತಕ್ಕದ್ದನ್ನು ರಾಸು ಜನ ಹಾಜರಾ ನೋಡಿ ಪಟ್ಟಿ ಬರಕೊಂಡು ಹಾಜರಾ ಯಿದ್ದದ್ದಕ್ಕೆ ಅಪ್ಪಣೆ ಕೊಟ್ಟಿರುವದರೊಳಗೆ ಮುನಾಸಬು ನೋಡಿ ಬಂದು ಇಳಿದ ವಂದು ದಿವಸ ಮಾತ್ರ ಸದರ ಕಟ್ಲೇ ಮಾಡಿಶಿರುವುದರೊಳಗೆ ಮುನಾಸಬುನೋಡಿ ಉಳಿಯದಹಾಗೆ ಕೊಡಶಿಕೊಟ್ಟು ಸಂದಸಾಮಾನಿಗೆ ಮಠದ ಪಾರುಪತ್ತೇಗಾರನ ರಶೀದಿ ತೆಗೆದುಕೊಂಡು ಕ್ರಯ ವಿವರದ ಪಟ್ಟಿ ಹುಜೂರಿಗೆ ಕಳಿಸುವದು ನಿಮ್ಮನಿಮ್ಮ ಗಡಿಯಲ್ಲಿ ಇರುವವರಿಗೂ ಮೇವಿಗೆ ತಕ್ಕಷ್ಟು ಹುಲ್ಲು ಅಡಿಗ್ಗೆ ತಕ್ಕಷ್ಟು ಸವುದೆ, ಕಾಯಿಪಲ್ಯ ಮುಂತಾದ ಹಣ ಮುಟ್ಟದ ಸಾಮಾನು ಸಹ ಕೊಡಿಶಿ ಮುಂದಿನ ಗಡೀಗೆ ಸಾಗಿಹೋಗುವಲ್ಲಿ ಸಂಗಡ ಬೇಕಾದಷ್ಟು ಆಳುಗಳ ಕೊಟ್ಟು ಕಳುಹಿಸುವದು. ತಾರೀಖು ೧೨ನೆ ಮಾಹೆ ಡಿಶೆಂಬರ ಸನ್ ೧೮೧೮ನೆ ಯಿಸ್ವಿ ಖತ್ತ ಪ್ರಸನ್ನಯ್ಯ ಮುನಷಿ ಹುಜೂರು.

ಶ್ರೀಕೃಷ್ಣ.

———

೩೯೬. ನಿರೂಪ:—ಪ್ರಮಾಥಿ, ಜ್ಯೇಷ್ಠ ಶು. ೩, ಶಾ. ಶ. ೧೭೪೧, ಕ್ರಿ. ಶ. 1819.

॥ श्री ॥

| श्री चामराज वडेर<br>तनुज कृष्णराज वडेर |
|---|

कृष्णराज वडयेर यानि

प्रमाथि संवत्सर जेष्ट शु ॥ ३ गुरुवारी श्रीमतु ॥ ॥ सिवमोगे ता ॥ अमील सुबरायास निरो पिले लेखनाज्ञा ऐसेजे कूडलींत राहाणार श्रींगेरी मठचे श्री स्वामि याचे मठास ता ॥ मजकूर आसपास गाव खेडेह्रून पूर्विपासोन रागि वगैरे चेगवत साबक हुकुम प्र ॥ देवीत होत हालि ताजा हुकुम व्हावे म्हणोन उजूर करिता नसा आंशास साबक पासोन गवत वगैरे मठास देवणे चा आताही गावकरास ताकीद करून देवणे जाणिजे मरकूम तारीख २७ माहे मे सन १८१९ इसवि खत रामाजी पंत मुनषि हुजूर. ಶ್ರೀಕೃಷ್ಣ.

———

೩೯೭. ನಿರೂಪ :—ಪ್ರಮಾಥಿ, ಜ್ಯೇಷ್ಠ ಶು. ೩, ಶಾ. ಶ. ೧೭೪೧, ಕ್ರಿ. ಶ. 1819.

| श्री चामराज वडेर<br>तनुज कृष्णराज वडेर |
|---|

श्री

कृष्णराज वडियेर यानि

प्रमाथि संवत्सर जेष्ठ शु॥ ३ गुरुवारी श्रीमतु॥ होळेहोनूर ता॥ आमिल लक्ष्मणरायासि निरोपिले लेखनाज्ञा ऐसेजे कूडलिंत असणार शृंगेरी श्री मठास तुमचे ता॥ गांव खेडेहून पूर्विपासोन हु॥ प्र॥ रागी चेगवत वगैरे पावणे ते हालि ताजा सनद व्हावे म्हणोन उजूर करीत आहे नसा आज्ञा स साबक पासोन गवत वगैरे चिल्लरपावणे चि खेडे वालेस ताकीद करून सावक प्र॥ देवित जाणे जाणिजे मरकूम तारीख २७ माहे मे सन १८१७ इसवि खत रामाजिपंत मुनषी हजूर.

पो॥ आश्वीज सु॥ ६ सोमवार ಶ್ರೀಕೃಷ್ಣ

———

೩೯೮. ನಿರೂಪ :—ಪ್ರಮಾಥಿ, ಜ್ಯೇಷ್ಠ ಶು. ೩, ಶಾ. ಶ. ೧೭೪೧, ಕ್ರಿ. ಶ. 1819.

| श्री चामराज वडेर<br>तनुज कृष्णराज वडेर |
|---|

कृष्णराज वडेर यानी

प्रमाथी संवत्सर ज्येष्ठ सु ३ रा॥ श्रीमत्॥ ॥ नगर फौजदार सर्वोत्तमरायास निरोपिले लेख आज्ञा ऐसाजे कूडली श्रिंगेरी त्यास सिवमोगे अगर कोणत्या तालूक पैकी संदल सलाखा आहे कीत्या पै॥ च्या हर मपंनूमकी समबाबत दाहामण संदल खडे के साल मजकूर प्रमाथी सं॥ रास वजन करवावून मठा च पारपत्येगार चे ज्ञमेस देऊन रसीद घेणे दरसाल ताजा सनदे ची उजूर न करिता पुढं ही साले एकास दाहा मणच्या हरम पंनू मकीसम पैकी संदल देवीत जाणे जाणिजे मरकूम त॥ २७ माहे मे सन १८१९ इसवी खत रामाजी पंत मुनषी हुजूर ಶ್ರೀ ಕೃಷ್ಣ.

———

೩೯೯. ನಿರೂಪ :—ಪ್ರಮಾಥಿ, ಜ್ಯೇಷ್ಠ ಶು. ೩, ಶಾ. ಶ. ೧೭೪೧, ಕ್ರಿ. ಶ. 1819.

| श्री चामराज वडेर<br>तनुज कृष्णराज वडेर |
|---|

कृष्णराज वडेरु यानि

प्रमाथी संवत्सर ज्येष्ठ सु ३ गुरुवार श्रीमतु॥ ॥

सिवमोग अमील सुबरायास निरोपिले लेख आज्ञा ऐसाजे कूडलीत आसणार अक्ष्योभ्यतीर्थ कलमठ च स्वामी निसाबकेत हुजूर आले असताना सरकाराहून स्वेत छत्र देऊन पाठविले आहे की

कूडली श्रींगेरी श्री स्वामीयानी अपल संस्थान च बिरद सहित नदी स्नानास गेले असता त्याचे सामोरे कलमठवालेनी स्वेत छत्र धरऊन घेऊन नाहीते कजिया बखेडा करीत आहे म्हण सबब काये थोर संस्थान च स्वामियानी जात असता त्याच सामोर दुसरानी न जाणे ची काइदा नाहि कि अशतास श्रृङ्गेरी श्री स्वामी यानी स्नाना बदल नदीस कोणी कडे जात आहे कि ते घाट सोडून दुसर अपणी एक घाटास जाऊन स्नान करित सदैव स्नानास रथोत्सव सत्यानी गेल असता कलमठवालेनी न जात परऊन त्यानी आल्यावर यानी जाऊन येतस ताकीद करून उभयतांत हर घडी कजियाबखेडा न करिता संगणे ये विषयी फिर्याद येऊ न देणे जाणीजे तारीख २७ माहे मे संन १८१९ इसवी खत रामाजी पंत मुनषी हुजूर। ಶ್ರೀಕೃಷ್ಣ.

---

೪೦೦. ನಿರೂಪ :—ವಿಕ್ರಮ, ಅಧಿಕ ಜ್ಯೇಷ್ಠ ಬ. ೭, ಶಾ. ಶ. ೧೭೪೨, ಕ್ರಿ.ಶ. 1820.

ಶ್ರೀ

| श्री चामराज वडेर<br>तनुज कृष्णराज वडेर |
|---|

*ಕೃಷ್ಣರಾಜವಡಯರವರು

ವಿಕ್ರಮ ಸಂವತ್ಸರದ ಅಧಿಕ ಜೇಷ್ಠ ಬಹುಳ ಸಪ್ತಮಿ ೭ ಸ್ಥಿರವಾರದಲ್ಲೂ ಶ್ರೀಮತು॥* ॥

ಶಿವಮೊಗ್ಗೆ ಅಮಿಲ್ ಸುಬ್ಬರಾಯಗೆ. ಬರಶಿಕಳುಹಿಸಿದ ನಿರೂಪ ಅದಾಗಿ ಕೂಡ್ಲಿ ಶೃಂಗೇರಿ ಮಠಕ್ಕೆ ಶಂಕರಭಾರತಿಗಳವರಿಗೆ ಹೊಸದಾಗಿ ಪೀಠವಾದ ಬಗ್ಗೆ ಸರಕಾರದಿಂದಾ ಯೀ ತಾಲ್ಲೂಕು ಮಜಕೂರು ಐವಜು ಪೈಕಿ ತಾಲಪೊಲ್ಲ ಮುನ್ನೂರು ರೂಪಾಯಿಯನ್ನು ಶ್ರೀ ಸ್ವಾಮಿಗಳ ಪೀಠಾಭಿಷೇಕಕ್ಕೆ ಮಠಕ್ಕೆ ಕೊಟ್ಟು ರಶೀತಿ ತೆಗೆದುಕೊಂಡು ಆ ಬಗ್ಗೆ ಹುಜೂರಿಗೆ ಅರ್ಜಿ ಬರಶಿಕಳುಹಿಸುವದು ತಾರೀಖು ೩ನೇ ಮಾಹೆ ಜೂನ ಸನ್ನ ೧೮೨೦ನೆ ಯಿಸವಿ ಖತ್ತ ಪ್ರಸನ್ನಯ್ಯ ಮುನಷಿ ಹುಜೂರು. ತಾಲಪೊಲ್ಲ ಮುನ್ನೂರು ರೂಪಾಯಿ ಕೊಡುವುದು. ಶ್ರೀ ಕೃಷ್ಣ.

---

೪೦೧. ನಿರೂಪ :—ಚಿತ್ರಭಾನು, ಮಾಘ ಶು. ೧೩, ಶಾ. ಶ. ೧೭೪೫, ಕ್ರಿ. ಶ. 1823.

ಶ್ರೀ

| श्री चामराज वडेर<br>तनुज कृष्णराज वडेर |
|---|

*ಕೃಷ್ಣರಾಜವಡೆಯರವರು

ಚಿತ್ರಭಾನುಸಂವತ್ಸರದ ಮಾಘ ಶುದ್ಧ ೧ನೆ ಶುಕ್ರವಾರದಲ್ಲೂ ಶ್ರೀಮತು॥* ॥

ಅರಮನೇ ಶೀಮೇಗಡಿಗಳ ಅಮೀಲ್ ಕಿಲ್ಲೇದಾರ್ರಿಗೆ ಬರಶಿಕಳುಹಿಸಿದ ನಿರೂಪ ಅದಾಗಿ, ಕೂಡ್ಲಿ ಶೃಂಗೇರಿ ಶ್ರೀಸ್ವಾಮಿಗಳವರು ಕೂಡ್ಲಿಯಿಂದಾ ಗೋಕರ್ಣ ಯಾತ್ರೆಗೆ ಹೋಗಿ ಬರುವದ್ದರಿಂದ ಹೋಗತಕ್ಕ ಮಜಲು ಶಿವಮೊಗ್ಗೆ ೧, ಕುಂಮುಶಿ ೧, ಅನಂತಪುರ ೧, ಸಾಗರ ೧, ಚಂದ್ರಗುತ್ತಿ ೧, ಸೊರಬ ೧, ಆನೆವಟ್ಟು ೧, ಗೋಕರ್ಣದಿಂದ ಬರುವ ಮಾರ್ಗ, ಹರಿಹರ ೧, ಬಸವಾಪಟ್ಣ ೧, ಚೆನ್ನಗಿರಿ ೧, ಹೊಳೇಹೊನ್ನೂರು ೧, ಅಂತೂ ಹದಿನೇಳು

ಮಜಲು ಆಗುವದ್ದರಿಂದ ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಮರ್ಯಾದೆಯಿಂದ ಕರೆತಂದು ಇಳಿಸಿ ಬಂದ ದಿವಸ ಸರ್ಕಾರದ ಇಂದಾ ಭಿಕ್ಷಾಸಂತರ್ಪಣೆ ಬಗ್ಗ್ಯೆ ಐನೂರು ಜನ ಬ್ರಾಹ್ಮಣ ಸಂತರ್ಪಣೀಕ್ಕೆ ಸೋಬಸ್ಕರ ಕೊಟ್ಟು, ಸಂಗಡ ಇರುವ ಆನೆ ನಾಲ್ಕಕ್ಕೆ, ಕೆಂಪು ಅಕ್ಕಿ ಪಕ್ಕಾಶೇರು ನಾಲ್ವತ್ತೊಂದು, ಬೆಲ್ಲಾ ಕಚ್ಚಾಸೇರು ಹತ್ತು, ತುಪ್ಪಾ ಕಚ್ಚಾ ಶೇರು ಐದು, ಶೂದ್ರ ಜನ ನೂರಮೂವತ್ತಕ್ಕೆ ಅಕ್ಕಿ ಪಕ್ಕಾಸೇರು ನೂರಮೂವತ್ತು (೧೩೦), ದುಡ್ಡು ನೂರಮೂವ್ವತ್ತು, ಕುದುರೆ (೫೦) ಐವತ್ತು, ವಂಟೆ ಆರಕ್ಕೆ ಸಹ, ಹುರುಳಿ ಪಕ್ಕಾಸೇರು ನೂರಎಪ್ಪತ್ತು ನಾಲ್ಕು ಶೇರು, ಸಹಾ ಕೊಟ್ಟು ಸಂದ ಬಗ್ಗೆ, ಮಠದ ಪಾರುಪತ್ಯೇಗಾರನಿಂದ ರಶೀದಿ ತೆಗೆದು ಕೊಂಡು ಕಿಮ್ಮತ್ತು ಪಟ್ಟೀ ಸಹಾ ಕಳುಹಿಸುವುದು. ಸದರಿ ರಾಸುಗಳ ಮೇವಿಗೆ ತಕ್ಕಷ್ಟು, ಹುಲ್ಲು ಅಡಿಗಬ್ಬು ಸಹ ಕೊಡುವದು. ಈ ರಹದಾರಿಯನ್ನು ಸ್ವಭಾನು ಸಂವತ್ಸರದ ಅಧಿಕ ಚೈತ್ರ ಬಹುಳ ೩೦ವರಿಗೆ ಮಂಜೂರು ಮಾಡುವದು. ಸುಂಕದಬಗ್ಗೆ ಸ್ಥಳ ಪದ್ಧತಿ ಮೇರೆ ನಡಕೂಳ್ಳುವದು, ರಾತ್ರೀ ವೇಳೆ ಕಳ್ಳಕಾಕರ ಉಪದ್ರವ ವಿಲ್ಲದಂತೆ ಖಬರದಾರಿ ಮಾಡುವದು. ಮರಕುಂ ತಾರೀಖು, ೨೪ನೇ ಮಾಹೇ ಜನವರಿ, ಸನ್ನ ೧೮೨೩ನೇ ಇಸವಿ ಖತ್ತ ಬಚ್ಚಾರಾವ ಮುನಷಿ ಹುಜೂರು. ಶ್ರೀಕೃಷ್ಣ.

———

೪೦೨. ನಿರೂಪ:—ಚಿತ್ರಭಾನು, ಫಾಲ್ಗುಣ ಶು. ೧, ಶಾ. ಶ. ೧೭೪೫, ಕ್ರಿ. ಶ. 1823.

श्री

| श्री चामराज वडेर<br>तनुज कृष्णराज वडेर |
|---|

कृष्णराज वडेयर यांनि

चित्रभानु संवस्छर फालगुण शु॥ वुधवारि श्रीमतु ॥ ॥ सिवमोगी. ता॥ आमिलसु बरायांस निरोप लेखन आज्ञा येसेजे कूडली श्रींगेरी श्रीमठास ता ॥ मार पै॥ सालीयान इक्केरि येक हजार होन्न प्रो॥ वर्षा चालून येत होत पैंलि कडे विक्रम संवस्छरि कंठिराई ३६२ होन्न बहल ठेऊन वरकड बाकि यैवज तसदीकेंत कमि जाह ले आहे येणे कडून श्रीमठांत देवता सेवा व ब्रम्हण संतर्पणा वगैरे होणेस नाहि सावक प्रो देतेस हुकुं व्हावे म्हणुन सवार कचेरि बकसि रामराव मारीफत् हजूर श्रुत जाहल्या वरून हुकुम केले जातेजे सदरी कूडली श्रींगेरी श्री मठास पावणेचे येक हजार होन्न इक्केरी पो॥ येलि कडे विक्रम संवस्छरी कोणते महिनेत कोहते तारिकेस कमि जाहले आहेकि त्या तारिखे पासून सदरी हजार होन्न पा॥ बहल आहे ते वजा जाता बाकि कमि जाहले यैवज हे सनद स्थल दाखल तारीख पौ. भरती करून झाडियानिसि पावते करून देऊन पुढे हे सनद स्थल दाखल तारीख पासून सावक प्रौ सालियानि इक्केरी येक हजार १००० होन्न प्रौ। वर्षाशनचें ऐंवज महिने माल तफारीक प्रौ इंग्रजी महिनेचे नाबितेने तालूक मार एवज पो। कूडलि श्रींगेरी श्री शंकर भारती स्वामियांस नगद सालबा साल पावते करून देऊन रसीद घेत जाणे यांसिवाय चातुर्मास संकलप बद्दल सालबा साल पावत येणे चि कंठिराइ ९३तिरव्याण्णऊ. होन्न हि सावक प्रौ। पावते करून देत जाणे जाणिजे सदरी वर्षासन व च्यातुर्मासचे ऐवज सहित घेऊन श्री स्वामि यांनि सर्वदा पाठप्रवचनादि सद्व्यासंगवदेवता शेवा बाह्मण संतर्पणा वगैरे सांगोंपांग करून सरकार चे श्रेये प्रार्थना करीत सुरक्षित असतील जाणिजे मरकुम तारीख ११ माहे फेपरवरि संन १८१३ इसवि खत रामाजिपंत मुनषी हजूर.

*ಸದರೀ ಮೇರಿಗೆ ಹೈದರಿ ಸಾವಿರ ವರಹಾ ಪೈಕೀ ಕಮ್ಮಿ ಆದ ತಾರೀಖಿನ ಆರಭ್ಯ ಯಾ ಸಾವಿರ ವರಹಾಕ್ಕೆ ಸರಿಯಾಗಿ ಕಮ್ಮಿ ಆದ್ದು ಕೂಡಿಶಿಕೊಟ್ಟು ಮುಂದೆ ಸಾಲ್ಲಿಯಾನಾ ಹೈದರೀ ಸಾವಿರ ವರಹಾದಮೇರೆಗೆ ಶಿವಾಯಿ ಕಂಟಿರಾಯಿ ತೊಂಬತ್ತು ಮೂರು ವರಹಾ ಸಹಾ ಕೊಡುತ್ತಾ ಬರುವದು. ಶ್ರೀಕೃಷ್ಣ.

---

*ಇದು ಶ್ರೀಮನ್ಮಹಾರಾಜರವರ ಖಾಸ್ ಪರವಾಗಿದೆ.

೪೦೩. ನಿರೂಪ :—ಸ್ವಭಾನು, ಅಧಿಕ ಚೈತ್ರ ಶು. ೭, ಶಾ. ಶ. ೧೭೪೫, ಕ್ರಿ. ಶ. 1823.

ಶ್ರೀ

| श्री चामराज वडेर<br>तनुज कृष्णराज वडेर |
|---|

ಕೃಷ್ಣರಾಜವಡಯರವರು——

ಚಿತ್ರಭಾನು ಸಂವತ್ಸರದ ಅಧಿಕ ಫಾಲ್ಗುಣ ಶುದ್ಧ ೭ ಬುಧವಾರದಲ್ಲೂ ಶ್ರೀಮತ್ತು॥ ॥ ಅರಮನೇ ಶೀಮೋಗಡಿಗಳ ಕಿಲ್ಲೇದಾರ ಸಾಇರ ಇಲಾಖೆಯವರಿಗೆ, ಸಹ ಬರಶಿಕಳುಹಿಸಿದ ನಿರೂಪ ಅದಾಗಿ ಕೂಡ್ಲಿ ಶೃಂಗೇರಿ ಮಠದ ಖರ್ಚಿಗೆ ತಕ್ಕಷ್ಟು, ಅಕ್ಕಿ, ಬೇಳೆ, ಹುರುಳಿ ಮುಂತಾದ ನವಧಾನ್ಯದ ಜಿನಸು, ಕಿರಾಣಿ ಜಿನಸು ಸಹಾ ಆಜೂಬಾಜು ತಾಲೂಕಿನಲ್ಲಿ ಖುಷ ಖರೀದಿಮಾಡಿ, ಕೂಡ್ಲಿಗೆ ತರಿಶಿಕೊಳ್ಳು ವದ್ದರಿಂದ ಆ ಜಿನಸು ನಿಮ್ಮ ನಿಮ್ಮ ತಾಲೂಕ ಮಾರ್ಗವಾಗಿ ಬಂದಲ್ಲಿ ಸುಂಕಕ್ಕೆ ಅಟಕಾಯಿಸದೇ ಬಿಡುವದು ಮರಕುಂ ತಾರೀಖು ೧೯ನೆ ಮಾಹೆ ಮಾರ್ಚಿ ಸನ್ನ ೧೮೨೩ನೆ ಯಿಸವಿ ಖತ್ತ ಕೃಷ್ಣಪ್ಪ ಮುನಷಿ ಹುಜೂರ.*

ಶ್ರೀ ಕೃಷ್ಣ.

———

೪೦೪. ನಿರೂಪ :—ತಾರಣ, ಚೈತ್ರ ಶು. ೧೨, ಶಾ. ಶ. ೧೭೪೬, ಕ್ರಿ. ಶ. 1824.

ಶ್ರೀ

| श्री चामराज वडेर<br>तनुज कृष्णराज वडेर |
|---|

ಕೃಷ್ಣರಾಜವಡೆಯರವರು——

ತಾರಣಸಂವತ್ಸರದ ಚೈತ್ರ ಶುದ್ಧ ೧೨ ಸ್ಥಿರವಾರದಲ್ಲೂ ಶ್ರೀಮತ್ತು ॥ ॥ ಶ್ರೀ ಕೂಡ್ಲಿ ಮಠದ ಲಿಂಗಾಶಾಸ್ತ್ರಿಗಳಿಗೆ ಬರಶಿಕಳುಹಿಸಿದ ನಿರೂಪ ಅದಾಗಿ ಬರದ ಅರ್ಜಿ ವಿವರ ಶೃತವಾಯಿತು. ಶ್ರೀಮಠಕ್ಕೆ ಶೇರಿ ಇರುವ ಯುಂಮ್ಮೆಗನಹಳ್ಳಿ ಗ್ರಾಮದ ಯಲ್ಲೇ ಪೈಕಿ ಕೆಲವು ತಮ್ಮದೆಂದು ಆನವಟ್ಟಿ ತಾಲ್ಲೂಕು ಬಾರಂಗೀ ಗ್ರಾಮದ ಗೌಡ ತಂಟೆ ಮಾಡುಥಾನೆ. ಪೂರ್ವದಲ್ಲಿ ಇದೇಮೇರೆ ತಂಟೇಮಾಡಿದ ಕಾರಣ, ನಗರದಲ್ಲೂ ರಾಮರಾಯರು ಇದ್ದಾಗ್ಯೆ ವಿಚಾರಿಶಿ ಫೈಸಲು ಮಾಡಿ, ಫೈಸಲು ನಾಮೆ, ಈ ಗ್ರಾಮದ ಗೌಡನ ಕಡಿಂದ ಮಠಕ್ಕೆ ಬಿನ್ನವತ್ತಳೆ ಸಹಾ ಬರಶಿಕೊಟ್ಟು ಭೂಮಿ ತಂಟೇಮಾಡದಂತೆ, ಮಾಡಿ ಇದ್ದರು. ಈಗ ಪುನಃ ತಂಟೇ ಮಾಡುತಾ ನೆಂದು, ಬರದ್ದು ಸರಿಯಷ್ಟೆ? ಸಾಬಕ್ಕು ಫೈಸಲಾದ್ದರ ದಾಖಲೆ, ದಿವಾನ್ ಕಛೇರೀಲಿ ಪರಾಂಬರಿಶಿ ಮೊದಲು ಫೈಸಲು ಮಾಡಿಶಿ ಇರುವ ಮೇರಿಗೆ ತಂಟೇ ಮಾಡದೆ ನಡೆದುಕೊಳ್ಳುವಂತೆ ಆನವಟ್ಟಿ ಅಮೀಲ್ ಚಲ್ಲುವಯ್ಯಗೆ ನಿರೂಪ ಅಪ್ಪಣೆ ಕೊಡಿಶಿ ಇದೆ. ಆಮೇರೆ ಬಂದೋಬಸ್ತು ಮಾಡಿಕೊಟ್ಟಾನು. ತಿಳುವದು. ಮರಕುಂ ತಾರೀಖು ೧೦ನೇ ಮಾಹೆ ಯೇಪ್ರೇಲ್ ಸನ್ನ ೧೮೨೪ನೆ ಯಿಸವಿ ಖತ್ತ ಕೃಷ್ಣಪ್ಪ ಮುನಷಿ ಹುಜೂರು.

ಶ್ರೀ ಕೃಷ್ಣ.

———

* ಈ ಲೇಖನದ ದಿವಸವು ಕೊನೆಯಲ್ಲಿ ಬರೆದ ತಾರೀಖಿನಂತೆ (೧೯-೩-೧೮೨೩) ಸ್ವಭಾನು ಸಂವತ್ಸರದ ಅಧಿಕ ಚೈತ್ರ ಶು. ೭ ಬುಧವಾರವಾಗುತ್ತೆ. ಲೇಖಕರ ಪ್ರಮಾದದಿಂದ ಚಿತ್ರಭಾನು ಸಂವತ್ಸರದ ಅಧಿಕ ಫಾಲ್ಗುಣ ಶುದ್ಧ ೭ ಎಂದು ಬರೆಯಲ್ಪಟ್ಟಿದೆ.

೪೦೫. ನಿರೂಪ :—ವಿಕೃತಿ, ಮಾರ್ಗಶಿರ ಶು. ೧೪, ಶಾ. ಶ. ೧೭೫೨, ಕ್ರಿ. ಶ. 1830.

ಶ್ರೀ

श्री चामराज वडेर
तनुज कृष्णराज वडेर

ಕೃಷ್ಣರಾಜವಡೆಯರವರು—

ವಿಕೃತಿಸಂವತ್ಸರದ ಮಾರ್ಗಶಿರಶುದ್ಧ ೧೪ ಸೋಮವಾರದಲ್ಲೂ ಶ್ರೀಮತ್ತು ‖ ‖ ನಗರದಫೌಜುದಾರ ಕೃಷ್ಣರಾಯಗೆ ಬರಶಿಕಳುಹಿದ ನಿರೂಪ ಅದಾಗಿ ಚನ್ನಗಿರಿ ಬಸವಾಪಟ್ಟದ ರೈತರಿಗೆ ಕೂಟದವರು ವ್ಯಾಸನತೋಳು ನಂದೀಕೋಲು ಮೆರವಣಿಗೆ ನಿಮ್ಮ ತಾಲೂಕಿನಲ್ಲಿ ಮಾಡತಕ್ಕ ಬಗ್ಗೆ ವಿಶಿಷ್ಟಜನ ಜವಾಯಿಸಿಕ್ಕೊಂಡು ಸಾಮಾನು ಶಿದ್ಧಮಾಡಿಕೊಳ್ಳುವಂತೆ ಕಾಗದ ಬರೆದ ವಿವರ ಹುಜೂರು ಶೃತವಾದ್ದರಿಂದ ಕಟ್ಲೇಮಾಡಿಶಿ ಇಥೆ. ಈ ಮೇರೆ ಮೊಂಡುತನಗಳ ಮಾಡಿ ಚಿತಾಯಿಸಿದಂಥಾವರಿಗೆ, ಮಬ್ಬೊಬ್ಬರೂ ಗೊತ್ತಾದವರ ಅಡಿದ್ದುಗಲು ಕೊಡುವದು. ತಾರೀಖು ೨೯ನೆ ಮಾಹೇ ನವಂಬರ ೧೮೩೦ ನೆ ಇಸವಿ. ಖತ್ತು ಸುಬ್ರಾವ್ ಮುನಿಷಿ ಹುಜೂರ ತಾಜಾಕಲಂ ಮುಂದೆ ಇಂಥಾ ಕೆಲಸಮಾಡದಂತೆ ಚೆನ್ನಾಗಿ ಬಂದೋಬಸ್ತು ಮಾಡಿ ಆ ವಿವರಕ್ಕೆಲ್ಲಾ ಅರ್ಜಿ ಬರೆದು ಕಳುಹಿಸುವುದು ತಾಸದರ. ಶ್ರೀ ಕೃಷ್ಣ

———

೪೦೬. ಲೇಖನ :—ಶಾರ್ವರಿ, ಚೈತ್ರ ಶು. ೨, ಶಾ. ಶ. ೧೭೬೨, ಕ್ರಿ. ಶ. 1840.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ, ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯವಿಛ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ, ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾದಕ, ಸಕಲ ನಿಗಮಾಗಮಸಾರಹೃದಯ ವೈದಿಕಮಾರ್ಗ ಪ್ರವರ್ತಕ ಸರ್ವತಂತ್ರಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ಣಾಟಕಸಿಂಹಾಸನಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿ ರಾಜಗುರು ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ, ಋಷ್ಯಶೃಂಗ ಪುರವರಾಧೀಶ್ವರ, ಶೃಂಗೇರಿ ಶ್ರೀವಿದ್ಯಾಶಂಕರ ದೇವ ದಿವ್ಯಶ್ರೀಪಾದಪದ್ಮಾರಾಧಕರಾದ ಶೃಂಗೇರೀ ನರಶಿಂಹಭಾರತೀಸ್ವಾಮಿನಾಂ ಕರಕಮಲ ಸಂಜಾತ ಶೃಂಗೇರಿ ಶ್ರೀಶಂಕರಭಾರತೀಸ್ವಾಮಿನಾಂ ಚರಣ ಸನ್ನಿಧಿಂ ಪ್ರತಿ.

ಶ್ರೀಮತ್ಪ್ರಿಯಶಿಷ್ಯ ಕೃಷ್ಣರಾಜಮಹೀಪತಿ ಕೃತಪ್ರಣತಿ ಪರಂಪರಾಪೂರ್ವಕ ವಿಜ್ಞಾಪನಾ ಶಾರ್ವರೀಸಂವತ್ಸರದ ಚೈತ್ರ ಶು ೨ ಭಾನುವಾರದವರಿಗೆ ಶ್ರೀಗಳವರ ಚರಣಾನುಗ್ರಹದಿಂದ ನಾವು ಕ್ಷೇಮದಲ್ಲಿದ್ದೇವೆ. ಶ್ರೀಗಳವರಿಗೆ ನಿರಂತರನಿರಂತರಾಯವಾಗಿ ತಪಸ್ಸಾಮ್ರಾಜ್ಯಾಭಿವೃದ್ಧಿಯಾಗುವ ಬಗ್ಗೆ ಆಗಾಗ್ಗೆ ಆಶೀರ್ವಾದ ರೂಪ ಶ್ರೀಮುಖವನ್ನು ಅನುಗ್ರಹಿಸುವಂತೆ ಮಾಡಿಸಬೇಕು ಸಾಂಪ್ರತ.

ಶ್ರೀಮಠದಿಂದ ನಮಗೆ ಶ್ರೀಮುಖವನ್ನನುಗ್ರಹಿಶಿ ಶಾಲುಜೋಡಿ ಸಹಿತವಾಗಿ ವೇದಮೂರ್ತಿ ಅನಂತಶಾಸ್ತ್ರಿಗಳ ಕೈಲಿ ಅಪ್ಪಣೆಕೊಡಿಶಿಕಳುಹಿಸಿ ಇದ್ದದ್ದು, ಸರಿಯಷ್ಟೆ? ಈಗ ಶ್ರೀಗಳವರ ಸನ್ನಿಧಿಗೆ ವೇದಮೂರ್ತಿ ಅನಂತ ಶಾಸ್ತ್ರಿಗಳಕ್ಕೈಲಿ ಶಹಲು ಜೋಡಿಯನ್ನು ಅಪ್ಪಣೆಕೊಟ್ಟು ಕಳುಹಿಸಿ ಇಥೆ. ಸ್ವೀಕರಿಸಿದ ಬಗ್ಗೆ ಶ್ರೀಮುಖವನ್ನನುಗ್ರಹಿಸಬೇಕು. ಶ್ರೀಮಠಕ್ಕೆ ಆನೆ ಅವಶ್ಯಕವಾಗಿ ಆಗಬೇಕೆಂಬದಾಗಿ ಶ್ರೀಗಳ ಚಿತ್ತದಲ್ಲಿರುವ ವಿವರ ವೇ‖ ಅನಂತಶಾಸ್ತ್ರಿಗಳು ಶೃತಪಡಿಶಿ ಇಧಾರೆ. ಕೂಡ್ಲೆ ಶ್ರೀಮಠಕ್ಕೆ ಒಂದು ಆನೆಯನ್ನು ಅಪ್ಪಣೆ ಕೊಡಿಶಿ ಶ್ರೀಮಠಕ್ಕೆ ಬಂದು ತಲಪುವಂತೆ ಕಳುಹಿಸಿಕೊಡುತ್ತಾ ಇಥೆ.

ಇಂತಿ ಸಾಷ್ಟಾಂಗಪೂರ್ವಕ ವಿಜ್ಞಾಪನಾ

———

೪೦೭. ಲೇಖನ:—ಪ್ಲವ, ಮಾಘ ಶು. ೧೦, ಶಾ. ಶ. ೧೭೬೪, ಕ್ರಿ. ಶ. 1842.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತಿ ಅನಾದ್ಯವಿಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮಸಾರಹೃದಯ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ, ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗಪುರವರಾಧೀಶ್ವರ ಶೃಂಗೇರಿ ಶ್ರೀವಿದ್ಯಾಶಂಕರದೇವದಿವ್ಯ ಶ್ರೀಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ನರಸಿಂಹಭಾರತೀ ಸ್ವಾಮಿನಾಂ ಕರಕಮಲ ಸಂಜಾತ ಶೃಂಗೇರಿ ಶ್ರೀಶಂಕರಭಾರತಿ ಸ್ವಾಮಿನಾಂ ಚರಣ ಸನ್ನಿಧಿಂ ಪ್ರತಿ

ಶ್ರೀಮತ್ಪ್ರಿಯಶಿಷ್ಯ ಕೃಷ್ಣರಾಜ ಮಹೀಪತಿ ಕೃತಪ್ರಣತಿಪರಂಪರಾ ಪೂರ್ವಕ ವಿಜ್ಞಾಪನಾ ಪ್ಲವಸಂವತ್ಸರದ ಮಾಘ ಶುದ್ಧ ೧೦ ಭಾನುವಾರದವರಿಗೆ ಶ್ರೀಗಳವರ ಚರಣಾನುಗ್ರಹದಿಂದ ನಾವು ಕ್ಷೇಮದಲ್ಲಿದೇವೆ. ಶ್ರೀಗಳವರು ನಿರಂತರ ನಿರಂತರಾಯವಾಗಿ ತಪಃಸ್ರಾಮಾಜ್ಯವನ್ನು ನೆರವೇರಿಸುವ ಬಗ್ಗೆ ಆಗಾಗ್ಗೆ ಆಶೀರ್ವಚನ ರೂಪ ಶ್ರೀಮುಖವನ್ನನುಗ್ರಹಿಸುವಂತೆ ಮಾಡಿಸಬೇಕು. ಸಾಂಪ್ರತ. ಈ ಸಂವತ್ಸರದ ಚಾತುರ್ಮಾಸ್ಯವ್ರತ ಸಂಕಲ್ಪವನ್ನು ಮಾಡಿ ವೆ. ಹೊನ್ನಪ್ಪಶಾಸ್ತ್ರಿಗಳ ಸಂಗಡಾ ವ್ಯಾಸಪೂಜಾಂಗಫಲ ಮಂತ್ರಾಕ್ಷತೆ ವಸ್ತ್ರಸಹ ಅಪ್ಪಣೆ ಕೊಡಿಸಿ ಕಳುಹಿಶಿರುವದಾಗಿಯೂ ಶ್ರೀಮಠಕ್ಕೆ ಅನುಕೂಲಿಸತಕ್ಕ ಕಾರ್ಯಗಳನ್ನು ವೆ. ಹೊನ್ನಪ್ಪಶಾಸ್ತ್ರಿಗಳು ತಿಳಪಡಿಸುವುದಾಗಿಯೂ ಸಹ ಅಪ್ಪಣೆ ಕೊಡಿಶಿದ ಶ್ರೀಮುಖ ಫಲ ಮಂತ್ರಾಕ್ಷತೆ ವಸ್ತ್ರಸಹಾ ಬಂದು ಮುಟ್ಟಿ ಪ್ರಸಾದ ಮಂತ್ರಾಕ್ಷತೆಯನ್ನು ಶಿರಸಾವಹಿಸಿ ಕೃತಾರ್ಥರಾದೆವು. ಈಗ ಶ್ರೀಗಳವರ ಸನ್ನಿಧಾನಕ್ಕೆ ಒಪ್ಪಿಸತಕ್ಕ ಬಗ್ಗೆ ಶಾಲಜೋಡಿಯನ್ನು ವೇದಮೂರ್ತಿ ಹೊನ್ನಪ್ಪಶಾಸ್ತ್ರಿಗಳ ಸಂಗಡ ಅಪ್ಪಣೀ ಕೊಡಿಸಿ ಕಳುಹಿಶಿ ಇದೀತು. ಸ್ವೀಕರಿಸುವಂತೆ ಮಾಡಿಸಬೇಕು. ಕಡಮೇ ಶ್ರೀಮಠಕ್ಕೆ ಅನುಕೂಲಿಸತಕ್ಕ ಕಾರ್ಯಗಳ ವಿದ್ಯಮಾನವೆಲ್ಲಾ ವೇ. ಹೊನ್ನಪ್ಪಶಾಸ್ತ್ರಿಗಳು ಶೃತಪಡಿಸುವದ್ದರಿಂದ ವೇದ್ಯವಾಗುತ್ತಾ ಇದೆ. ವಿಶೇಷ ವಿಜ್ಞಾಪನೆ ಮಾಡತಕ್ಕದ್ದು ಏನು ಇಥೆ.

ಇಂತಿ ತ್ರಿಕಾಲದಲ್ಲಿ ಶಿರಸಾಷ್ಟಾಂಗವಾಗಿ ನಮಸ್ಕರಿಶಿ ಮಾಡುವ ಬಿನ್ನಹಾ ಸ್ವಾಮಿ.

ಶ್ರೀ ಕೃಷ್ಣ.

---

೪೦೮. ಲೇಖನ:—ಸಾಧಾರಣ, ಮಾರ್ಗಶಿರ ಶು. ೧೨, ಶಾ. ಶ. ೧೭೭೩, ಕ್ರಿ. ಶ. 1850.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠತಪಶ್ಚಕ್ರವರ್ತ್ಯನಾದ್ಯವಿಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥಪ್ರಕಾಶಕ ಸಾಂಖ್ಯತ್ರಯ ಪ್ರತಿಪಾಲಕ ಸಕಲನಿಗಮಾಗಮಸಾರಹೃದಯ ವೈದಿಕಮಾರ್ಗ ಪ್ರವರ್ತಕ, ಸರ್ವತಂತ್ರ ಸ್ವತಂತ್ರಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀ ಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀವಿದ್ಯಾಶಂಕರ ದೇವದಿವ್ಯ ಶ್ರೀಪಾದಪದ್ಮಾರಾಧಕ ಶೃಂಗೇರೀ ನರಶಿಂಹಭಾರತೀ ಸ್ವಾಮಿನಾಂ ಕರಕಮಲ ಸಂಜಾತ ಶೃಂಗೇರಿ ಶ್ರೀಶಂಕರಭಾರತೀ ಸ್ವಾಮಿನಾಂ ಚರಣ ಸನ್ನಿಧಿಂ ಪ್ರತಿ.

ಶ್ರೀಮತ್ಪ್ರಿಯಶಿಷ್ಯ ಕೃಷ್ಣರಾಜ ಮಹೀಪತಿ ಕೃತಪ್ರಣತಿಪರಂಪರಾ ಪೂರ್ವಕ ವಿಜ್ಞಾಪನಾ ಸ್ವಾಮೀ ಸಾಧಾರಣ ಸಂವತ್ಸರದ ಮಾರ್ಗಶಿರ ಶು. ೧೨ ಸೋಮವಾರದವರಿಗೆ ಶ್ರೀಗಳವರ ಚರಣಾನುಗ್ರಹದಿಂದ ಸರ್ವರೂ ಸಹಾ ನಾವೂ ಕ್ಷೇಮದಲ್ಲಿದ್ದೇವೆ. ಶ್ರೀಗಳವರು ನಿರಂತರ ನಿರಂತರಾಯವಾಗಿ ತಪಸ್ಸಾಮ್ರಾಜ್ಯವನ್ನನುಭವಿಸುತ್ತಾ ಬರುವಬಗ್ಗೆ ಆಗಾಗ್ಗೆ ಅಶೀರ್ವಾದರೂಪ ಶ್ರೀಮುಖವನ್ನನುಗ್ರಹಿಸುವಂತೆ ಮಾಡಿಸಬೇಕು ಸಾಂಪ್ರತ.

ಈ ಸಂವತ್ಸರದ ಆಶ್ವೀಜ ಶುದ್ಧ ೧೦ ದಿವಸ.ವೇ. ರಂಗಾಶಾಸ್ತ್ರಿಗಳ ಸಂಗಡ ಅಪ್ಪಣೀ ಕೊಡ್ಸಿ ಕಳುಹಿಸಿರುವ ಶ್ರೀಮುಖ ಬಂದು ಮುಟ್ಟಿ ಶಿರಸಾವಹಿಶಿ ಫಲಮಂತ್ರಾಕ್ಷತೆಯನ್ನು ಸ್ವೀಕರಿಸಿ ಕೃತಾರ್ಥನಾದೆನು. ಶ್ರೀಗಳವರು ನಂಜನಗೂಡು ಪ್ರಾಂತಕ್ಕೆ ಚಿತ್ತೈಸಿ ಕಪಿಲಾನದೀ ಸ್ನಾನಮಾಡಿ ಶ್ರೀಕಂಠೇಶ್ವರಸ್ವಾಮಿಯ ದರ್ಶನವನ್ನು ತೆಗೆದು ಕೊಂಡು ಮೈಸೂರಿಗೆ ಬಂದು ನಮಗೆ ಶ್ರೀವಿದ್ಯಾಶಂಕರ ದೇವರ ದರ್ಶನವನ್ನು ಮಾಡಿಸಬೇಕೆಂಬ ಇಛ್ಛೆ ಇರುವ ದಾಗಿ ಶ್ರೀಮುಖದಲ್ಲ ಅನುಗ್ರಹಿಶಿರುವುದು ಸರಿಯಷ್ಟೆ? ಪೂರ್ವದಲ್ಲೂ ಈ ಸಂಸ್ಥಾನಕ್ಕೆ ಶ್ರೀಗಳವರು ದಯ ಮಾಡಿ ಇದ್ದದ್ದು ಚಿತ್ತಕ್ಕೆ ವೇದ್ಯವೇ ಇದೆಯಷ್ಟೆ? ಈಗಲೂ ಶ್ರೀಗಳವರ ಚಿತ್ತದಲ್ಲ ಇರುವ ಮೇರಿಗೆ ನಂಜನಗೂಡಿಗೆ ದಯಮಾಡಿ, ಕಪಿಲಾನದಿಸ್ನಾನಮಾಡಿ, ಶ್ರೀಕಂಠೇಶ್ವರ ಸ್ವಾಮಿಯ ದರ್ಶನವನ್ನು ತೆಗೆದುಕೊಂಡು ಮೈಸೂರಿಗೆ ದಯಮಾಡಿ, ನಮಗೆ ಶ್ರೀ ವಿದ್ಯಾಶಂಕರದೇವರ ದರ್ಶನವನ್ನು ಮಾಡಿಸಬೇಕೆಂಬುದಾಗಿಯೂ ನಮಗೂ ಇಛ್ಛೆ ಇರುವದ್ದರಿಂದಾ ಆ ಮೇರೆ ಮಾಡಿ ಚಿತ್ತೈಸ ಬಹುದಾದ ವಿವರ ಚಿತ್ತಕ್ಕೆ ಶೃತವಿರತಕ್ಕ ಬಗ್ಗೆ ವಿಜ್ಞಾಪನೇ ಮಾಡಿ ಇಧೆ ಸ್ವಾಮಿ ॥ಬಿನ್ನಹಾಸ್ವಾಮೀ॥.

———

## G. ಚೀಫ್ ಕಮೀಷನರ ಅಡಳಿತಕಾಲ

೪೦೯. ನಿರೂಪ :—ಶಾ. ಶ. ೧೭೫೪, ಕ್ರಿ. ಶ. 1832.

श्री

कमीषनर इलाखा सरकार कुंपणी इंग्रेज बहादूर प्रांत मैसूर यानि

नंदन संवत्सर कार्तिक शुद्ध १४ रोज नगर फौजदार भाउराव यांसि निरोपिले लेखन आज्ञा ऐसेजे कूडलगी मठवालेनिहोन्न आपले मठासवर्तमानि सरकार हासिल सिवाये धर्मार्थ वाणि होळे होन्नूर होन्नाळी वगैर तालूकेंत रुसूम करून दिल्हे असणेचे खर संवत्छरासि अमानि सबब पावले नाहि सिवाये होळे होन्नूरांत दाहामण संदल पावत होत तेही पावले नाहि म्हणून यादि दिल्हे ते पावले आहे चौकसी करून जाहीर करणेस हुकूम अले प्रकारे तालूकेस लिहून पाठविलेत्यासि अमीलानि दरियाफ्ति करून पटिपाठविले प्रकारे . . . . . .

मठास वर्तमानि धर्मार्थदेणेचे रुसूम सरकारचे हासल वसूल होऊन येताना रुसूमचे ऐवजा हि वसूल होऊन विकृति संवत्छर मिनचूक मठांस पावले आहे खरसंवत्छरासि सायर अमानि होते करिता रुसूमचे ऐवज वसूल होऊन तालूकेस दाखलजाहले आहे ।

२ ७॥ ३ ॥ कवले दुर्ग सायेरासदाखल
सिवमोगा होळेहोन्नूरतालूकेंत खर सवत्छ
रासि वसूल जाहले रुसूमपैकि सायर इला
खा अमिलांत पावणेचे.

५-११ $\frac{3}{4}$ होळे होन्नूर आंजनेयस्वामीस पावणैच.

२२ ॥। कुडलगी मठासपावणैच.

---

२७ ॥ ३ ॥। सि. तपसील.

११-११—खर संवत्छरास होळे होन्नूर कडेंत अमानत पावती.

१६ ॥ १ । आइदा पावणेचे सर सायेर मामलेदार पावती.

———

२७॥३॥।

५२॥ २-७—तालूके जातेहून पावणेचे खर संवत्सर सि. अमानि होते सबब
२९॥-२-७ चन्नगिरि तालूके हून हुद्दवली प्रकारे.
२३—होन्नाळी तालूके हून.

———————

५२॥२-७

———————

८०॥०।।।-।॥

१. होळे होन्नूर तालूकेहून कूडलगी मठास चाहर कमि समचे संदल दरसाल १० दाहामण देतेसे महाराज राज्या साहेब यांचे हुकूम फौज कचेरीस सादर जाहले प्रकारे लागायत पासून विक्रति संवत्छर मिन्चूक पावत आले आहे याचा दाखला फौज कचेरींत ही आहे खर संमत्छरासि पावणेचि आहे दोनी कलमा सहीत तपशीलवार कैफियत् पद्दिही पाठविलि आहे हुकुम सादर जाहले प्रकारे अमलेंत आणीत असो म्हणून सिवमोगा सा॥ फौजदार श्रीनिवासराव यांनि छ. स. अगोस्ट तारीखेंत अर्जि केले आहे ते वरून हुकुंम केले जातजे सदरी आइदापावणेचे रुसूम बाबत अवैज ६९-३१-।॥ इज्यार दार कडेस असलेस त्या कडून देवावे सरकारान्त असलियाहि देवावे मामूल प्रकारे अरिकराव संदल हि नंदन संवत्छरास द्यावे जाणिजे ता॥ छ. ८ माहे नवंबर सन्न १८३२ इसवी खत बाळाजिराव मुनषि दरजागा बेंगळूर .

———

೪೧೦. ನಿರೂಪ:—ವಿಜಯ, ಜ್ಯೇಷ್ಠ ಶು. ೧೦, ಶಾ. ಶ. ೧೭೫೫, ಕ್ರಿ. ಶ. 1833.



ಕಮಿಷನ್ನ ರಾಣೀ ಇಲಾಖ ಸರಕಾರ ಕುಂಪಣಿ ಬಹದ್ದೂರ್ ಪ್ರಾಂತ, ಮೈಸೂರವರು.

ವಿಜಯ ಸಂವತ್ಸರದ ಜ್ಯೇಷ್ಠ ಶು. ೧೦ ರಲ್ಲೂ॥ ॥ ಮೈಸೂರು ಶೀಮೆ ಗಡಿಗಳ ಅಮೀಲು ಕಿಲ್ಲೇದಾರ್ರಿಗೆ, ಸಾಯರೂ ಇಲಾಖೆಯವರಿಗೆ, ಸಹ ಅಪ್ಪಣೆ ಕೊಡಿಸಿದ ನಿರೂಪ ಅದಾಗಿ:

ಕೂಡಲೀ ಶೃಂಗೇರಿ ಮಠಕ್ಕೆ ಅನ್ನಸಂತರ್ಪಣೆ ಬಗ್ಗ್ಯೆ ಆತರಫ್ ತಾಲೂಕ ಇಂದಾ ಅಕ್ಕಿ ಬ್ಯಾಳೀ ವಗೈರೆ. ಹವಾಜಿನಸು ಜವಳೀ ಮುಂತಾದ್ದು ಖರೀದಿಮಾಡಿ ತೆಗೆದುಕೊಂಡು ಮಠಕ್ಕೆ ತರುವಲ್ಲಿ ಸುಂಕಕ್ಕೆ ಅಡ್ಡೀಮಾಡದಂತೆ, ೧೮೩೨ನೆಯ ಯಿಸವಿ ಫೇಬರವರೀ ೫ ತಾರೀಖಿನಲ್ಲಿ ಹಜೂರ ರಹದಾರೀ ಆಗಿ ಇರುವಲ್ಲಿ ಪುನಃ ಸ್ಥಳದಲ್ಲಿ ಕಿರಕೋಳು ಮಾಡುತ್ತಾರೆಂದು ಯಲ್ಲಪ್ಪಶಾಸ್ತ್ರಿಗಳು ಹಜೂರಿಗೆ ಅರ್ಜಿ ಬರಕೊಂಡದ್ದರಿಂದ, ಅಪ್ಪಣೀ ಕೊಡಿಸಿ ಇದ್ದೀತು. ಮಠಕ್ಕೆ ಆತರಫ್ ತಾಲ್ಲೂಕಿನಿಂದ ವಾಫೀಜಿನ್ನಸು, ವಜಿಸೀಜಿನ್ನಸು, ಜವಳೀ ಮುಂತಾದ್ದು ಮಠಕ್ಕೆ ತಕ್ಕದ್ದು ಮಠದವರು ತಕ್ಕೊಂಡು ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಜಿನ್ನಸುಗಳು ಸಾಗಿಸಿಕ್ಕೊಂಡು ಬಂದಲ್ಲಿ ಸುಂಕಕ್ಕೆ ಅಡಕಾಯಿಸದೇ ಮಾಮೂಲ ಮೇರೆಗೆ ಬಿಡುವುದು. ಬತಾರೀಖು ಥಂದಾ ೨೮ ಮಾಹೆ ಮೆಸ್ ೧೮೩೩ ನೆ ಯಿಸ್ವಿ ದರ ಮೊಕ್ಕಾಂ ಬೆಂಗಳೂರು. ಖತ್ತು ಸುಬ್ಬರಾವ್ ಮುನಷಿ ಹುಜೂರು.

———

೪೧೧. ನಿರೂಪ :—ವಿಜಯ, ಕಾರ್ತೀಕ ಶು. ೧, ಶಾ. ಶ. ೧೭೫೬, ಕ್ರಿ. ಶ. 1833.



ಕಮಿಷನ್ ರಾಣೀ ಯಿಲಾಖೆ ಸರಕಾರ ಕುಂಪಣೀ ಬಹದ್ದರ್ ಪ್ರಾಂತ, ಮೈಸೂರವರು.

ವಿಜಯ ಸಂವತ್ಸರದ ಕಾರ್ತೀಕ ಶು ೧ ರಲ್ಲೂ॥ ॥ ಮೈಸೂರು ಶೀಮೇ ಗಡಿಗಳ ಅಮೀಲ್ ಕಿಲ್ಲೇದಾರಿಗೆ ಸಹಾ ಬರಶಿ ಕಳುಹಿಶಿದ ನಿರೂಪಾ ಅದಾಗೀ ॥ ಶ್ರೀ ಕೂಡ್ಲೀ ಶೃಂಗೇರಿ ಸ್ವಾಮಿಗಳವರು ದೇಶಸಂಚಾರಾರ್ಥವಾಗಿ ಶೀಮೇ ಮೇಲೆ ಹೋಗುವದ್ದರಿಂದಾ, ಯಿವರ ಅಮರಹಾ ಇರುವ ಬ್ರಾಹ್ಮಣರು ಜನಾ ೧೦೦, ಶೂದ್ರ ಜನಾ ೧೩೦, ಪಾಲಖೆ, ಮ್ಯಾನೇ ೩, ಆನೆ ೫, ಕುದುರೆ ೪೦, ಎತ್ತು ೪೦, ವಂಟೆ ೭, ಬಂದೂಕ ೧೫, ಕತ್ತಿ ೧೫, ಈ ಮೇರಿಗೆ ಇರುವದ್ದರಿಂದ ಇವರು ಸಂಚಾರಾರ್ಥವಾಗಿ ಶೀಮೇ ಮ್ಯಾಲೆ ಹೋಗುವಲ್ಲಿ ಮಾಮೂಲಮೇರಿಗೆ ಉಕಡಕಣಿವೆಗಳಲ್ಲಿ ಅಟಕಾಯಸದೇ ಬಿಡುವುದು. ಇವರು ವಾಜಮೀ ಖರೀದಿಗೆ ಬೇಕೆಂದಾ ಸಾಮಾನನ್ನೂ ಕ್ರಯದ ಬಗ್ಗ್ಯೆ ಹಣ ಇವರಿಂದ ಮಾಲೀಕರಿಗೆ ಕೊಡಿಶಿ ಕ್ರಯಕ್ಕೆ ಕೊಡಿಸುವುದು. ಬ. ತಾ. ೧೨ನೇ ಮಾಹೇ ನವಂಬರ್ ಸ೯ ೧೮೩೩ನೆ ಯಿಸವಿ, ಖತ ರಾಮರಾವ ಮಳವಳ್ಳಿ ಮುನಷಿ ಹುಜೂರು. ದರಜಾಗ, ಬೆಂಗಳೂರು.

———

೪೧೨. ನಿರೂಪ :—ಜಯ, ಶಾ. ಶ ೧೭೫೭, ಕ್ರಿ. ಶ. 1835.



ನಗರತುಕುಡೀ ಸೂಪ್ರಿಂಟೆಂಡೆಂಟ್ ಯಿಷ್ಟೋಕಸಾಹೇಬ, ಬಹದ್ದೂರವರು.

ಸ೯ ೧೮೩೫ ನೇ ಜಯ ಸಂವತ್ಸರದ ಪೆಬರವರೀ ತಾರೀಖು ೭ರಲ್ಲೂ ಶೃಂಗೇರಿ ಕೂಡಲೀ ಮಠದವರ ಕಡೆ, ನರಸಿಂಹಭಟ್ಟಗೆ ಬರಶಿಕೊಟ್ಟ ಜೋಡೀಗ್ರಾಮದ ಪಟ್ಟೇ ಅದಾಗಿ, ತರೀಕೆರೆ ತಾಲ್ಲೂಕು ಚಿಕ್ಕತ್ತೂರುಮಾಗಣಿ ಪೈಕಿ ದೇಂಪುರದಗ್ರಾಮ, ಕೂಡಲೀ ॥ ॥ ಶೃಂಗೇರಿ ಮಠಕ್ಕೆ ಪೂರ್ವದಾರಭ್ಯ ಜೋಡಿ ನಡೆದು ಬರುವದ್ದರಿಂದ ಈಗಲೂ ಅಪ್ಪಣೆ ಆದ್ದು ಈ ಗ್ರಾಮದ ಬೇರೀಜು ೩೨–॥೦ ಪೈಕಿ ಜೋಡಿ ಇನಾಮತಿ, ೭–೦–೦ ಜಾತ ಸರಕಾರಕ್ಕೆ ಕೊಡತಕ್ಕದ್ದು. ೨೫–॥ವಕ್ಕೆ ಕಮ್ಮೀ ಆಗಿ ಸರಕಾರಕ್ಕೆ ಕೊಡುತ್ತಾ ಇದ್ದದ್ದರಿಂದಾ, ಜೋಡಿ ಬೇರೀಜು ಪ್ರಕಾರ ಹಣಾ ಕೊಡಬೇಕೆಂಬುದಾಗಿ ಅಪ್ಪಣೆ ಆದ್ದರಿಂದ, ನೀನು ವಪ್ಪಿಕೊಂಡಿರುವುದು––

೧೭–೨॥ ಪ್ರಾಕು ವಿಜಯ ಸಂವತ್ಸರಕ್ಕೆ ಜಮಾಬಂದಿ.

೭||೦೩ ಈ ಸಂವತ್ಸರಕ್ಕೆ ಜೋಡಿ ಪ್ರಕಾರ ವಪ್ಪಿಕೊಂಡಿರುವುದು.

೨೫-೦||೦ ಹೈದರೀ ಇಪ್ಪತ್ತೈದುವರಹ ಅರಧವನ್ನು ಸಾಲಬಸಾಲು ಜೋಡೀ ಆಗಿ ಆಯಾಯ ಖಿಸ್ತು ಬಂದೀ ಪ್ರಕಾರಕ್ಕೆ ಸರಕಾರಕ್ಕೆ ಹಣಾ ಸಂದಾಯ ಮಾಡಿಕೊಟ್ಟು ಗ್ರಾಮಾ ಆಬಾದು ಮಾಡಿಕೊಂಡು ಸರಕಾರದ ಶ್ರೇಯಪ್ರಾರ್ಥನೆಮಾಡಿಕೊಂಡು ಸುಖದಿಂದ ಇರುವದು. ಅನುಭವಮಾಡಿಕೊಂಡು ಬರುವುದು ಯಂಬುದಾಗಿ ಬರಶಿಕೊಟ್ಟ ಜೋಡೀಗ್ರಾಮದ ಪಟ್ಟೇ.

ಸಹಿ ಇಂಗ್ಲೀಷು.

---

೪೧೩. ನಿರೂಪ :—ಶಾ. ಶ. ೧೭೫೯, ಕ್ರಿ. ಶ. 1837.



' ಮೈಸೂರು ದೊರೆಗಳ ಶೀಮೊನಗರ ತುಕಡಿ ಸೂಪರಿಂಟೆಂಡೆಂಡ' ಇಷ್ಟೆಕ್ಸ್ ಸಾಹೇಬ ಬಹದ್ದೂರವರು.

ರಹದಾರಿ ಅಂಕಿ. ಮಾಮಲೇದಾರ ಸುಭೇದಾರ ಪೇಷ್ಕಾರ ಕಿಲ್ಲೇದಾರ, ಠಾಣೇದಾರ, ಸುಂಕದ ಇಲಾಖೆ ವಗೈರೆ ನವಕರ ಪೇಶ್ಯಾಜನರಿಗೆ ಮಾಲೂಂಬಾದರಮಿಲ್ಲಾ ಶ್ರೀ ಶೃಂಗೇರಿ ಕೂಡಲೀ ಮಠದ ಶ್ರೀ ಸ್ವಾಮಿಗಳವರು ದೇಶಸಂಚಾರಾರ್ಥವಾಗಿ ಹರಪನಹಳ್ಳಿ ಪ್ರಾಂತ್ಯಕ್ಕೆ ಹೋಗುವದರಿಂದ ಇವರು ನಿಮ್ಮ ನಿಮ್ಮ ತಾಲ್ಲೂಕುಗಳಿಗಾಗಿ ಬಂದಲ್ಲಿ ಮಾಮೂಲ ಮರಿಯಾದೇ ಪ್ರಕಾರಕ್ಕೆ ಕರೆದುಕೊಂಡು ಹೋಗಿ ವಳ್ಳೇ ಸ್ಥಳದಲ್ಲಿ ಇಳಿಸಿ, ಕೂಲಿ ಆಳು, ಬಾಡಿಗೆ ಎತ್ತು ಮುಂತಾದ್ದು ತರಿಶಿ ಕೊಡುವುದು ಮತ್ತು ವಾಜಮಿ ಖರೀದಿಗೆ ಸಾಮಾನು ಕೊಡಿಶಿ ಉಳಕೊಂಡ ಸ್ಥಳದಲ್ಲಿ ಕಳ್ಳಕಾಕರ ಉಪದ್ರವವಾಗದಂತೆ, ರಾತ್ರಿ ಕಾಲದಲ್ಲಿ ಚನ್ನಾಗಿ ಖಬರದಾರೀ ಮಾಡಿಶಿ ಮುಂದೆ ಚಿತ್ತೈಸುವಲ್ಲಿ ರಹದಾರೀ ಬಗ್ಗ್ಯೆ ಗಡಿಯಿಂದ ಮುಂದಿನ ಗಡೀ ಪರ್ಯಂತರ ಜನರನ್ನು ಕೊಟ್ಟು ಯೇನೊಂದೂ ಪುಕಾರೇ ಬಾರದಂತೆ ನಡಕೊಳ್ಳುವುದು. ಬ. ತಾರೀಖು ೬ನೆ ಮಾಹೆ ಫೇಬರವರಿ ಸಂನ್. ೧೮೩೭ ನೇ ಯಿಸವಿ ಮೊಕ್ಕಾಂ ಶಿವಮೊಗ್ಗ.

---

೪೧೪. ನಿರೂಪ :—ಶಾ. ಶ. ೧೭೬೦, ಕ್ರಿ. ಶ. 1838.



ಮೆಹರಬಾನ ದೋಸ್ತಾ ಪುಟ್ಟಶಾಸ್ತ್ರೀ ಶುಭೇದಾರು, ಶ್ರೀಮಠ ಶೃಂಗೇರಿ ಕೂಡ್ಲಿ ಸಲಾಮಹೂ.

ಆಜನಗರ ತುಕಡೀ ಆಕ್ಟಿಂಗ್ ಸೂಪರಿಂಟೆಂಡೆಂಟ್, ಮೆಕ್‌ಲೋಡ ಸಾಹೇಬ ಬಹದ್ದೂರ್‌ರವರು ಸಲ್ಲಾಂ ಅಂಕೀಯಿಂ ತಾರೀಖು ೧೫ ಲ್ಲೂ ಬರಕೊಂಡ ಅರ್ಜಿ ಅಭಿಪ್ರಾಯ ಜಾಹಿರಾಯಿತು. ಶ್ರೀ ಕೂಡ್ಲಿ ಸ್ವಾಮಿಗಳವರು ಶಿವಮೊಗ್ಗೆ ಸಂಚಾರಾರ್ಥವಾಗಿ ಬರುವ ವಿಷಯದಲ್ಲಿ, ಕೆಲವು ತಕರಾರು ಸಂಗತಿಗಳು ನಮೂದಿಯಿಂದಾ ಶೃಂಗೇರಿ

ಮಠದವರ ಕಡೆಯವರು ಸಾಬಕು ಅರ್ಜಿ ಗುಜರಾಯಿಸಿದಂತಾದ್ದಕ್ಕೆ ದರಿಯಾಪ್ತಿ ಆಗಿ ತಾಲೂಕಿಗೆ ಏನಂತಾ, ಅಪ್ಪಣೆ ಆಗಿರತವೆ, ಆ ಸಂಗ್ತಿ ತಿಳಿಕೊಳ್ಳಬೇಕೆಂಬುದಾಗಿಯೂ ಮತ್ತು ಮಾಮೂಲ್ ಪ್ರಕಾರ ಬಿರುದಾವಳಿ ಸಮೇತ ಶ್ರೀ ಸ್ವಾಮಿಗಳು ದಯಮಾಡುವರೆ ಹರಕತ್ತು ಸಂಭವಿಸದ ರೀತಿ ಅಪ್ಪಣೆ ಆಗಬೇಕಾಗಿ ಬರದಿದ್ದಿರಿ. ಯಿದೇ ವಿಷಯವಾಗಿ ಸಾಬಕು ಶೃಂಗೇರಿಯವರ ಕಡೆ ವೆಂಕಾ ಜೋಯಿಸನೆಂಬಾತ, ಶ್ರೀ ಕೂಡ್ಲಿ ಸ್ವಾಮಿಗಳವರು ಮಾಮೂಲಿಗೆ ವ್ಯತಿರಿಕ್ತವಾಗಿ ಬಿರುದಾವಳಿಗಳ ನಿಶಿ ಶಿವಮೊಗ್ಗ ವಗೈರೆ ಕಡೆ ದಯಮಾಡುತ್ತಾರಂತ ಆ ಪ್ರಕಾರ ಆಗದಂತೆ ಅಪ್ಪಣೆ ಆಗಬೇಕಾಗಿ ಬರಕೊಂಡಂಥಾ ಸಂಗತಿ ಸ್ಥಳ ಅಮಲದಾರರ ಮುಖಾಂತರ ದರಿಯಾಫ್ತಿ ಮಾಡಿ ಸುವಲ್ಲಿ, ಶ್ರೀ ಸ್ವಾಮಿಗಳವರು ಬಿರುದಾವಳಿ ಸಮೇತ, ಸಾಬಕು ದಯಮಾಡಿದ ಹಾಗೆ ಕೆಲವು ದಾಖ್ಲೆಗಳಿಂದ ತಿಳಿದ್ದಾಗಿ ವಗೈರೆ ನಂಬರು ೨೭೩ನೇ ಅರ್ಜಿ ತಲುಪಿದ್ದರಿಂದ ಮಾಮೂಲಿಗೆ ವಿರೋಧವಿಲ್ಲದ ರೀತಿ ನಡಸಬೇಕಾಗಿ ಶಿವಮೊಗ್ಗೆ ಅಮಲದಾರರಿಗೆ ನಂಬರು ೨೩೦ನೇ ಹ್ಕೂಂ ಕೊಟ್ಟಿದೆ. ಮಾಮೂಲು ಪ್ರಕಾರ ಶ್ರೀ ಸ್ವಾಮಿಗಳು ಸಂಚಾರಾರ್ಥ ದಯಮಾಡುವಲ್ಲಿ ಯೇನೂ ಅಡ್ಡಿ ಇರುವುದಿಲ್ಲಾ ಈ ಸಂಗತಿ ಶ್ರೀ ಸ್ವಾಮಿಗಳವರ ಸನ್ನಿಧಿಯಲ್ಲಿ ಶೃತಪಡಿಸತಕ್ಕದ್ದದೆ. ತಾರೀಖು ೨೮ನೆ ಜುಲಾಯಿ ಸಂನ್ ೧೮೩೮ನೆ ಯಿಸವಿ ಮೊಕ್ಕಾಂ ಶಿವಮೊಗ್ಗ.

ಈ ಬಳಿ ಮಹರಾಷ್ಟ್ರದಲ್ಲ ಸೈನಿದೆ

ಇಂಗ್ಲೀಷು ಸೈನಿದೆ

---

ಳ೧೫. ನಿರೂಪ:—ಶಾ. ಶ. ೧೭೬೦, ಕ್ರಿ. ಶ. 1838.



ಮೈಸೂರು ದೊರೆಗಳ ಶೀಮೆ, ನಗರ ತುಕಡೀ ಆಗಟಿಂಗ ಸೂಪರಿಂಟಿಂಡೆಂಟು ಮೆಕಲೋಡಾ ಸಾಹೇಬರವರು.

ರಹದಾರಿ ಅಂಕಿ ತ್ತುಕಡೀ ಮಜಕೂರು ತಮಾಮ ತಾಲ್ಲೂಕು ಚೌಕ ಅಮೀಲದಾರರು, ಶಿರಸ್ತೇದಾರರು, ಪೇಷ್ಕಾರು, ಕಿಲ್ಲೇದಾರರು, ಚೌಕದಾರರು ವಗೈರೇರಿಗೆ, ಮಾಲುಂ ಬಾದ್ದರವಿಲ್ಲಾ ಶ್ರೀ ಕೂಡ್ಲಿ ಶೃಂಗೇರಿ ಸ್ವಾಮಿ ಗಳವರು ಮಠಕ್ಕೆ ದಿನಚರಿ ಅನ್ನಸಂತರ್ಪಣೆ ವಗೈರೆ ಬಗ್ಗ್ಯೆ ಬೇಕಾಗುವ ಮಾಫಿ ವಜನೀ, ವ, ಜವಳೀ ಮುಂತಾದ ಹಮಾಂ ಜೀನಸು ಆ ತರಪು ತಾಲ್ಲೂಕುಗಳಿಂಗಾ ತರುವಲ್ಲಿ ಹರಕತ್ತು ಮಾಡದೇ ಹಾಸಲು ಶಿವಾಯಿ ಬಿಡುವದು. ಕಮೀಷನರ ಕಛೇರಿ ವಗೈರೆ ರಹದಾರಿಯಿದ್ದಂತೇ ಆ ಪ್ರಕಾರ ನಡಕೊಳ್ಳದೆ ಹರಕತ್ತು ಮಾಡುತ್ತಾರಾಗಿ, ಆ ಮಠದವರು ಯಾದಾಸ್ತು ಗುಜರಾಯಿಸಿ ಇರುವದ್ದರಿಂದ ಅಪ್ಪಣೆಕೊಟ್ಟು ಇದ್ದಿತ್ತು ಶ್ರೀಮಠಕ್ಕೆ ಆತರಪು ತಾಲ್ಲೂಕುಗಳಿಂದಾ ತರುವಂಥಾ ಸದರೀ ತಮಾಂ ದೀನಸೂಗಳಿಗೆ, ಹಾಸಲು ಶಿವಾಯಿ, ಮಾಮೂಲು ಪ್ರಕಾರ ಬಿಡುವುದು ಬತ್ತಾರೀಖು ೧೩ ನೆ ಆಗೊಸ್ತು ಸಂನ್ ೧೮೩೮ನೆ ಯಿಸವಿ ಮೊಕ್ಕಾಂ ಶಿವಮೊಗ್ಗ.

ಸಹಿ ಮರಾಠಿ

ಸಹಿ ಇಂಗ್ಲೀಷು

---

ಳ೧೬. ನಿರೂಪ:—ಶಾ. ಶ. ೧೭೬೦, ಕ್ರಿ. ಶ. 1839.

ಶ್ರೀ

ಮೆಹರ್‌ಬಾನ್ ದೋಸ್ತಾ ಪುಟ್ಟಶಾಸ್ತ್ರಿ, ಶುಭೇದಾರ, ಕೂಡ್ಲಿ ಶೃಂಗೇರಿಮಠ ಸಲಮಹೂ.

ಚಿತ್ರದುರ್ಗದ ತುಕಡೀ ಸೂಪರ್‌ಟೆಂಡೆಂಟ್ ಕ್ಯಪ್ಟನ್ ಡಾಬ್ಸ ಸಾಹೇಬರವರು, ಸಲ್ಲಾಮು ಅದಾಗಿ ನೀವು ಡಿಶಂಬರ ೩೧ ತಾರೀಖಿನಲ್ಲಿ ಬರದ ವಿವರ ತಿಳಿಯಲಾಯಿತು. ಶ್ರೀ ಸ್ವಾಮಿಗಳವರು ಹೊಸದುರ್ಗದ

ತಾಲ್ಲೂಕಿಗೆ ದಯಮಾಡಿಶಿ ಇರುವಲ್ಲೂ, ಅಲ್ಲಿ ಮಾಮಲೇದಾರನು ಕಮೀಷನ್ನರ ಹಜೂರು ರಹದಾರಿ ಮೇರಿಗೆ ನಡೆಯದೇ ಇದ್ದ ಸಂಗತಿಗಾಗಿ ಜೋರು ಹುಕುಂ ಕೊಡಿಶಿ ಇರುವದ್ದರಿಂದ, ಇನ್ನು ಮೇಲೆ ಯಾವ ಮಾಮಲೇದಾರರೂ ಸದರಿ ಹುಜೂರು ರಹದಾರಿಗೆ ವಿರೋಧವಾಗಿ ನಡೆದಲ್ಲ ಜೋರು ಹುಕುಂ ಕೊಡಿಸಲಾದೀತು. ಕಲಮಿ ಶ್ರೀಗಳವರು ದಯಮಾಡಿಸುವ ಮಾರ್ಗದಲ್ಲಿ, ಛತ್ರದಲ್ಲಿ ಪದಾರ್ಥ ಕೊಡತಕ್ಕ ವಿಷಯಕ್ಕೆ ಕಾಯಿದೆ ಮೇರಿಗೆ ನಡೆದುಕೊಳ್ಳುವಂತೆ ಮಾಮಲೇದಾರಗೆ ಪರಭಾರೆ ಅಪ್ಪಣೆ ಕೊಡಿಶಿ ಇರುವದಾದ ವಿವರ ತಿಳಿದಿರತಕ್ಕುದಾಗಿಥೆ. ಬ ತ್ತಾರೀಖು ೨ನೆ ಮಾಹೆ, ಜನವರಿ ಸ್ನ ೧೮೩೯ ನೆ ಯಿಸವಿ, ಮೊಕ್ಕಾಂ ಕೊಡಗನೂರು.

ಈ ಬಳಿ ಮಹರಾಷ್ಟ್ರದಲ್ಲಿ ಸೈನುಗಳಿವೆ.

ಇಂಗ್ಲೀಷು ಸೈನಿದೆ.

———

### ೪೧೭. ನಿರೂಪ :—ಶಾ. ಶ. ೧೭೬೧, ಕ್ರಿ. ಶ. 1840.

ಶ್ರೀ

ಸಾಹೇಬ ಮೆಹರುಬಾಂ ದೋಸ್ತಂ ಕೂಡ್ಲಿ ಶೃಂಗೇರಿಮಠದ ರಂಗಾಶಾಸ್ತ್ರಿಗಳವರಿಗೆ.

ಅಜಮೆಕ್ಲವಡಸಾಹೇಬ ಅ. ಸೂಪರಿಂಟೆಂಡೆಂಟ್ ತುಕಡಿನಗರ ಸಲಾಂ ಆಂಕ। ತಾ॥ ೧ನೇ ಅಕಟೋಬರು ಸ್ನನ್ ೧೮೪೦ ನೆ ಯಿಸವಿವರಿಗೆ ಶಿವಮೊಗ್ಗಿಯಲ್ಲಿ ಖೈರಿಯತ್ತುಯಿದ್ದೇವೆ. ನಿಮ್ಮ ಯೋಗಕ್ಷೇಮಸಮಾಚಾರಕ್ಕೆ ಬರೆಶಿಕಳುಹಿಸುತ್ತಾ ಬರುವಂತೆ ಮಾಡಿಸುವುದು. ತರುವಾಯ, ಶ್ರೀ ಸ್ವಾಮಿಗಳವರು ಶಿವಮೊಗ್ಗಿಗೆ ಬರಬೇಕೆಂತ ಅಪೇಕ್ಷಿಸುವ ವಿಷಯದಲ್ಲಿ ಶೃಂಗೇರಿಸ್ವಾಮಿಗಳವರ ಕಡೆಯಿಂದಾ, ಬರಕೂಡದು ಎಂಬಹಾಗೆ ವ್ಯವಹಾರ ನಡೆದಿರುವ ಸಂಗತಿಬಗ್ಗೆ ಕೂಡ್ಲಿ ಶ್ರೀಮಠದಿಂದ ನೀವು ತೋರಿಸಲ್ಪಟ್ಟ ದಸ್ತವೈಜಿನಿಂದ ಸ್ವಾಮಿಗಳವರು ಮೊದಲೇ ಈ ಶಿವಮೊಗ್ಗಿಗೆ ಬಂದದಾಗಿಯೂ ಮತ್ತು ಬರಬಹುದೆಂಬ ಹಾಗೆ ತೋರಿ ಬರುತ್ತದೆ. ಶಿವಮೊಗ್ಗಿಗೆ ಬರಕೂಡದೆಂಬ ಹಾಗೆ ಶೃಂಗೇರಿ ಮಠದ ಕಡೆಯಿಂದ ಹಾಜರು ಆದ ವೆಂಕಾಜೋಯಿಸರು ಮುಂತಾದವರು ಏನೊಂದು ದಸ್ತವೇಜು ವ ಬಲವಾದ ಸಬೂಬ ಸಹಾ ಕೊಡಲಿಲ್ಲಾ. ಆದ್ದರಿಂದಾ ಕೂಡ್ಲಿ ಶ್ರೀಸ್ವಾಮಿಗಳವರು ಶಿವಮೊಗ್ಗೆಗೆ ಮೊದಲು ಬಂದ ಪ್ರಕಾರ ಬರಬಹುದಾಗಿ ಈಗ ಅಪ್ಪಣೆ ಕೊಡಲ್ಪಟ್ಟಿದೆ ಮತ್ತು ಈ ಬಗೆ ಶಿವಮೊಗ್ಗ ಅಮಲದಾರರಿಗೆ ಪ್ರತ್ಯೇಕ ಹುಕ್ಕುಂ ಕೊಟ್ಟು ಇರುತ್ತೇವೆ. ಈ ಅಭಿಪ್ರಾಯ ಶ್ರೀ ಸ್ವಾಮಿಗಳವರಿಗೆ ಶೃತಮಾಡತಕ್ಕದ್ದು.

ಸಹಿ ಇಂಗ್ಲೀಷು.

———

### ೪೧೮. ಲೇಖನ :—ಶಾರ್ವರಿ, ಆಶ್ವಯುಜ, ಬ, ೧೨, ಶಾ. ಶ. ೧೭೬೧, ಕ್ರಿ. ಶ. 1840.

ಶ್ರೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ ಪದವಾಕ್ಯ ಪ್ರಮಾಣಪಾರಾವಾರಪಾರೀಣ ಯಮನಿಯ ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠತಪ ಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಗುರುಪರಂಪರಾಪ್ರಾಪ್ತ ಷಡ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕಸಾಂಖ್ಯತ್ರಯ ಪ್ರತಿಪಾಲಕ ಸಕಲ ನಿಗಮಾಗಮಸಾರ ಹೃದಯ, ವೈದಿಕಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾ ರಾಜಧಾನೀ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ ತುಂಗಭದ್ರಾ ತೀರವಾಸ ಋಷ್ಯಶೃಂಗಪುರ ವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀಪಾದಪದ್ಮಾರಾಧಕ ಶ್ರಿಂಗೇರಿ ಶ್ರೀನರಶಿಂಹ ಭಾರತೀಸ್ವಾಮಿನಾಂ ಕರಕಮಲ ಸಂಜಾತ ಕೂಡ್ಲಿ ಶೃಂಗೇರಿ ಶ್ರೀ ಶಂಕರಭಾರತೀಸ್ವಾಮಿಗಳವರ ಸನ್ನಿಧಾನಂಗಳಿಗೆ.

ಮೈಸೂರು ದೊರೆಗಳ ಶೀಮೆ ನಗರದ ತುಕಡಿಸೂಪರಿಂಟೆಂಡೆಂಟ್ ಮೆಕ್ಲೋಡ ಸಾಹೇಬರ ಕೃತಾನೇಕವಿಜ್ಞಾಪನಾ ಅದಾಗಿ. ಶಾರ್ವರಿ ಸಂವತ್ಸರದ ಆಶ್ವೀಜ ಬಹುಳ ೧೨ಗುರುವಾರ ೧೮೪೦ ನೇ ಯಿಸ್ವಿ ಅಗಟೋಬರು ತಾರೀಖು

೨೨ ರವರಿಗೆ ಶಿವಮೊಗ್ಗೆ ಮೊಕಾಂನಲ್ಲೂ ತಮ್ಮ ಅನುಗ್ರಹದಿಂದ ಕ್ಷೇಮದಲ್ಲಿ ಇದ್ದೇನೆ. ತಮ್ಮ ತಪಸ್ಸಾಮ್ರಾಜ್ಯಾತಿಶಯುಗಳಿಗೆ ಆಜ್ಞಾ ಪತ್ರ ಅಪ್ಪಣೆಕೊಟ್ಟು ಬರಶಿಕಳುಹಿಸುತ್ತಾ ಬರಬೇಕು. ಸಾಂಪ್ರತ ಸ್ವಾಮಿಗಳು ಕೃಪಾಪುರಸ್ಸರ ನಿರೂಪಿಸೋಣವಾದ ರಾಯಸ ತಲುಪಿ ಖುಶಿ ಆಯಿತು ಶ್ರೀ ಸ್ವಾಮಿಗಳು ಶಿವಮೊಗ್ಗೆಗೆ ದಯಮಾಡಿಸುವ ಕುತೂಹಲ ಇರುತ್ತದೆಯಾಗಿ ಅಪ್ಪಣೆ ಕೊಟ್ಟ ಬಗ್ಗೆ ದಯಮಾಡಿದರೆ ಪರಮ ಸಂತೋಷವದೆ ಶೃಂಗೇರಿ ಮಠದಿಂದ ಯಿದಕೋಸ್ಕರ ಯಿದ್ದ ವಿವಾದವು ನಾವು ವಿಚಾರಣೆಯಿಂದ ತಾವು ಬರುವಂಥಾದ್ದಕ್ಕೆ ಯೇನೂ ಪ್ರತಿಬಂಧಕ ಯಿರುವುದಿಲ್ಲ ಯಂತ ನಿಶ್ಚಯಿಶಿ ಫೈಸಲುಮಾಡಿ ಇರುತ್ತೇವೆ. ಅದೇ ವಿಷಯದಲ್ಲಿ ತಮ್ಮ ಮಠ ಇಲಾಖೆ ರಂಗಾಶಾಸ್ತ್ರಿಗಳ ಹೆಸರಿಗೆ, ಕಾಗದವೂ ಬರಶಿ ಇರುತ್ತೇವೆ. ತಮಗೆ ಮೊದಲೇ ಶೃತವಾಗಿ ಇದ್ದೀತು, ವಿಶೇಷ ಶೃತ ಮಾಡತಕ್ಕದ್ದು ಏನು ಇದೆ.

---

೪೧೯. ನಿರೂಪ:—ಶಾ. ಶ. ೧೭೬೩, ಕ್ರಿ. ಶ. 1841.



ಮೈಸೂರು ಧೊರೆಗಳ ಶೀಮೆಯ ರಾಜ್ಯಭಾರದ ಕಮೀಷನ್ನರವರು.

ಪ್ಲವಸಂವತ್ಸರದ ಮಾರ್ಗಶಿರ ಶು. ೨ಲ್ಲೂ ಮೈಸೂರು ಶೀಮೆಗಡಿಗಳ ಆಮೀಲ್ ಕಿಲ್ಲೇದಾರರಿಗೆ ಸಹಾ ಬರಸಿ ಕಳುಹಿದ ನಿರೂಪ ಅದಾಗಿ ಶೃಂಗೇರಿ ಕೂಡಲೀ ಮಠದ ಶ್ರೀಸ್ವಾಮಿಗಳವರು, ಪಿಳ್ಳಂಗೇರಿ, ಬೆಂಕೀಪುರ, ತರೀಕೇರಿ ಅಜ್ಜಂಪುರಾ, ಚನ್ನಗಿರಿ, ಬಸವಾಪಟ್ಟಣ, ಹರಿಹರಾ ಈ ಮಾರ್ಗವಾಗಿ ಧಾರವಾಡ ಪ್ರಾಂತಕ್ಕೆ ದೇಶ ಸಂಚಾರಾರ್ಥವಾಗಿ ಕೂಡ್ಲಿಯಿಂದ ಹೊರಟು, ನಿಮ್ಮ ನಿಮ್ಮ ತಾಲೂಕುಗಳಿಗೆ ಬಂದಲ್ಲಿ ಮಾಮೂಲ ಮರಿಯಾದೆ ಮೇರಿಗೆ, ಕರೆದುಕೊಂಡು ಬಂದು ವಳ್ಳೇ ಸ್ಥಳದಲ್ಲಿ ಇಳಿಸಿ ವಾಜಮಿ ಖರೀದಿಗೆ ಅವರಿಂದ ಹಣಾ ಮಾಲೀಕರಿಗೆ ಕೊಡಿಶಿಕೊಟ್ಟು, ಬೇಕಾದ ಸಾಮಾನು ಕ್ರಯಕ್ಕೆ ಕೊಡಿಶಿಕೊಡುವದು ಶ್ರೀಯವರು ಉಳಿದಸ್ಥಳದಲ್ಲಿ ರಾತ್ರಿಕಾಲದಲ್ಲಿ ಕಳ್ಳಕಾಕರ ಉಪದ್ರವ ಆಗದಂತೆ ಖಬರದಾರೀ ಮಾಡಿಸುವುದು, ಶಿಪಾಯಿ ಮಜೂರಿ ಆಳುಗಳು ಯತ್ತುಗಳೂ ಭಂಡಿಗಳೂ ದರ ಖಾಸ್ತು ಮಾಡಿದ್ದು ಅವರಿಂದ ವಾಜಬಿ ಮಜೂರಿ ಕೊಡಿಶಿಕೊಟ್ಟು ಸರಬರಾಯಿ ಮಾಡಿಶಿಕೊಡುವದು ಬ ತಾರೀಖು ೧೪ನೇ ಮಾಹೆ ದಶಂಬರ ಸಂನ್ ೧೮೪೧ನೆ ಯಿಸವೀ ದರ ಜಾಗ ಬೆಂಗಳೂರು.

---

೪೨೦. ನಿರೂಪ:—ಶಾ. ಶ. ೧೭೬೫, ಕ್ರಿ. ಶ. 1843.



ಮೈಸೂರು ಧೊರೆಗಳ ಶೀಮೆಯ ರಾಜ್ಯಭಾರದ ಕಮೀಷನ್ನರವರು.

ಶುಭಕೃತು ಸಂವತ್ಸರದ ಪುಷ್ಯ ಶುದ್ಧ ೧೫ರಲ್ಲೂ ‖ . ಮೈಹಿಸೂರು ಶೀಮೆ ಗಡಿಗಳ ಆಮೀಲ್ ಕಿಲ್ಲೇದಾರರು, ಶಿರಸ್ತೇದಾರರು, ಪೇಷ್ಕಾರು ವಗ್ಯೆರೆ ಸರಕಾರದ ನೌಕರ ಪೇಷೀಜನಗಳಿಗೆ ಬರಶಿ ಕಳುಹಿಸಿದ ನಿರೂಪ

ಅದಾಗಿ ಕೂಡ್ಲಿ ಶೃಂಗೇರಿ ಶ್ರೀಸ್ವಾಮಿಗಳವರು ರಾಮೇಶ್ವರ ಯಾತ್ರೆ ಬಗ್ಗೆ ಕೂಡ್ಲಿಯಿಂದಾ ಹೊರಟು, ಹೊನ್ನಾಳಿ ಹರಿಹರ ಮುಂತಾದ ಮಾರ್ಗವಾಗಿ ಹೋಗಿಬರುವದ್ದರಿಂದ ಶ್ರೀ ಸ್ವಾಮಿಗಳವರು ನಿಮ್ಮ ನಿಮ್ಮ ತಾಲ್ಲೂಕುಗಳ ಮಾರ್ಗವಾಗಿ ಬಂದಲ್ಲ, ಮಾಮೂಲಿ ಮೇರೆಗೆ ಹರದೋಯಿಲಾಖೆಯವರು ಯಿಸ್ತಕ ಬಾಲ್ಲ ಹೋಗಿ ಮರ್ಯಾದೆಯಿಂದ ಕಂಡು ಯಿಳದುಕೊಳ್ಳುವ ಬಗ್ಗ್ಯೆ ಕೈದುವಾರು ಜಾಗತೋರಿಸಿ, ವಾಜಬಿಕಿಮ್ಮತ್ತಿಗೆ ಇವರಿಂದ ಮಾಲೀಕರಿಗೆ ಹಣ ಕೊಡಿಸಿ ಹುಲ್ಲು ಹುರುಳಿ ಅಕ್ಕಿ ಬ್ಯಾಳಿ ಸವುದೆ ಮುಂತಾಗಿ ಬೇಕಾದ ಸಾಮಾನು ಕ್ರಯಕ್ಕೆ ಕೊಡಿಶಿ ಕೊಟ್ಟು ಸರ ಬರಾಯಿ ಮಾಡುವದಲ್ಲದೆ ಮಜೂರಿ ಆಳುಗಳು ಬೋಯಿರು ಭಂಡಿಗಳು ಎತ್ತುಗಳು ದರಖಾಸ್ತು ಮಾಡಿದಲ್ಲಿ ಅವ ರಿಂದ ವಾಜಬಿ ಮಜೂರಿ ಕೊಡಿಶಿಕೊಟ್ಟು ಸರಬರಾಯಿ ಮಾಡುವುದು ರಾತ್ರಿವ್ಯಾಳೆ ಯಿಳಿದ ಬಳಿಯ ಕಳ್ಳಕಾಕರ ಉಪದ್ರವ ಆಗದಂತೆ ಖಬರದಾರಿ ಮಾಡಿಸುವುದು ಶ್ರೀಗಳವರ ಅಮರಹ ಪಾಲಖಿ ೨, ಮ್ಯಾನಾ ೬, ಕುದರೆಗಳು ೧೫೦ ಆನೆ ೧೦ ವಂಟೆ ೧೫ ಸಾಮಾನು ಹೇರುವ ಎತ್ತುಗಳು ೧೦೦, ಬ್ರಾಹ್ಮಣರು ೨೦೦, ಶೂದ್ರ ಜನ ೨೦೦, ಬಂದೂಖ ಜವಾನರು ೬೦ ಹತ್ಯಾರು ಜನ ೬೦ ಭಾಲೇ ಜವಾನರು ೬೦ ಶಿಪಾಯಿ ಛತ್ರ, ಚಾಮರ ಮುಂತಾದ ಬಿರುದುಗಳು ಸಹಿತವಾಗಿರುವದರಿಂದಾ ನಿಮ್ಮ ನಿಮ್ಮ ತಾಲೂಕುಗಳ ಉಕ್ಕುಡ ಕಣಿವೆಗಳಲ್ಲಿ ಅಟಕಾಯಿಸದೆ ಬಿಡು ವದು ಬ ತಾರೀಖು ೧೪ ನೆ ಜನವರಿ ೧೮೪೩ ನೆ ಯಿಸವಿ ದರಜಾಗ ಬೆಂಗಳೂರು.

---

೪೨೧. ನಿರೂಪ :—ಶಾ. ಶ. ೧೭೬೪, ಕ್ರಿ. ಶ. 1843.



ಮೆಹರ್ಬಾನ್ ದೋಸ್ತಾ ಪುಟ್ಟಶಾಸ್ತ್ರೀ ಸುಭೇದಾರ ಕೂಡ್ಲಿ ಶೃಂಗೇರಿ ಮಠದ, ಸಲಮಹೂ.

ಅಜ ಮೈಸೂರು ದೊರೆಗಳ ಶೀಮೆ ನಗರತ್ತುಕಡಿ ಯಿರ್ಚ ಥಾರ್ಜು ಕೊಹೆನಸ್ ಸಾಹೇಬರವರು ಮಾಡುವ ಸಲ್ಲಾಂ ಯೀ ಮಾರ್ಚಿ ತಾರೀಖು ೩ನೆ ಸನ್ ೧೮೪೩ ನೆ ಯಿಸವಿವರಿಗೆ ಸಾಗರ ಮೊಕ್ಕಾಂನಲ್ಲಿ ಖೈರಿಯತ್ತುಯಿ ದ್ದೇವೆ ತಮ್ಮ ಖೈರಿಯತ್ತಿಗೆ ಬರಶಿಕಳುಹಿಸುವಂತೆ ಮಾಡಿಸಬೇಕು ತರುವಾಯ——

ನೀವು ಕಳೆದ ಫೆಬ್ಬರವರೀ ತಾರೀಖು ೨೩ರಲ್ಲೂ ಬರದು ಕಳುಹಿಶಿದ ಕಾಗದ ಬಂದು ತಲಪಿ ಅದರಲ್ಲಿ ಬರೆದ ಅಭಿಪ್ರಾಯವೆಲ್ಲಾ ತಿಳಿಯಲಾಯಿತು ನಿಮ್ಮ ಅಪೇಕ್ಷೆ ಪ್ರಕಾರಕ್ಕೆ ಶ್ರೀಸ್ವಾಮಿಗಳ ಸವಾರಿಯು ರಾಮೇಶ್ವರ ಯಾತ್ರೆ ಹೋಗುವಗೋಸ್ಕರ ಹೊನ್ನಾಳಿ, ಚನ್ನಗಿರಿ, ಹರಿಹರ ಈ ತಾಲ್ಲೂಕು ಮಾರ್ಗವಾಗಿ ಬಂದಲ್ಲಿ ಕಮೀಷನರ ಹುಜೂರ ಹುಕ್ಕುಂ ರಹದಾರೀ ಪ್ರಕಾರ ಸರಬರಾಯಿ ಮಾಡಿಕೊಡುವದಲ್ಲದೆ ಸಾಬಕ್ಕು ಸ್ವಾಮಿಗಳವರು ಸದರಿ ತಾಲ್ಲೂಕು ಮಾರ್ಗವಾಗಿ ಬಂದಾಗ್ಗ್ಯೆ ಛತ್ರದಲ್ಲಿ ಶಿಲ್ಕಿನಿಂದ ವಂದು ದಿವಸದ ಖರ್ಚು ನಡಿಶಿದ ದಾಖ್ಲೆ ಯಿದ್ದಲ್ಲಿ ಆ ಪ್ರಕಾರ ಕೊಡಿಸಬೇಕೆಂತ ಸಹಾ ಸದರಹುಕ್ಕುಂ ತಾಲ್ಲೂಕು ಮಾಮಲೇದಾರರುಗಳಿಗೂ, ಅಲಾಯಿದ ಅಲಾಯಿದ ಹುಕ್ಕುಂಗಳು ಕೊಟ್ಟಿರುತ್ತೇವೆ (ಈ ತಾರೀಖಿನಲ್ಲಿ) ಆದ್ದರಿಂದ ಈ ವಿವರ ಶ್ರೀ ಸ್ವಾಮಿಗಳವರ ಸನ್ನಿಧಾನಕ್ಕೆ ಶ್ರುತಪಡಿಸುವಂತೆ ಮಾಡಿಸಬೇಕು.

ಈ ಬಳಿ ಮಹಾರಾಷ್ಟ್ರ ಸೈನಿದೆ

ಇಂಗ್ಲೀಷು ಸೈನಿದೆ

---

## ೪೨೨. ನ್ಯಾಯ ತೀರ್ಮಾನ :—ಶಾ. ಶ. ೧೭೬೯, ಕ್ರಿ. ಶ. 1847.

ಶ್ರೀ

**ಹುಜೂರ ಅದಾಲತ್ತು ಕೋರ್ಟು, ಪ್ರಾಂತ, ಮೈಸೂರು,**
**ತೀರ್ಪು**

ಅಪಿಲು ವ್ಯಾಜ್ಯ ಸನ್ನ ೧೮೪೭ನೇ ಇಸವಿ ನಂಬರು ೨೨.

ಅಪೀಲು ವಾದಿ ಕೂಡಲಿ ಶೃಂಗೇರಿ ಮಠದ ಸುಭೇದಾರ ಪುಟ್ಟಶಾಸ್ತ್ರಿಗಳು

ಅಪೀಲು ಪ್ರತಿವಾದಿ ಶೃಂಗೇರಿ ಮಠದ ಪಾರುಪತ್ತೇಗಾರ ವೆಂಕಟಾಚಲಶಾಸ್ತ್ರಿ ಹಾಲಿ ಫವತೀ ಆದ್ದರಿಂದ ವಿವಾದ ನಡಿಸುವುದಕ್ಕೆ ಬಂದ ಶೃಂಗೇರಿ ಮಠದಿಂದ ಬಾದ್ಯಪಟ್ಟ ದೇಶಾಧಿಕಾರಿ ಶೇಷ ಜೋಯಿಸರು, ವಕೀಲ ಥಳಿ ಶ್ಯಾಮರಾವು——

ಈ ಪ್ರತಿವಾದಿಯು ಅರಿಜಿನಾಲ್‍ನೆಲ್ಲ ವಾದಿಯಾಗಿ ಸನ್ ೧೮೪೬ನೇ ಯಿಸವಿ ೯೨ನೇ ನಂಬರಿನಲ್ಲಿ ಬಿರುದು ಬಾವಲೆ ವಿಷಯವಾಗಿ ನಗರ ಡಿವಿಜನ್ ಮುಖಂಡ ಸದರ ಮುನಶೀಫ್ ಕೋರ್ಟಿನಲ್ಲಿ ಫಿರ್ಯಾದು ಮಾಡಿದ ಮೊಕದ್ದಮೆಯಲ್ಲಿ ಆದ ಫೈಸಲು ಸಮ್ಮತವಿಲ್ಲವೆಂಬದಾಗಿ ಅರಿಜಿನಾಲ್ ಪ್ರತಿವಾದಿ ಅಫೀಲ ಮಾಡಿ ಇಧಾನೆ.

ಈ ಮೊಕದ್ದಮೆ ಸನ್ನ್ ೧೮೪೨ನೇ ಯಿಸ್ವಿ ಅರಿಜಿನಲ್ಲಿ ೨ನೇ ನಂಬರನಲ್ಲಿ ನಗರದ ಸೂಪ್ರೆಂಟಿಂಡ್ಯಾಟ ಕೋರ್ಟಿನಲ್ಲಿ ದಾಖಲಾಗಿ ಇದ್ದದ್ದು ವಜಾಮಾಡಿ ಆ ಡಿವಿರ್ಜ ಮುನಶೀಫ್ ಕೋರ್ಟಿನಲ್ಲಿ ನಂಬರು ದಾಖಿಲುಮಾಡಿ ಕೊಂಡು ದರ್ಯಾಸ್ತು ಮಾಡುವುದೆಂದು ಸನ್ನ ೧೮೪೫ನೇ ಇಸ್ವಿ ಡಿಶಂಬರು ತಾರೀಖು ೧೪ರಲ್ಲೂ ಸೂಪ್ರೆಂಟಿಂಡ್ಯಾಂಟ್ ಸಾಹೇಬರು ಕೊಟ್ಟ ೪೮೧ನೇ ನಂಬರು ಹುಕುಂ ಮೇರಿಗೆ ದಾಖಲಾದ ನಂಬರು.

ಅರಿಜಿನಲ್ ಅರ್ಜಿ ಸನ್ನ ೧೮೪೨ನೇ ಯಿಸ್ವಿ ಶಪ್ಟಂಬರ ತಾರೀಖು ೨೨ ರಲ್ಲೂ ಶೃಂಗೇರಿ ಸಂಸ್ಥಾನವೆಂಬುದು ಬಹಳ ಅನಾದಿ ಶಿದ್ಧವಾದದ್ದು ಶ್ರೀ ಭಗವತ್ಪಾದ ಶಂಕರಾಚಾರ್ಯರ ಸಂಪ್ರದಾಯ ಪ್ರವರ್ತಕವಾದ ಮುಖ್ಯ ಪ್ರಸಿದ್ಧ ವಾಗಿರುವ ಜಗದ್ಗುರು ಪೀಠ ಆಸೇತು ಹಿಮಾಚಲ ಪರಿಯಂತರಾ ಪ್ರಸಿದ್ಧವಾಗಿರುವುದು. ಈ ಸಂಸ್ಥಾನದಲ್ಲಿರುವ ಬಿರುದು ಬಾವಲೆ, ಮಾನ ಮರ್ಯಾದೆ ಬಹಳ ಅನಾದಿಯಾಗಿ ನಡೆದು ಬಂದ ಪ್ರಕಾರ ಈಗಲೂ ನಡೆದುಬರುತ್ತದೆ. ಹೀಗಿರುವಲ್ಲಿ ಶೃಂಗೇರಿ ಸಂಸ್ಥಾನದ ಆಜ್ಞಾನುಸಾರವಾಗಿ ನಡೆದು ಬರುವಂಥಾ ಕೆಲವು ಚಿಲ್ಲರೆ ಮಠಗಳು ಇರುತ್ತವೆ. ಆಯೋಪಾದಿಯಲ್ಲಿರುವ ಕೂಡ್ಲಿ ಮಠಕ್ಕೆ ಈ ಸಂಸ್ಥಾನದ ಮೇರಿಗೆ ಬಿರುದು ಬಾವಲಿ ಮಾನ ಮರ್ಯಾದೆ ಯಂದಿಗೂ ಇರುವುದಿಲ್ಲ. ಮಾಮೂಲಿಗೆ ಅತಿಕ್ರಮವಾಗಿ ನೂತನವಾದ ಬಿರುದು ಬಾವಲೀ ನಿಶಿ, ಶಿವಮೊಗ್ಗೆ ಮುಂತಾದ ಸ್ಥಳಕ್ಕೆ ಗೈರಮಾಮೂಲಿನಿಂದ ಬಾರದರೀತಿ ಫೈಸಲು ಮಾಡಿಸಬೇಕೆಂತಲೂ, ಈ ವಿಷಯದಲ್ಲಿ ಸನ್ನ ೧೮೩೪ನೇ ಇಸವಿಯಲ್ಲಿ ದಾಖಲಾದ ಫಿರ್ಯಾದಿ ಬಾಬಿನಲ್ಲಿ ಕೆಲವು ದಸ್ತಾವೇಜು ವಗೈರೆ ದಾಖಲು ಆದಂಥಾದ್ದು ಕಛೇರಿ ಮಜಕೂರಿನಲ್ಲಿರುತ್ತದೆ. ಇನ್ನೂ ಇರುವಂಥಾ ದಸ್ತವೈಜುಗಳ ಹುಡುಕಿ ದಾಖಲುಮಾಡುತ್ತೇವೆಂತ ವಗೈರೆ ವಾದಿ ಬರೆದು ಇದ್ದಾನೆ.

ಸನ್ನ ೧೮೪೪ನೇ ಇಸವಿ ಜಾನೇವರಿ ತಾರೀಖು ೧೫ರಲ್ಲು ಈ ವಾದೀ ಮಠಕ್ಕೆ ಆಸೇತು ಹಿಮಾಚಲ ಪರಿಯಂತ್ರಕ್ಕೂ ಪ್ರಸಿದ್ಧ ಮತ್ತು ಸ್ವತಂತ್ರ ಯನ್ನುವುದು ಸಹ ಯಂದಿಗೂ ಆಗಲರಿಯದು. ಶೃಂಗೇರಿಯಿಂದ ತಮ್ಮ ಗ್ರಾಮ ಪರಿಯಂತರ ನಡೆದೀತೇ ಹೊರ್ತು ಮುಂದೆ ನಡೆಯತಕ್ಕದ್ದಲ್ಲ. ನಮ್ಮ ಸಂಸ್ಥಾನಕ್ಕೆ ನೂತನವಾಗಿ ಬಿರುದು ಇರುವುದಿಲ್ಲ ವಾದೀ ಮಠದವರು ಯಾತ್ರೆ ನೆವದಿಂದ ನೂತನವಾಗಿ ಬಿರುದು ಮಾಡಿಕೊಂಡು, ಹೋದಂತೆ ನಮ್ಮ ಸಂಸ್ಥಾನ ಹೊರಡುವುದಿಲ್ಲ. ನಮ್ಮ ಸಂಸ್ಥಾನವೂ ಸಕಲ ದೇಶಗಳಲ್ಲಿಯೂ, ವಿಶಿಷ್ಟ ಬಿರುದು ಬಾವಲಿನಿಶಿ ಕಾಲಂ ಪ್ರತಿಯಲ್ಲೂ ದೇಶ ಸಂಚಾರ ಮಾಡುವಂಥಾದ್ದು. ಇಲ್ಲಿಗೆ ಸಮೀಪವಾಗಿರುವ ಕೊಲ್ಹಾಪುರ, ಮಿರಜಿ, ಸತಾರಿ, ತಾಸ್ಗಾವ, ನರಗುಂದ, ಸವಣೂರು, ಸುರಪುರ, ಮೈಸೂರು ವಗೈರೆ ಸಂಸ್ಥಾನದವರಿಗೆ ಪ್ರಸಿದ್ಧ ವಾಗಿ ತಿಳಿದಿರುತ್ತದೆ. ಇದಲ್ಲದೆ ಶಿವಮೊಗ್ಗಿಗೆ ವಿಶಿಷ್ಟ ಬಿರುದು ಬಾವಲಿ ನಿಶಿ ಬಂದದ್ದಕ್ಕೆ ಅನೇಕ ದಾಖಲೆ ಯಿಂದಲೂ, ಸರಕಾರದ ಲೇಖದಿಂದಲೂ, ರಹದಾರಿಗಳಿಂದಲೂ, ಸಹ ಸಾಫತೋರಿ ಬಂದಾಗ್ಯೂ, ವಾದಿಯ ಅನ್ಯಾಯದಿಂದ, ದುರ್ವ್ಯಾಜ್ಯ ಮಾಡುವಂಥಾದ್ದು ವಿಚಾರಣೀಲಿ ಶೃತವಾಧೀತು. ಗುರುಪರಂಪರ್ಯ ತನಗೆ ಗೊತ್ತು ಇಲ್ಲದೆ ವಾದಿ ಬರೆದಂಥ ಸಂಗತಿ ನೋಡುವಾಗ್ಗೆ ಬಹಳೇ ಆಶ್ಚರ್ಯ ತೋರುತ್ತದೆ. ಸ್ಥಳದಲ್ಲಿ ಶಾರದಾಪೂಜೆ ಮಾಡಿ

ಕೊಂಡು ಇರಬೇಕೆಂತ ನೇಮಕವಾದ ಈ ವಾದಿಗಳು ಈ ಮೇರಿಗೆ ಬಹು ದಿವಸದಿಂದ ಇಲ್ಲದ ವ್ಯವಹಾರಗಳು ಈಗ ಸೃಷ್ಟೀಕರಿಸಿ ಹಲಕೀ ಸಬಬುಗಳು ಬರೆದು ಇರುತ್ತಾರೆಂಬುವದು ಮತ್ತು ಈ ಶಿವಮೊಗ್ಗಿಗೆ ಬಿರುದು ಬಾವಲೀ ನಿಶಿ ನಮ್ಮ ಸಂಸ್ಥಾನದವರು ಸಂಚಾರಮಾಡಿ ಇರುವದು ದರಿಯಾಫ್ತಿಯಲ್ಲಿ ಸಾಫ ವೇದ್ಯವಾದೀತು. ಶಿವಮೊಗ್ಗಿಗೆ ನಮ್ಮ ಸಂಸ್ಥಾನ ಬಿರುದು ಬಾವಲಿನಿಶಿ ಬಂದದ್ದಕ್ಕೆ ಮಕಲಾಯೀ ಸಾಹೇಬರವರ ದಿವಸದಲ್ಲಿ ಬರೆಶಿರುವ ಸಾಕ್ಷೀಗಾರ ಕೈಫತ್ತಿನಲ್ಲಿ ಇಥೆ ಶಿವಾಯಿ ಇನ್ನೂ ಬೇಕಾದ ಸಾಕ್ಷೀ ವಗ್ಯೈರೆಯಿಂದ ರುಜು ಮಾಡಿಕೊಡುತ್ತೇವೆಂತಲೂ, ವಗ್ಯೈರೆ ಪ್ರತಿವಾದಿ ಬರೆದಿಧಾನೆ.

ಸನ್ನ ೧೮೪೪ನೇ ಇಸ್ವಿ ಫೆಬ್ಬರವರಿ ತಾರೀಖು ೨೭ರಲ್ಲೂ ಈ ಪ್ರತಿವಾದಿ ಮಠದವರು ಶೃಂಗೇರಿ ಸಂಸ್ಥಾನದ ಹೆಸರು ಹೇಳಿಕೊಂಡು ಸಂಚರಿಸುವಾಗ ಶಾಹು ಛತ್ರಪತಿ ವಗ್ಯೈರೇರಿಗೆ ತಿಳಿದು ಪ್ರತಿವಾದಿ ಮಠದವರು ಅಯೋಗ್ಯರು ಶೃಂಗೇರಿ ಸಂಪ್ರದಾಯಸ್ಥರಲ್ಲಾ ಎಂತ ರಹದಾರಿ ಕೊಟ್ಟಿದ್ದಾರೆ. ಮತ್ತು ಸಾಬಕು ಶ್ರೀರಂಗಪಟ್ಟಕ್ಕೆ ಹೋಗಿ ಶೃಂಗೇರಿ ಸಂಸ್ಥಾನದ ಹೆಸರು ಹೇಳಿ ಅಡ್ಡಪಾಲಕಿ ಮುಂತಾದ ಬಿರುದು ಬಾವಲೀ ಹಿಡಿದುಕೊಳ್ಳಬೇಕೆಂದು ಇದ್ದ ತಾತ್ಪರ್ಯ ಅಲ್ಲಿ ಅಧಿಕಾರಸ್ತರು ತಮಾಂ ಕಛೇರಿಲಿ ಇರುವಂಥಾವರು ಮಹಾಜನಗಳು ಸಹ ನೋಡಿ ಶೃಂಗೇರಿ ಸಂಸ್ಥಾನೀಕರಲ್ಲಾ ಎಂದು ತಿಳಿದು ಯಾವತ್ತೂ ಬಿರುದು ಬಾವಲಿ ತಡಸಿದ್ದಕ್ಕೆ ಭಂಗಪಟ್ಟು ಸ್ಥಳಕ್ಕೆ ಬಂದದ್ದಕ್ಕೆ ಅನೇಕ ದಾಖಲೆ ಇಥೆ. ಪ್ರಾಕ್ ಗೋಕರ್ಣ ಯಾತ್ರೆ ನೆಪಾ ಮಾಡಿಕೊಂಡು ಹೋಗುವಾಗ ನಗರದ ಮಹಾಜನಗಳು ವಿಶಿಷ್ಟ ಬಿರುದು ಬಾವಲಿ ತುಂಡು ಮಠದವರಿಗೆ ನಡೆಯತಕ್ಕದ್ದಲ್ಲಾ ಎಂತ ಅಟಕಾಯಿಸಿದ್ದಕ್ಕೆ ದಾಖಲೆ ಇಥೆ. ಶೃಂಗೇರಿ ಸಂಸ್ಥಾನದ ಹೆಸರು ಹೇಳಿಕೊಳ್ಳುವ ಯಾವ ಕಾರಣ ಇರುವುದಿಲ್ಲ ಎಂತಾ ಅರವತ್ತು ಅಗ್ರಹಾರದ ಮಹಾ ಜನಗಳು ಬರಕೊಟ್ಟ ಫೈಸಲು ದಾಖಲೆ ಇದೆ. ಶಾರದಾ ಚಂದ್ರಮೌಳೀಶ್ವರ ಪೂಜೆಗೂ, ಮತ್ತು ಋಷ್ಯಶೃಂಗರ ಪೂಜೆಗೂ ಶೃಂಗೇರಿ ಸಂಸ್ಥಾನಕ್ಕೆ ಯೋಗ್ಯತೇ ಹೊರ್ತು ಕೂಡ್ಲೀ ತುಂಡು ಮಠದವರಿಗೆ ಯೋಗ್ಯತೆ ಸಾಲದು ಎಂಬುದಕ್ಕೆ ಅನೇಕ ದಾಖ್ಲೆ ಇದೆ. ಶಾರದಾ ಚಂದ್ರಮೌಳೀಸ್ವಾಮಿ ಪೂಜೆ ಇವರಿಗೆ ಯೋಗ್ಯತೆ ಇಲ್ಲದ್ದರಿಂದ ಇವರು ಶೃಂಗೇರಿ ಸಂಪ್ರದಾಯಸ್ಥರಲ್ಲಾ ತುಂಡುಮಠದವರೆಂತಲೂ ಕಂಡುಬಂದಿತು. ಶೃಂಗೇರಿ ಸಂಸ್ಥಾನ ಬ್ರಹ್ಮ ಚಾರೀ ಆಶ್ರಮ ಪೀಠವಾಗಿರುತ್ತದೆ. ಕೂಡ್ಲಿ ಮಠದವರು ಸಂಪ್ರದಾಯಕ್ಕೆ ವಿರೋಧವಾಗಿಯೂ, ಆತ್ಮ ಕುಟುಂಬ ರಕ್ಷಣೆ ಉದ್ದಿಶ್ಯದಿಂದಲೂ ಗೃಹಸ್ಥಾಶ್ರಮದಿಂದ ಯತಿ ಆಶ್ರಮ ತೆಗೆದುಕೊಂಡು, ತಿರುಗಿದಾಕ್ಷಣವೇ ಕೂಡ್ಲಿ ಮಠದವರಿಗೆ ಗುರುಪಾರಂಪರ್ಯ ಗೊತ್ತಾಗಲಿಕ್ಕೆ ಇಲ್ಲ. ಆ ಪ್ರಕಾರ ಯತಿ ಆಶ್ರಮ ನಡಿಸತಕ್ಕ ಬಗ್ಗೆ ಯೋಗ್ಯತೆ ಸಾಲದು. ಈ ಕೂಡ್ಲಿ ಮಠದವರು ಯಾವಾಗ ಸಂಚಾರ ಮಾಡಿದಾಗ್ಯೂ, ಶೃಂಗೇರಿ ಸಂಸ್ಥಾನದ ಹೆಸರು ಹೇಳಿ ದೇಶಾಟನಾ ಮಾಡಿ ಇದಾರೆ ಯಂತಾ ವರ್ತಮಾನ ಕೇಳಿದ್ದೇ ಹೊರತು, ಸಂಗಮದ ಕೂಡ್ಲಿ ಮಠದವರು ಯಂತಾ ಇದ್ದ ಸಂಗತಿ ಯಥಾರ್ಥ ಹೇಳಿದ್ದರೆ ಇವರು ಯಾರೂ ಮನ್ನಿಸಲಿಕ್ಕಿಲ್ಲಾ, ಇವರು ಚಿಲ್ಲರೆ ಗ್ರಾಮಗಳೆಲ್ಲಾ ಸಂಚಾರ ಮಾಡಿದೇವೆಂತ ಹೇಳುತ್ತಾರೆ. ಶೃಂಗೇರಿ ಸಂಸ್ಥಾನದವರು. ಉಡುಪಿ, ಸುಬ್ರಹ್ಮಣ್ಯ, ಗೋಕರ್ಣ, ಕಾಶೀ, ರಾಮೇಶ್ವರ, ಕಂಚಿ, ಕಾಳಹಸ್ತಿ, ತಿರುಪತೀ, ಶಾಲ್ಯಾ, ಕೋಯಂಬತ್ತೂರು, ಶ್ರೀರಂಗ, ಕುಂಭಕೋಣ, ದರ್ಭ ಶಯನ, ಚನ್ನಪಟ್ಟಣ, ಸವನೂರು, ಹುಬ್ಳಿ, ಹಂಪೆ, ಹೈದರಾಬಾದು, ಪೂನಾ, ನಾಶಿಕ, ತ್ರಯಂಬಕ, ಮುಂತಾದ ಮಹಾ ಮಹಾ ಕ್ಷೇತ್ರಗಳಲ್ಲಿ ಪ್ರಸಿದ್ಧವಾಗಿದಾರೆ ಹೊರತು, ಸಂಗಮವಗ್ಯೈರೆ ತುಂಡುಮಠ ಪ್ರಸಿದ್ಧವಲ್ಲ, ಸಾಬಕು ಇದೆ ಬಿರುದು ಬಾವಲೀ ವಿಷಯವಾಗಿ, ಮೈಸೂರು ರಾಜಾ ಸಾಹೇಬ್ ಬಹದ್ದೂರ್ರವರ ಬಳಿ ತನಿಖೆ ಆಗಿ ವಿಶೇಷ ಬಿರುದು ಬಾವಲೀ ಶೃಂಗೇರಿ ಮಠಕ್ಕೆ ಸಲ್ಲತಕ್ಕದ್ದಲ್ಲದೆ, ಸ್ಮಾರ್ತ ಮಠದಲ್ಲಿ, ಎಷ್ಟು ಮಠಗಳು ಇದ್ದಾಗ್ಯೂ ಶೃಂಗೇರಿ ಸಂಸ್ಥಾನಕ್ಕೆ ವಳಪಟ್ಟದ್ದೆಂತ ನಿಶ್ಚಯಿಸಿ, ಸರ್ಕಲಾರ ಕೊಟ್ಟಿರುವುದಲ್ಲದೆ ಸೂಪ್ರಿಂಟಡೆಂಟ್ ಇಸ್ಪೋಕ್ಸಾಹೇಬರವರು ಸರಕಿಲಾರ ಕೊಟ್ಟಿದ್ದಾರೆ. ಪ್ರತಿವಾದೀ ಮಠದವರು ಬಿರುದು ಬಾವಲೀ ನಿಸಿ ಶಿವಮೊಗ್ಗಿಗೆ ಬರುವ ಬಗ್ಗೆ ಮಾಮೂಲ ಗ್ಯೆರು ಮಾಮೂಲ ವಿಷಯದಲ್ಲಿ ತನಿಖೆ ಮಾಡುವಂತೆ ಡಿಪರೂಕ್ಸಾ ಸಾಹೇಬರವರು ಶಿವಮೊಗ್ಗೆ ಅಮೀಲ ಕೃಷ್ಣರಾಯಗೆ ಹುಕುಂ ಕೊಟ್ಟಿದ್ದಕ್ಕೆ ಅವರು ವಿಚಾರಣೆ ಮಾಡುವಲ್ಲಿ, ಕೂಡಲಿ ಮಠದವರು, ಬಿರುದು ಬಾವಲೀ ಸಮೇತ ಶಿವಮೊಗ್ಗಿಗೆ ಬರುವ ಮಾಮೂಲು ಇಲ್ಲ ಎಂತ ಬರಸಿದ ತನಿಖೆ ಕಟ್ಟು ಸೂಪ್ರಿಂಡ್ಯಾಂಟ್ ಕಛೇರಿಲೀ ಇಥೆ ಅದನ್ನೂ ಕೊಡ್ಸಬೇಕು. ಯಾವ ಮಠಗಳಿಗೇ ಆಗಲೀ ಸರಕಾರದವರು ಕುಮ್ಮಕು ಮಾಡಿಸಿ, ನಡಿಸಬೇಕೇ ಹೊರ್ತು ಬೇರೆ ಇಲ್ಲಾ. ಪ್ರತಿವಾದಿ ಮಠದವರು ಶಿವಮೊಗ್ಗೆ ಶಿವಾಯಿ ಕಡಿಮೆ ಕೆಲವು ಸ್ಥಳಕ್ಕೆ, ಸಂಚಾರಕ್ಕೆ ಹುಕುಂ ಆಗಬೇಕೆಂತಲೂ, ಅರ್ಜಿ ಜಾಹೀರುಮಾಡಿದ್ದಕ್ಕೆ ಆದಹ್ಕುಂ ಪರಾಂಬರಿಸಿದಲ್ಲಿ ಇವರು ವಿಶೇಷ ಬಿರುದುಬಾವಲೀ ವಿಷಯಕ್ಕೆ ಯೋಗ್ಯರಲ್ಲವೆನ್ನುವುದು ಜಾಹೀರಾದೀತು, ಕೂಡ್ಲಿಮಠದ ಕಡೆ ಥೋಡೀರಾಜು ಎಂಬವ ಶೃಂಗೇರಿ ಸಂಸ್ಥಾನದ ಹೆಸರು ಹೇಳಿಕೊಂಡು ಅಮದನಗರ ಪ್ರಾಂತ್ಯದಲ್ಲಿ ಸಂಚಾರ ಮಾಡುವುದಕ್ಕೆ ಹೋದಾಗ್ಯೆ ಇವನು ಶೃಂಗೇರಿಯವನಲ್ಲಾ ಯಂತಾ ಶೃಂಗೇರಿ ಮಠದ ಕಡೆಯವರಿಂದಲೂ, ತ್ರಿಮತಸ್ಥರ ಕಡೆಯಿಂದಲೂ

ದಾಖಲೆ ತಿಳಿದು ಇವನು ಶೃಂಗೇರಿ ಸಂಸ್ಥಾನದ ಹೆಸರು ಹೇಳಿಕೊಂಡು ತಿರುಗಕೂಡದೆಂತಲೂ ಕುಂಫಣಿಧೊರೆಗಳು ಹುಕುಮು ಕೊಟ್ಟಿದ್ದಾರೆ. ಕೂಡ್ಲಿ ಮಠದ ಸೋಮಭಟ್ಟನೆಂಬುವನು ಹಾಲಿ ಹೈದರಾಬಾದಿಗೆ ಹೋಗಿ ದಗಲಬಾಜಿ ಕಾಗದಪತ್ರ ತೋರಿಸಿದ್ದಕ್ಕೆ ಸದರಿಯವನನ್ನು ಗಡೀಪಾರು ಮಾಡುವಂತೆ ಹುಕುಂ ಆಗಿರುವಲ್ಲಿ ರಶಿಡೆಂಟ್ ಸಾಹೇಬರವರಲ್ಲಿ ಫಿರ್ಯಾದು ಮಾಡಿಕೊಂಡದ್ದರಿಂದ ದರಿಯಾಫ್ತಿಮಾಡಿ ಅವನು ಝೂಟೀ ಮನುಷ್ಯಯಂತಾ ಮೊಗಲಾಯಿ ಸರಕಾರದಲ್ಲೂ ಫೈಸಲಾಗಿ ಹುಕುಂ ಕೊಟ್ಟಿದ್ದಾರೆ. ಆದ್ದರಿಂದ, ಇವರು ಶೃಂಗೇರಿ ಸಂಪ್ರದಾಯಸ್ಥರಲ್ಲಾ. ಇವರಿಗೆ ವಿಶೇಷ ಬಿರುದು ಬಾವಲೀಗೆ ಕಾರಣ ಇರುವುದಿಲ್ಲ, ಎಂತಾ ವಗೈರೆ ವಿಸ್ತಾರವಾಗಿ ವಾದಿ ಬರೆದಿದಾನೆ.

ಸಕ್ ೧೮೪೪ನೆ ಯಿಸ್ವಿ ಮಾರ್ಚಿ ತಾರೀಖು ೨೧ರಲ್ಲೂ ನಮ್ಮ ಮಠದವರು ಬಿರುದು ಬಾವಲಿಯಿಂದ ಶಿವಮೊಗ್ಗಿಗೆ ಬರಬಹುದೆಂತ ಮೊಗಲಾಯಿ ಸಾಹೇಬರವರು ಹುಕುಂ ಕೊಟ್ಟಿದ್ದಾರೆ. ಯೀ ಮಲ್ನಾಡು ಮಠದವರು ಪೂರ್ವ ನಿಬಂಧನೆ ಮೇರಿಗೆ ದೇಶಸಂಚಾರ ವಗೈರೆ ಮಾಡದೆ ಸ್ಥಳದಲ್ಲೂ ಶಾರದಾ ಪೂಜೆ ಮಾಡಿಕೊಂಡು ಯಿರುವ ಹಾಗೂ, ಶಿವಮೊಗ್ಗಿಗೆ ಬಿರುದು ಬಾವಲಿನಿಶಿ ನಮ್ಮ ಸಂಸ್ಥಾನ ದಯ ಮಾಡುವುದಕ್ಕೆ ಅಡ್ಡಿ ಇಲ್ಲದ ಹಾಗೂ ಫೈಸಲು ಕೊಡ್ಸಬೇಕೆಂತ ವಗೈರೆ ವಿಸ್ತಾರವಾಗಿ ಪ್ರತಿವಾದಿ ಬರೆದಿದ್ದಾನೆ.

ಸಾಕ್ಷಿ ದಸ್ತೈವೇಜುಗಳಿಂದ ವಾದಿ ಶೃಂಗೇರಿ ಮಠದ ಹಕ್ಕಿನ ಸ್ಥಳಗಳಲ್ಲೂ, ಪ್ರತಿವಾದಿ ಕೂಡ್ಲಿಮಠದ ಸ್ವಾಮಿಗಳು ಬಿರುದು ಬಾವಲಿ ಸಮೇತ ಸಂಚಾರಮಾಡಬಾರದು ಎಂತ ಸ್ಪಷ್ಟವಾಗಿ ಕಾಣತದೆ. ಶಿವಾಯಿ ವಾದಿಮಠಕ್ಕೆ ಮಲ್ನಾಡು ಮಠದವರು ಯಂತಾ ಪ್ರತಿವಾದಿ, ಪ್ರತಿವಾದಿ ಮಠಕ್ಕೆ ಸಂಗಮದವರು, ಮತ್ತು ತುಂಡು ಮಠದವರು ಯಂತ್ತಾ ವಾದಿ ಈ ಮೇರೆಗೆ ವಿವಾದ ಪತ್ರಿಕೆಗಳಲ್ಲೂ, ಉಭಯವಾದಿಗಳು ಬರೆದು ಕೊಂಡಿದ್ದಾರೆ. ಆದರೆ ಕೆಲವು ಸಾಕ್ಷಿ ದಸ್ತಾವೇಜುಗಳಲ್ಲೂ ಪ್ರತಿವಾದಿ ಮಠವೆಂಬ, ಕೂಡ್ಲಿ ಮಠಕ್ಕೆ ಸಂಗಮದವರು ಮತ್ತು ತುಂಡು ಮಠದವರು ಕ್ಷುದ್ರ ಮಠದವರು ಎಂತಲೂ, ಯಿವರು ಶೃಂಗೇರಿ ಹೆಸರು ಹೇಳಿಸಿಕೊಳ್ಳಕೂಡದು. ಭಗವತ್ಪಾದ ಪೀಠವೆಂಬ ಶಂಕರಾಚಾರ್ಯರ ಪೀಠಕ್ಕೆ ಇವರು ಶೇರಿದವರಲ್ಲಾ ವಿಶೇಷ ಬಿರುದು ಬಾವಲಿಯಿಂದಾ ಇವರು ಸಂಚಾರ ಕೂಡದೆಂತಾ ವಗೈರೆ ನಮೂದಿರುವುದಲ್ಲದೆ, ವಾದಿಗಳ ಮಠವೆಂಬ ಶೃಂಗೇರಿ ಮಠಕ್ಕೆ ಮಲ್ನಾಡು ಮಠವೆಂತ ಪ್ರತಿವಾದಿ ಹೇಳುವ ಮೇರೆಗೆ ಯಾವ ಸಾಕ್ಷಿ ದಸ್ತಾವೈಜಿನಿಂದಲೂ ರುಜು ತೋರುವುದಿಲ್ಲವಾದ್ದರಿಂದಲೂ, ಸ್ಮಾರ್ತಮತೋದ್ಧಾರಕರಾದಂಥಾ ಶಂಕರಾ ಚಾರ್ಯರ ಪಾರಂಪರ್ಯವಾಗಿ ಅವರು ವಾಸವಾಗಿದ್ದ ಸ್ಥಳವೆಂಬ ಶೃಂಗೇರಿಯಲ್ಲಿಯೇ ವಾದೀ ಮಠದ ಸ್ವಾಮಿಗಳು ಯಿದ್ದುಕೊಂಡು ಆ ಶಂಕರಾಚಾರ್ಯರು ಆರಾಧಿಸುತ್ತಾ ಯಿದ್ದ ಚಂದ್ರಮೌಳೇಶ್ವರ ದೇವರು ಮತ್ತು ಅವರು ಶ್ರೀ ಚಕ್ರ ಯಂತ್ರೋಧಾರ ಮಾಡಿದ ಶ್ರೀ ಶಾರದಾ ಅಮ್ಮನವರು ಮುಂತಾದ ದೇವತಾರಾಧನೆಗಳು, ಸಹ ನಡಿಸಿಕೊಂಡು ಶೃಂಗೇರಿಯಲ್ಲಿಯೇ ಯಿರುವದ್ದರಿಂದಾ ಸಹಾ ಶೃಂಗೇರಿ ಸ್ವಾಮಿಗಳು ಶಂಕರಾಚಾರ್ಯರ ಸಂಪ್ರದಾಯಸ್ಥರು. ಆಸೇತು ಹಿಮಾಚಲ ಪರಿಯಂತ್ರ ಬಹು ಪ್ರಸಿದ್ಧರು. ಎಂತಾ ವಗೈರೆ ವಾದಿ ವಕೀಲನು ಸನ್ ೧೮೪೫ನೇ ಯಿಸ್ವಿ ಜುಲೈ ತಾರೀಖು ೫ರಲ್ಲೂ ೨೦ ಕಲಮಿನ ಮನವಿ ಅರ್ಜಿಯಲ್ಲಿ ಬರಕೊಂಡಿರುವ ಅಭಿಪ್ರಾಯಗಳು ನಿಶ್ಚಯವಾಗಿಯಿಧೆ. ಮತ್ತು ಈ ಅರ್ಜೀಲಿ ನಮೂದಿರುವ ಮೇರೆಗೆ ಅನೇಕ ಕ್ಷೇತ್ರ ಸ್ಥಳಗಳಲ್ಲೂ ಶೃಂಗೇರಿ ಸ್ವಾಮಿಗಳವರು ತಮ್ಮ ಮಠಗಳು ತಮ್ಮ ಕಡೆ ಮಠಮುದ್ರೆ ಸಹಾ ಯಿಟ್ಟು ಆಯಾಯ ಸ್ಥಳದಲ್ಲೂ ಮರ್ರ್ಯಾದೆ ನಡಿಸಿಕೊಳ್ಳುತ್ತಾರೆಂಬುವದು ಯಥಾರ್ಥವಾಗಿ ತೋರುವದ್ದರಿಂದ ವಾದಿ ಮಠದ ಹಕ್ಕಿನ ಸ್ಥಳದಲ್ಲೂ ಪ್ರತಿವಾದಿ ಮಠದ ಸ್ವಾಮಿಗಳು ಅಡ್ಡಪಾಲಖೀ ಮುಂತಾದ ಬಿರುದು ಬಾವಲಿಯಿಂದಾ ಸಂಚಾರ ಮಾಡುವ ಬಾಧ್ಯತೆಯೇ ಯಿಲ್ಲವಾಗಿ ಅವರ ಹಕ್ಕಿನ ಸ್ಥಳಗಳ ವಳಪಟ್ಟಿರುವ ಶಿವಮೊಗ್ಗೆ ಮುಂತಾದ ಸ್ಥಳಕ್ಕೆ ತಾವು ಬಿರುದು ಬಾವಲೀ ಸಮೇತ ಬರಬೇಕೆಂಬುದಾಗಿ ಪದೇ ಪದೇ ಪ್ರತಿವಾದಿಗಳಾದ ಕೂಡ್ಲಿ ಸ್ವಾಮಿಗಳು ಮತ್ತು ಅವರ ಯಿಲಾಖೆಯವರು ಸಹ ಸರಕಾರಕ್ಕೆ ಅನೇಕ ತೊಂದರೆಕೊಟ್ಟು ಇಧಾರೆಂಬುದು ಸಕ್ ೧೮೪೨ನೆ ಯಿಸ್ವಿ ೫೭ನೇ ನಂಬರಿನಲ್ಲಿ ಕ್ಯಾನನ್ ಸಾಹೇಬರವರು ಪ್ರತಿವಾದಿ ಪುಟ್ಟಶಾಸ್ತ್ರಿಗಳ ಹೆಸರಿಗೆ ಕೊಟ್ಟಿರುವ ಹುಕುಂ ವಗೈರೆ ದಸ್ತಾಐವಜುಗಳಿಂದ ಸಂಪೂರ್ಣವಾಗಿ ತೋರಿಬರುವುದಲ್ಲದೆ ಶೃಂಗೇರಿ ಮಠದ ಹಕ್ಕಿನ ಮತ್ತೆ ಯಾವ ಸ್ಥಳಗಳಲ್ಲೂ ಪ್ರತಿವಾದಿ ಮಠದ ಸ್ವಾಮಿಗಳು ಬಿರುದುಬಾವಲಿಯಿಂದ ಸಂಚಾರಮಾಡಿದ್ದು ರುಜುವಾಗಿ ಯಿರುವುದು ಯಿಲ್ಲದೆ ಯಿರುವಲ್ಲಿ ಹಿಂದೆ ಯರಡು ಮೂರು ದಫ ತಮ್ಮ ಮಠದ ಶಿಷ್ಯರ ಅಧಿಕಾರ ಬಲದಿಂದ ಶಿವಮೊಗ್ಗೆಗೆ ಬಂದಂಥಿದೆ ಮುಂದಕ್ಕೂ ಮಾಮೂಲು ಪಡಕೊಳ್ಳಬೇಕೆಂಬದಾಗಿ ಅಪೇಕ್ಷಿಸಿ ಕೊಳ್ಳುವಂತಾದ್ದು ವಿಹಿತವಲ್ಲವಾಗಿ ತೋರುವದ್ದರಿಂದ, ತಮ್ಮ ಮಠ ಮುದ್ರೆ ಸಹ ಯಿಟ್ಟಿರುವ ವಾದಿ ಶೃಂಗೇರಿ ಮಠದ ಹಕ್ಕಿನ ಶಿವಮೊಗ್ಗೆ ಮುಂತಾದ ಸ್ಥಳಗಳಿಗೆ ಪ್ರತಿವಾದಿ ಕೂಡ್ಲಿ ಮಠದ ಸ್ವಾಮಿಗಳವರು, ಬಿರುದು

ಬಾವಲೀ ಸಮೇತ ಬರಕೂಡದೆಂಬದಾಗಿ ಪಂಚಾಯಿತರು ಬರದ ಮಹಜರು ನ್ಯಾಯವಾಗಿ ಇಥೆಯೆಂತಾಲೂ ವಾದಿಕಡೆ ಸಮನು ಭತ್ಯದ ಖರ್ಚು ರೂ. ೪೧–೩–೦ ಪ್ರತಿವಾದಿ ಕೊಡಬೇಕೆಂತಲೂ ಯೀ ಮೊಕದ್ದಮಾ ಹಕ್ಕು ಬಾಬಾಗಿ ಮೊಬಲಗು ನಮೂದಾಗಲಿಲ್ಲವಾದ್ದರಿಂದ ಫೀಜು ಮಾಫೀ ಮಾಡುವಂತ್ತೆ ಸೂಪ್ರಿಂಟೆಂಡ್ಯಾಂಟು ಸಾಹೇಬರ ಹುಕ್ಕುಂ ಬಂದ ಮೇರಿಗೆ ಪ್ರತಿವಾದೀಗೆ ಫೀಜು ವಿಧಿಸಲಿಲ್ಲಾಯುಂತಲೂ, ಸಹಾ ಸರ್ ೧೮೪೭ನೆ ಯಿಸ್ವಿ ಜನವರಿ ತಾರೀಖು ೩೦ರಲ್ಲೂ ಮುಖಂಡಸದರ ಮುನಶೀಫರು ಫೈಸಲು ಮಾಡಿದರು.

ಸರ್ ೧೮೪೭ನೆ ಯಿಸ್ವಿ ಮೇ ತಾರೀಖು ೩೦ರಲ್ಲೂ ಅರ್ಜಿನಾಲ್ಕೆ ಪ್ರತಿವಾದಿಯು ಅಪೀಲ್ ಮಾಡಿ ಅರ್ಜಿನಾಲ್ ಫೈಸಲು ಮೇಲೆ ಆಕ್ಷೇಪಿಸುವುದೇನಂದರೆ ರುಧಿರೋದ್ಗಾರಿ ಸಂವತ್ಸರದ ಕಾರ್ತೀಕ ಶುದ್ಧ ೫ ತಾರೀಖಿನಲ್ಲೂ ಕೆಳದೀ ಬಸಪ್ಪನಾಯಿಕರು ಬರೆದಿರುವ ನಿರೂಪದಿಂದ ಕೂಡ್ಲಿ ಶೃಂಗೇರಿ ಸ್ವಾಮಿಗಳು ಗುರು ಪಾರಂಪರ್ಯ ಮೂಲ ಪೀಠಸ್ತರು ಎಂಬುದನ್ನು ಪ್ರತಿವಾದಿಗಳು ಮೂಲಗುರುಪೀಠಕ್ಕೆ ಸಲ್ಲತಕ್ಕವರಲ್ಲಾ ಸಂಚಾರ, ಆಚಾರ, ವಿಚಾರ ಎಂಬ ಗುರುಮರ್ಯಾದೆ ಇಲ್ಲಾ ಅನ್ನುವುದು ಪ್ರತಿವಾದಿ ಮಠದ ಸ್ವಾಮಿಗಳು ಪುಸ್ತುಕ ಸನ್ಯಾಶಿಗಳ ಪರಂಪರಾದವರು ಎಂಬುದು ಸಹಾ ಕಂಡು ಬಂದೀತು. ನಮ್ಮ ಮಠದವರು ತುಂಡುಮಠವೇ ಆಗಿದ್ದರೆ ಕಾಲಂಪ್ರತಿಯಲ್ಲೂ ದೇಶಸಂಚಾರಮಾಡಿ ಕಾಣಿಕೆ ಕಪ್ಪಾ ಶಿಷ್ಯರಿಂದ ತೆಗೆದುಕೊಂಡು ಸ್ವತಂತ್ರದಿಂದ ಇರುವಲ್ಲಿ, ನಮ್ಮ ಇಂದಾ ಕಾಣಿಕೆ ಕಪ್ಪ ತೆಗೆದುಕೊಳ್ಳುವ ಬಗ್ಗೆ, ಪ್ರತಿವಾದೀ ಮಠದವರಿಗೆ ಯಾರ ಅಡ್ಡಿ ಯಿತ್ತು. ಹೈದರಾಬಾದು ಷಹರಿನಲ್ಲಿ ಆ ವಿಚಾರದಿಂದ ಹುಟ್ಟಿರುವ ಮಹಜರನ್ನೂ ಅನಂತಶಯನ ಮೊದಲಾದ ಧೊರೆಗಳಿಂದ ಬರಸಿಕೊಂಡಿರುವ ರಹದಾರಿ ವಗ್ಯೈರೆ ಸಹ, ಪ್ರತಿವಾದೀ ಹೇಳಿಕೆ ಮೇರಿಗೆ ಹುಟ್ಟಿದೆ. ಪೂರ್ವ ಮೇರಿಗೆ ಶೃಂಗೇರಿಯಲ್ಲಿ ದೇವತಾರಾಧನೆ ಮಾಡಿಕೊಂಡು ಇರುವ ಬಗ್ಗೂ ದೇಶದಮೇಲೆ ನೂತನ ಪ್ರಸಕ್ತಿಗಳ್ಳ ಮಾಡ್ಲಿಕ್ಕೆ ಕೆಲಸವಿಲ್ಲಾ ಎಂಬುದಾಗಿ ಶೃಂಗೇರಿ ಸ್ವಾಮಿಗಳವರಿಗೆ ಬರಸಿ ಕಳುಹಿಸಿದ್ದಿತು. ತಾವು ಸಕಲದೇಶದಲ್ಲೂ ಸಂಚಾರಮಾಡಿಕೊಂಡು ನಮ್ಮ ಶಿಷ್ಯರಮೇಲೆ ಆಚಾರ ವಿಚಾರ ಪ್ರಾಯಶ್ಚಿತ್ತಗಳು, ಮಾಡತಕ್ಕದ್ದು ಯುಕ್ತವೇ ಸರಿಯೆಂದು ದಿವಾನ್ ಪೂರ್ಣಯ್ಯನವರು ನಮ್ಮ ಸ್ವಾಮಿಗಳಿಗೆ ಕ್ರೋಧನ ಸಂವತ್ಸರದ ಫಾಲ್ಗುಣ ಬ. ೬ ರಲ್ಲೂ ಬರೆದಿರುವ ವಿಜ್ಞಾಪನಾ ಪತ್ರಿಕೆ ಹಾಜರು ಮಾಡಿದ್ದಾಗ್ಗೂ ಅದರನ ಸದರಿ ಹೈದರಾಬಾದು ವಗ್ಯೈರೆ, ದಾಸ್ತಾ ಐವಜುಗಳ ಆಧಾರದಿಂದ ರದ್ದುಮಾಡಿದ್ದಾರೆ. ಸದರೀ ತಾರೀಖಿನಲ್ಲಿ ಪ್ರತಿವಾದೀ ಮಠಕ್ಕೆ ಬರೆದಿರುವಂತೆ, ಸದರಿ ವಿಜ್ಞಾಪನಾ ಪತ್ರಿಕೆಯಲ್ಲಿ ನಮೂದಿರುವ ಬಿನ್ನಹ ಪತ್ರಿಕೆ, ಅವರಿಂದ ತರಿಸಿ ಪರಾಂಬರಿಸಬೇಕು. ನಮ್ಮ ಮಠದ ಸ್ವಾಮಿಗಳವರು ಪ್ರತಿವಾದಿ ಮಠಕ್ಕೆ, ಸಂಸ್ಥಾನ ವಪ್ಪಿಸಿರುವುದಾಗಿಯೂ, ಮುಂದೆ ಸಂಸ್ಥಾನಕ್ಕೆ, ಶಿಷ್ಯಪಾರಂಪರ್ಯ ಕೆಲಸವಿಲ್ಲವೆಂಬ ವಗ್ಯೈರೆ ಕೆಲವು ಸಬಬಬಾಹುಳ್ಯಮಾಡಿ ನಾವು ಸರಕಾರದ ಮುಖಾಂತರ ಹುಟ್ಟಿರುವ ಮಜಬೂತು ಆದ ದಾಖಲೆ ದಸ್ತೈವಜುಗಳು ಹಾಜರುಮಾಡಿ ಇರುವಲ್ಲಿ ಈ ದಸ್ತೈವಜು ರದ್ದುಪಡಿಸಬೇಕೆಂದು 'ಈ ದಸ್ತೈವಜುಗಳ ಅನುಭವ ತೆಗೆದುಕೊಂಡು, ಝೂಟೀ ದಸ್ತೈವಜುಗಳ ನಿರ್ಮಾಣಿಸಿ ದಾವಾ ಅರ್ಜಿ ಸಂಗಡಲೂ, ದರ್ಯಾಫ್ತು ಕಾಲದಲ್ಲೂ ಹಾಜರುಮಾಡದೆ, ಫೈಸಲುವೇಳೆ ಹಾಜರುಮಾಡಿದಂತೆ ಈ ಫೈಸಲಿನಿಂದ ಕಂಡುಬರುವುದಲ್ಲದೆ ಆ ಕಾಗದಗಳು ಕೋರ್ಟಿನವರು ನಮಗೆ ತೋರಿಸಿ ಸವಾಲ್ ಜವಾಬ್ ತೆಗೆದುಕೊಳ್ಳದೆ ಆ ಕಾಗದಗಳು ನಮ್ಮ ಮಠದಿಂದಲೇ ಹುಟ್ಟಿರುವಂಥಾದ್ದು ಎಂದು ರುಜುವಾತಿಯೂ ಇಲ್ಲದೆ ಬನಾವಟ್ ಕಾಗದಗಳನ್ನೇ ಕೇವಲ ಬಲಾಕಲ್ಪಿಸಿ ನಾನು ಹಾಜರುಮಾಡಿರುವ ಯಾವತ್ತು ದಸ್ತಾವೈಜುಗಳನ್ನು ಫೈಸಲಿನಲ್ಲಿ ನಿರಾಕರಿಸಿದಾರೆ. ಈ ಪ್ರಕಾರ ನಮ್ಮ ಮಠದ ಸ್ವಾಮಿಗಳವರು ಯಾರೂ ಬರಕೊಟ್ಟಿರುವುದಿಲ್ಲ. ಮಹಾರಾಜ ರಾಜಾಸಾಹೇಬ್ ಬಹದ್ದೂರ್ ರವರು ಯರಡುಮೂರು ದಫ ನಮ್ಮ ಸ್ವಾಮಿಗಳವರ ದರುಶನಕ್ಕೆ ಕರೆಸಿರುತ್ತಾರೆ. ಆಗ್ಗೆ ಅಡಪಾಲಕೀ ಮುಂತಾದ ಸಮಸ್ತ ಬಿರುದು ಸಹ ಮೈಸೂರು ಪ್ರವೇಶಮಾಡಿದರೋ ಯಿಲ್ಲವೋ ಆ ದಾಖಲೆ ಆಳಿದ ಮಹಾಸ್ವಾಮಿಯವರು ಪರಾಂಬರಿಸಿದಲ್ಲಿ, ಪೂರಾ ರುಜು ಆದೀತು. ಎಂತಾ ಮನವಿ ಅರ್ಜಿ ಕೊಟ್ಟಾಗ್ಯೂ ಆ ಪ್ರಕಾರ ದಾಖಲೆ ತರಲಿಲ್ಲಾ ಮೊಕಲಾಯೀ ಸಾಹೇಬರವರು ಡಿಪ್ಯೋಟಿಕ ಸಾಹೇಬರವರು ಸಹ ಕೊಟ್ಟಿರುವ ಹುಕ್ಕುಂಗಳನ್ನು ಹಾಜರುಮಾಡಿದಾಗ್ಯೂ ಬೇ ಇನಸಾಫ್ ಹುಟ್ಟಿದೆಂದು ಫೈಸಲಿನಲ್ಲಿ ರದ್ದು ಪಡಿಶಿರುತ್ತಾರೆ. ಪಂಚಾಯಿತರು ನಡಿಸಿರುವ ತಗಲೂಫಿ ಸಂಗತಿಗಳು ಮನವೇ ಅರ್ಜಿಯಲ್ಲಿ ಬರೆದುಕೊಳ್ಳುತ್ತೇನೆ. ನಾನು ಹಾಜರುಮಾಡಿದ ದಸ್ತಾವೈಜುಗಳನ್ನು ಫೈಸಲಿನಲ್ಲಿ ಪಕ್ಷಪಾತ ನಡಿಸಿದ ಸಂಗತಿಗಳು ಯಾವತ್ತೂ ದಾಖಲೆ ತರಿಸಿಕೊಂಡು ಅರ್ಜಿನಾಲ್ ಪೈಸಲು ರದ್ದುಪಡಿಶಿ ಪ್ರತಿವಾದೀ ಮಠದವರು ಪೂರ್ವ ನಿಬಂಧನೇ ಮೇರಿಗೆ ನಮ್ಮ ಸ್ವಾಮಿಗಳವರ ಅನುಮತಿಯಿಂದ ಸ್ಥಳದಲ್ಲಿಯೇ, ಶಾರದಾಪೂಜೆ ಮಾಡಿಕೊಂಡು ದೇಶಗಳ ಮೇಲೆ ನೂತನ ಪ್ರಸಕ್ತಿಗಳೂ ಆಚಾರವಿಚಾರಗಳೂ ಸಹ ನಡಿಸದಂತೆ ನ್ಯಾಯವಾದ ಫೈಸಲು ಕೊಡಿಸಬೇಕೆಂಬ ವಗ್ಯೈರೆ ವಿಸ್ತಾರವಾಗಿ ಬರೆದು ಯಿದಾರೆ.

ಸನ್ ೧೮೪೭ನೇ ಯಿಸ್ವಿ ಡಿಶಂಬರು ತಾರೀಖು ೩೧ರಲ್ಲೂ ವಾದೀ ಮಠದವರು ತುಂಡು ಮಠದವರಾದ್ದರಿಂದ ಗೌರತ್ತೆ ಸಾಲದೇ ಶೃಂಗೇರಿ ಕೂಡ್ಲಿ ಎಂತ ಹೆಸರು ಇಟ್ಟುಕೊಂಡು ಇದ್ದದು ಪುನಹಾದ ಶ್ರೀ ಮಾತಂರೂ ವಗ್ಯೆರೇರಿಗೆ ಶೃತವಾಗಿ ಹುಟ್ಟಿರುವ ಸನ್ನದುಗಳು, ಪರಾಂಬರಿಸಿದರೆ ತುಂಡುಮಠದವರೆಂತ ನಿಸ್ಸಂದೇಹವಾಗಿ ತಿಳಿದುಬರುವುದಲ್ಲದೆ ತರೀಕೆರೆ ಪ್ರಾಂತ್ಯ ಅವಾಂತರದಲ್ಲಿ ಯಾರೋ ಸನ್ಯಾಸಿ ಮಠವೆಂತ ಮಾಡಿಕೊಂಡು ಇದ್ದವರೆಂತಲೂ, ದೇಶಸಂಚಾರ ಬಿರುದುಬಾವಲೀ ಯಾವ ಮರ್ಯಾದೆಯೂ ಕೂಡ್ಲಿ ಮಠಕ್ಕೆ ಸಲ್ಲುತಕ್ಕದಲ್ಲವೆಂದು ಸದರೀ ಸನ್ನದಿನಿಂದಲೇ ತಿಳಿದುಬರುತ್ತೆ. ಈ ಕೂಡ್ಲಿ ಮಠದಂತೆ ಇರುವ, ಇತರ ಮಠಗಳೆಂಬುವದು, ಯಾದರೂ ವಿರಕ್ತದೆಶೆಯಿಂದಾ ಸನ್ಯಾಸ ತೆಗದುಕೊಂಡು ಸ್ಥಳದವರ ಆಸರೆಯಿಂದ ಮಠವೆಂದು ನೇಮಿಸಿಕೊಂಡು ಬಂದ ತುಂಡು ಮಠಗಳಾದ್ದರಿಂದ ಬಲಸಾಲದೇ ಆದಿಪೀಠವಾದ ಶೃಂಗೇರಿ ಹೆಸರು ಹೇಳಿಕೊಂಡು ಪ್ರಶಿದ್ಧಿಗೋಸ್ಕರ ಕಾಗದಪತ್ರಗಳಲ್ಲಿ ಶೃಂಗೇರಿ ಹೆಸರು ಬರೆದುಕೊಳ್ಳುತ್ತಾಯಿದ್ದ ಮಾತ್ರ ಚಿಲ್ಲರೇ ಮಠದವರಿಗೆ ಯೇನು ಉಪಯೋಗಿಸೀತು. ಅನಾದಿ ಪ್ರಸಿದ್ಧವಾದ ಶೃಂಗೇರಿ ಮಠಕ್ಕೆ ಉಂಟಾದ ಮರ್ಯಾದೆಗಳಿಗೋಸ್ಕರ ರಾಕ್ಷಸ ಸಂವತ್ಸರದಲ್ಲಿ ಟೀಪೂಸುಲ್ತಾನರ ಸನ್ನದು ಕ್ರೋಧನ ಸಂವತ್ಸರದಲ್ಲಿ ಚನ್ನಪಟ್ಟಣದ, ಗೌರ್ನಮೆಂಟ್ ರಹದಾರಿ, ವಗ್ಯೆರೆ ಸನ್ನದು ಯಿದ್ದದ್ದರಿಂದಲೇ ಮಹಾರಾಜಾರಾಜಾ.ಸಾಹೇಬ್ ಬಹದೂರ್ರವರು, ಕಮೀಷನ್ನರ ಸಾಹೇಬರವರು ಸಹ, ಮಾಮೂಲ ಪ್ರಕಾರ, ರಹದಾರಿ ಮುಂತಾದ್ದು ಕೊಟ್ಟಿರುವುದರಿಂದಲೂ, ಆಸೇತು ಹಿಮಾಚಲ ಪರಿಯಂತ್ರ ಶೃಂಗೇರಿ ಮಠದ ಶಿಷ್ಯರು ಯಿರುವದರಿಂದಲೂ ಯಿವುಗಳನ್ನೆಲ್ಲಾ ನೋಡಿ ಅನಂತಶಯನ, ಹೈದರಾಬಾದು ವಗ್ಯೆರೆ ಅಧಿಕಾರಸ್ತರು ಸನ್ನದುಗಳು ಕೊಟ್ಟು ಇದ್ದಾರೆ. ದಿವಾನ್ ಪೂರ್ಣಯ್ಯನವರು ವಿಜ್ಞಾಪನಾ ಪತ್ರಿಕೆಯಲ್ಲಿ ಶೃಂಗೇರಿ ಸ್ವಾಮಿಗಳು ದೇಶಸಂಚಾರ ವಗ್ಯೆರೆ ಮಾಡಕೂಡದೆಂತ ನಿಬಂಧನೆ ಹುಟ್ಟಿತ್ತೆಂದು ಕ್ರೋಧನ ಸಂವತ್ಸರದಲ್ಲಿ ಹುಟ್ಟಿದ ಪತ್ರಿಕೆಯೆಂತಾ, ಅಪೀಲು ಅರ್ಜಿಯಲ್ಲಿ ಹೇಳುತ್ತಾರೆ. ಆ ವಿಜ್ಞಾಪನಾ ಪತ್ರಿಕೆಯಂಥಾದ್ದೂ ಅಥವಾ ಯಾವ ವಿಧದಿಂದ ಆಯಿತೋ ತಿಳಿಯಕೂಡದು. ಆದರೆ ಈಚೆಗೆ ಶುಕ್ಲಸಂವತ್ಸರದಲ್ಲಿ ಅದೇ ಪೂರ್ಣಯ್ಯನವರು ಬರೆದುಕೊಟ್ಟಿರುವ ರಹದಾರಿಯಲ್ಲಿ ಶೃಂಗೇರಿಯಿಂದ ನೇಮಕವಾದ ಮಠಮುದ್ರೆಯವರು ದೇಶದಮೇಲೆ ಶಿಷ್ಯಾರ್ಚನೆ ವಗ್ಯೆರೆ ಬಗ್ಗೆ ಬಂದುಯಿಧ್ದಾರೆ. ಯಾರಾದರೂ ಅವರ ಅನುಜ್ಞೆ ಉಲ್ಲಂಘನೆ ಮಾಡಿಯಾರು, ಹಾಗೆ ನಡದವರ ಬಂದೋಬಸ್ತು ಮಾಡತಕ್ಕದೆಂದು ಸಾಫ್‌ಹುಕುಂನಮೂದಿದೆ. ಅದು ಅರಿಜನಲ್ ವಿಚಾರಣೆಯಲ್ಲಿ ಪ್ರಕೃತ ಹಾಜರು ಇಲ್ಲದೆ ಇದ್ದಕಾರಣ ಹಾಜರು ಮಾಡಲಿಲ್ಲ. ಈಗ ವಿಚಾರಣೆಯಲ್ಲಿ ಹಾಜರುಮಾಡುತ್ತೇನೆ. ಈ ಮೇರಿಗೆ. ರಹದಾರಿ ಇರುವಲ್ಲಿ ಇದಕ್ಕೆ ಆದಿ ವಿಜ್ಞಾಪನಾ ಪತ್ರಿಕೆ ಕೂಡ್ಲಿಯವರಿಗೆ ಬರೆದುಕೊಟ್ಟರೆಂಬುದು ಹ್ಯಾಗೋ ಉಭಯವಾದಿಗಳ ಪರವಾಗಿ ಯಿರುವ ಪೂರ್ಣಯ್ಯನವರ ದಸ್ತಾವೈಜುಗಳನ್ನ ಮೊಖಾಬಿಲೆ ಮಾಡಿಸಿದರೆ ತಿಳಿದು ಬರುತ್ತೆ. ದಳವಾಯರು ಪೂರ್ಣಯ್ಯನವರು, ಸಹಾ ಬರೆದುಕೊಟ್ಟ, ಬಿನ್ನವತ್ತಲೆ ರಹದಾರಿ ವಗ್ಯೆರೆ ಮಗಲಾಯಿ ಸಾಹೇಬರು ಪೂರಾ ದರಿಯಾಫ್ತ ಮಾಡದ್ದರಿಂದ ಡಿವೋರಕ ಸಾಹೇಬರು ವಿಚಾರಣೆಮಾಡಿ ಯಿದು ಮಠದ ವ್ಯಾಜ್ಯ ಯಿದುವರಿಗೆ ಏನೇನು ಹುಕುಂಗಳು ಆಗಿದ್ದರೂ, ಪುನಃ ಕ್ರಮವಾಗಿ ದರಿಯಾಫ್ತ ಆಗಿ ಸಿವಿಲ್‌ನಲ್ಲಿ ಫೈಸಲು ಹುಟ್ಟುವವರಿಗೆ ಕೂಡ್ಲಿ ಮಠದವರು ಬಿರುದು ಬಾವಲೀ ನಿಶಿ ಸಂಚಾರ ಮಾಡಕೂಡದೆಂತಾ, ಶಿವಮೊಗ್ಗೆ ಅಪೀಲರಿಗೆ ಸಾಫ್ ಹುಕುಂ ಮಾಡಿ ಇದಾರೆ ಶಂಕರಾಚಾರ್ಯರ ಪರಂಪರಾ ಪ್ರಾಪ್ತವಾದಂಥಾ ಶೃಂಗೇರಿ ಜಗನ್ನಾಥ, ಬದರಿಕಾಶ್ರಮ, ದ್ವಾರಕಿ ಈ ನಾಲ್ಕುಮಠಗಳಾದ್ದರಿಂದ ದೇವರುಗಳು ಸಂಪ್ರದಾಯಗಳು ಆಗಿನ ನಿಬಂಧನೆ ಪ್ರಕಾರ, ಅದ್ಯಾಪೀ ನಡೆಯುತ್ತಾಯಿದೆ. ಯಲ್ಲಾ ಮಠಗಳಿಗೂ, ಮೂಲಪೀಠ ಶೃಂಗೇರಿಯಂತಾ ಆಸೇತು ಹಿಮೊಚಲ ಪರಿಯಂತ್ರಾ, ಪ್ರಸಿದ್ಧವಾಗಿ ಇದೆ. ಶಿವಗಂಗೇ ಕೋಲಾರ ಮತ್ತು ಇತರೇ ಮಠಗಳು ಕೂಡ್ಲಿ ಮಠ ಸಹಾ ಅವಾಂತರ ದೆಶೆಯಲ್ಲಿ ಉತ್ಪನ್ನವಾದ್ದೇ ಹೊರತು, ಈ ತುಂಡು ಮಠಗಳು ಶಂಕರಾಚಾರ್ಯರ ಪರಂಪರವಾದ ಶೃಂಗೇರಿ ಆದಿಪೀಠದಿಂದ ಹುಟ್ಟಿದ್ದಲ್ಲಾ, ಈ ಯಾವತ್ತೂ ಪರಾಂಬರಿಸಿ ಅಪೀಲು ರದ್ದುಮಾಡಿ ನ್ಯಾಯವಾದ ಫೈಸಲು ಕೊಡಬೇಕೆಂಬ ವಗ್ಯೆರೆ ವಿಸ್ತಾರವಾಗಿ ಬರೆದು ಇಧಾನೆ.

ಈ ಮೊಕದ್ದಮೆಯಲ್ಲಿ ದರಿಯಾಪ್ತಿ ಆದ ಅರಿಜನಲ್ ನಂಬರು ಕಟ್ಟಿನ ಕಾಗದಪತ್ರ ಸಾಕ್ಷಿ ದಸ್ತಾವೇಜು ಅಫೀಲಿನಲ್ಲಿ ದರ್ಯಾಪ್ತಿ ಆದ ವಾದಿ ಪ್ರತಿವಾದಿಗಳ ಸವಾಲ್ ಜವಾಬ್ ಮುಂತಾದ್ದು, ಮತ್ತು ಹುಜೂರು ಅದಾಲತ್ತು ನ್ಯಾಯ ಸಭೆಯವರು ನೋಡಿ ಅಲೋಚಿಸುವಲ್ಲಿ.

ಈ ಕೂಡ್ಲಿಮಠ ಶೃಂಗೇರಿಮಠದ ಆಜ್ಞಾನುಸಾರವಾಗಿರುವ ಚಿಲ್ಲರೇ ಮಠಗಳಲ್ಲಿ ಶೇರಿದ ಮಠವೆಂತಲೂ, ಇವರಿಗೆ ಅಡ್ಡಪಾಲಕಿ ಮಕರತೋರಣ ಶ್ವೇತಛತ್ರ ಪಂಚಕಲಶ, ಮುಂತಾದ ಬಿರುದುಗಳು ಇಲ್ಲವೆಂತಲೂ, ಯಿವರು ನೂತನವಾಗಿ ಕಲ್ಪಿಸಿಕೊಂಡು ಯಿದ್ದಾರೆಂತಲೂ ಈ ಬಿರುದು ಬಾವಲೀ ಸಮೇತ ಶಿವಮೊಗ್ಗೆ ಮೊದಲಾದ ಸ್ಥಳಗಳಿಗೆ ಬರಕೂಡದೆಂತಲೂ ಸಹ ಅಸಲುವಾದೀ ಶೃಂಗೇರಿ ಮಠದವರು ದಾವಾ ಅರ್ಜಿಯಲ್ಲೂ, ಸವಾಲ್ ಜವಾಬಿನಲ್ಲೂ ವಿವಾದ ಪಡುತ್ತಾರೆ.

ಈ ಮಠ ಚಿಲ್ಲರೆಮಠಕ್ಕೆ ಶೇರಿದ್ದಲ್ಲವೆಂತಲೂ ಶಂಕರಾಚಾರ್ಯರ ಪೀಠದಿಂದ ಪಾರಂಪರ್ಯವಾಗಿ ಗುರುಗಳ ಕರಕಮಲ ಸಂಜಾತವಾಗಿ ಸ್ವತಂತ್ರವಾಗಿ ಬಂದ ಮಠವೆಂತಲೂ ಪಾರಂಪರ್ಯವಾಗಿ ಬಿರುದುಗಳು ಉಂಟೆಂತಲೂ ಶಿವಮೊಗ್ಗೆ ಮೈಸೂರು ಮೊದಲಾದ ಸ್ಥಳಕ್ಕೆ ಬಿರುದುಗಳು ಸಮೇತ ಹೋಗಿ ಇದೇವೆ. ಇದಕ್ಕೆ ಅನೇಕ ದಾಖಲೇಗಳು ಇವೆ ಎಂತಲೂ ಸಹ ಅರಿಜಿನಲ್ ಪ್ರತಿವಾದಿ ಕೂಡ್ಲೀ ಶೃಂಗೇರಿಮಠದವರು ಹೇಳುತ್ತಾರೆ.

ಈ ಮುಖ್ಯವಾಗಿ ವಿವಾದಪಡುವ ಕೂಡ್ಲಿ ಶೃಂಗೇರಿಮಠ ಚಿಲ್ಲರೇಮಠಕ್ಕೆ ಶೇರಿದೆಂತಲೂ, ಇವರಿಗೆ ಬಿರುದು ಬಾವಲೀ ಇಲ್ಲವೆಂತಲೂ ಹೇಳುವ ೨ ಸಂಗತಿಗಳ ಕುರಿತು ಬೇಕಾದಸಾಕ್ಷಿ ದಸ್ತಾವೈಜುಗಳು ತೆಗೆದುಕೊಂಡು ವಿಚಾರಣೆಮಾಡದೆ ಅವರು ಕೊಟ್ಟ ವಿವಾದಕ್ಕೆ ಸಂಬಂಧಪಟ್ಟ ಅನೇಕ ಸಾಕ್ಷಿ ದಸ್ತಾವೈಜುಗಳ ವಿಚಾರಣೆಮಾಡಿ ಕೆಲವು ಅಸಂಬದ್ಧವಾದ ಸಂಗತಿಗಳನ್ನು, ಫೈಸಲಿನಲ್ಲಿ ಬರೆದು ಪ್ರತಿವಾದಿ ಕೂಡ್ಲಿ ಸ್ವಾಮಿಗಳಿಗೆ ಬಿರುದುಗಳು ಉಂಟು ಇಲ್ಲ ಎಂತ ನಿಶ್ಚಯಿಸದೇ, ವಿವಾದದಲ್ಲಿ ಹಕ್ಕು ಎಂತಾ ಕಾಣದೆ ಇರುವಂಥಾ ಶಿವಮೊಗ್ಗೆ ಮೊದಲಾದ ಹಕ್ಕು ಸ್ಥಳಗಳಿಗೆ ಬಿರುದು ಬಾವಲೀ ಸಮೇತ ಕೂಡ್ಲಿಸ್ವಾಮಿಗಳು ಬರಕೂಡದು ಎಂತಾ, ಬರೆದು ಇದಾರೆ.

ಈ ಮುಖ್ಯವಾದ ಯರಡು ಸಂಗತಿಗಳ ಕುರಿತು ಅಫೀಲು ಕೋರ್ಟಿನವರು ಯೋಚಿಸಿ ಫೈಸಲು ಮಾಡತಕ್ಕದ್ದೆಂತಲೂ ಅಭಿಪ್ರಾಯಪಡುತ್ತಾರೆ.

ಅಸಲುವಾದೀ ೪೦ ಅಸಲಪ್ರತಿವಾದಿ ೫೬ ದಸ್ತಾವೈಜುಗಳ ಹಾಜರು ಮಾಡಿದಲ್ಲದೆ ವಾದೀಕಡೆ ೪೬ ಜನ ಪ್ರತಿವಾದಿಕಡೆ ೧೫ ಜನ ಸಾಕ್ಷಿಗಳು ದರ್ಯಾಫ್ತ ಆದ್ದಲ್ಲದೆ ಇದಕ್ಕೆ ಮೊದಲು ಶ್ರೀನಿವಾಸರಾಯನ ಅಮಲಿನಲ್ಲಿ ೧೫ ಜನ ಸಾಕ್ಷಿಗಳು ವಿಚಾರಣೆ ಆದ ಕೈಫತ್ತು ಈ ಕಟ್ಟಿಗೆ ದಾಖಲಾಗಿದೆ.

ಈ ದಸ್ತೈವಜುಗಳು, ಸಾಕ್ಷಿ ವಾಙ್ಮೂಲಗಳು ಸಹ ನೋಡಿ ಅದರಲ್ಲಿ ಉಪಯೋಗಾನುಪಯೋಗವೆಂತ ಷರಾ ಬಂಡು ಈ ಫೈಸಲುನಾಮೆ ಕೊನೇಭಾಗದಲ್ಲಿ ಬರಿಯಲ್ಪಡುತ್ತದೆ.

ಇದರಲ್ಲಿ ಮುಖ್ಯವಾದ ವಿವಾದಕ್ಕೆ ಸಂಬಂಧಪಟ್ಟ ಸಾರಾಂಶ ವುದಾಹರಿಸಲ್ಪಡುವದೇನೆಂದರೆ

ಕೂಡ್ಲಿಮಠದವರು ಶೃಂಗೇರಿ ಮಠಕ್ಕೆ ಕಪ್ಪಕಾಣಿಕೆ ಕೊಟ್ಟ ಹಾಗೂ ಅವರ ಆಜ್ಞಾನುಸಾರವಾಗಿ ನಡೆದುಕೊಂಡುಬಂದ ಹಾಗೂ ಯಾವ ಕಾಗದಪತ್ರಗಳಿಂದಲೂ ರುಜುವಾಗಿಲ್ಲ ಕೂಡ್ಲಿ ಸ್ವಾಮಿಗಳು ಬಹು ದಿವಸದಾರಭ್ಯ ಗುರುಪರಂಪರವಾಗಿ ಈ ದೇಶದಲ್ಲೂ, ಪರದೇಶದಲ್ಲೂ ಬಹುದೂರ ದೇಶಸಂಚಾರಮಾಡಿಕೊಂಡು ಬಂದಹಾಗೆ ಅರಿಜಿನಾಲ್ ಪ್ರತಿವಾದಿ ಹಾಜರು ಮಾಡಿರುವ ಕೆಲವು ದಸ್ತಾವೈಜುಗಳಿಂದ ರುಜುವಾಗಿ ಇದೆ. ಮತ್ತು ಕೂಡ್ಲಿ ಸ್ವಾಮಿಗಳು ದೇಶಸಂಚಾರಮಾಡಿಕೊಂಡು ಇರಬೇಕೆಂತಲೂ, ಶೃಂಗೇರಿ ಸ್ವಾಮಿಗಳು ಸ್ಥಳದಲ್ಲಿ ದೇವತಾರಾಧನೆ ಮಾಡಿಕೊಂಡಿರಬೇಕೆಂತಲೂ, ದಿವಾನ್ ಪೂರ್ಣಯ್ಯನವರು ಕ್ರೋಧನ ಸಂ। ಫಾಲ್ಗುಣ ಬ. ೬ ರಲ್ಲೂ ಬರದಿರುವ ೨೪೧ ನೇ ಸಂಖೆ ಪರವಾನೇ ಎಂಬ ವಿಜ್ಞಾಪನಾಪತ್ರಿಕೆಯಿಂದ ಸ್ಪಷ್ಟವಾಗಿ ಕಾಣುತ್ತದೆ. ಮತ್ತು ಅಸಲು ವಾದಿ ಹಾಜರುಮಾಡಿರುವ ಮಹಾರಾಜ ರಾಜಾಸಾಹೇಬ ಬಹದ್ದೂರ್‌ರವರು, ಸರ್ವಧಾರಿ ಸಂ। ಜ್ಯೇಷ್ಠ ಬ. ೮ನೇ ತಾರೀಖಿನಲ್ಲಿ ಬರದಿರುವ ೧೯೫ನೇ ಸಂಖ್ಯೆ ಪಟ್ಟು ನಿರೂಪದಲ್ಲಿ ಶೃಂಗೇರಿ ಮಠದ ಆಜ್ಞಾನುಸಾರವಾಗಿ ನಡೆದುಕೊಳ್ಳುವ ರಾಮಚಂದ್ರಪುರ, ಮುಳುಬಾಗಿಲು ಮೊದಲಾದ ತುಂಡು ಮಠಗಳೆಂತ ಬರೆದು ಇದೆಯೇ ಹೊರತು ಕೂಡ್ಲಿಮಠ ಪ್ರಶಿದ್ಧವಾಗಿ ಇದ್ದದ್ದರಿಂದಾ ಕೂಡ್ಲಿಮಠ ತುಂಡು ಮಠವೆಂತಾ ಬರೆಯಲಿಲ್ಲ.

ಶೃಂಗೇರಿಮಠ ಆದಿಪೀಠವಾದರೂ, ಅದಕ್ಕೆ ಸಂಬಂಧಪಟ್ಟ ಅನೇಕ ಮಠಗಳು ಚಿರಕಾಲದಿಂದ ಪಾರಂಪರ್ಯವಾಗಿ ಸ್ವತಂತ್ರದಿಂದ ಸಂಚರಿಸುವುದು ಅನ್ಯಮತಸ್ಥರ ಮಠಗಳ ಪದ್ಧತಿಗಳಿಗೆ ಅವಿರೋಧವಾಗಿ ಇರುತ್ತದೆ.

ಈ ಹಕ್ಕುಗಳಿಂದ ಕೂಡ್ಲಿ ಶೃಂಗೇರಿಮಠ ತುಂಡುಮಠಗಳಲ್ಲಿ ಶೇರಲಿಲ್ಲೆಂತಲೂ ಪಾರಂಪರ್ಯವಾಗಿ ಬಂದ ಸ್ವತಂತ್ರ ಮಠವೆಂತಲೂ ಸ್ಪಷ್ಟವಾಗಿ ಕಾಣುತ್ತದೆ.

ಇಂಥಾ ಮಠಕ್ಕೆ ಬಿರುದುಗಳು ಉಂಟೋ ಇಲ್ಲವೋ ಎಂತ ಯೋಚಿಸುವಲ್ಲಿ ಉಭಯವಾದಿಗಳೂ ಕೊಟ್ಟ ದಸ್ತೈವಜುಗಳಿಂದಲೂ ಸಾಕ್ಷಿಗಳಿಂದಲೂ ಇಂಥಾ ಬಿರುದು ಇಂಥಾ ಮಠಕ್ಕೆ ಉಂಟು ಇಂಥಾ ಮಠಕ್ಕೆ ಇಲ್ಲವೆಂತ ನಿಶ್ಚಯುವಾಗೊದಿಲ್ಲ. ಆದರೆ ಮಾಮೂಲು ಹೇಗೆ ನಡೆದು ಬಂತು ಎಂತಾ ತಿಳಿದುಕೊಂಡು ಅದರ ಮೇಲೆ ನಿಶ್ಚಯಿಸತಕ್ಕದ್ದಾಗಿತೋರಿ ದರ್ಯಾಫ್ತದ ಸಾಕ್ಷಿ ದಸ್ತೈವಜುಗಳ ನೋಡುವಲ್ಲಿ ಕೂಡ್ಲಿ ಶೃಂಗೇರಿಸ್ವಾಮಿಗಳು ಸಿದ್ಧಾರ್ಥಿ ಸಂವತ್ಸರದ ಆಚೆಗೆ ಶಿವಮೊಗ್ಗೆ ಸ್ಥಳಕ್ಕೆ ಬಿರುದುಗಳ ಸಮೇತ ಬಂದಂಥಾದ್ದಕ್ಕೆ ಬಹುಕಾಲವಾದ್ದರಿಂದ ಸಾಕ್ಷಿಗಳು ಇಲ್ಲದೇ ಇದ್ದದ್ದರಿಂದ ನಿಶ್ಚಯಿಸುವುದಕ್ಕೆ ಇಲ್ಲದೆ ಇದ್ದಾಗ್ಯೂ ಈಚೆಗೆ ೫೦ ವರ್ಷ ಎಂದರೆ ಶಿದ್ಧಾರ್ಥಿಯಿಂದಾ ಈಚೆಗೆ ಮೂರಾವರ್ತಿ ಕೂಡ್ಲಿ ಶೃಂಗೇರಿಸ್ವಾಮಿಗಳು ಶಿವಮೊಗ್ಗೆಗೆ ಬಿರುದುಗಳ ಸಮೇತ ಬಂದು ಇದ್ದಹಾಗೆ ಅಸಲುವಾದಿಕಡೆ ಮೂರು ಪ್ರತಿವಾದಿಕಡೆ ಆರು ಶಿವಮೊಗ್ಗೆಗೆ ಬಂದದ್ದು ನೋಡಿ ಇಧೇವೆಂತಲೂ, ವಾದೀಕಡೆ ಒಂಭತ್ತು ಬಂದದ್ದು ಕೇಳಿ ಇಧೇವೆಂತಾ ವಾದೀಕಡೆ ೫ ಅಡ್ಡಪಾಲಖಿ, ಮಕರತೋರಣ ಶ್ವೇತಛತ್ರ, ಪಂಚದೀವಟಿಗೆ, ಮೊದಲಾದ ಬಿರುದುಗಳಿಂದ ಬಂದಹಾಗೆ ಪ್ರತಿವಾದಿಕಡೆ ೪ ಮತ್ತು ಸ೯ ೧೮೩೮ನೆ ಯಿಸವಿಯಲ್ಲಿ

ನಗರ ಡಿವಿಜನ್ ಸೂಪ್ರಿಂಟೆಂಡ್ಯಾಂಟ್ ಸಾಹೇಬರವರ ಹುಕ್ಕುಂ ಮೇರಿಗೆ ಶಿವಮೊಗ್ಗ ಅಮೀಲ್ ಶ್ರೀನಿವಾಸರಾಯನ ದರ್ಯಾಫ್ತಿಯಲ್ಲಿ ಅಡ್ಡಪಾಲಖಿ. ಮಕರತೋರಣ, ಶ್ವೇತಛತ್ರ ಮೊದಲಾದ ಬಿರುದುಗಳಿಂದ ಶಿವಮೊಗ್ಗೆಗೆ ಬಂದಹಾಗೆ ೧೩ ಈ ಪ್ರಕಾರ ಇಷ್ಟು ಜನ ಸಾಕ್ಷಿಗಳಿಂದಾ ರುಜು ಆಗಿ ಇದೆ. ಆದರೆ ಇದಕ್ಕೆ ಜಬರದಸ್ತಿಯಿಂದಲೂ ಸರಕಾರದ ಕುಮ್ಮಖಿಯಿಂದಲೂ ಕೂಡ್ಲಿ ಸ್ವಾಮಿಗಳು ಶಿವಮೊಗ್ಗಿಗೆ ಬಂದಹಾಗೆ ವರಿಜನಲ್ ಪೈಸಲಿನಲ್ಲಿ ಬರೆದು ಇದಾರೆ,

ವಂದಾವರ್ತಿ ಆದರೆ ಜಬರದಸ್ತಿಯಿಂದ ಬಂದಿದ್ದರು ಎಂತ ಎಣಿಸಬಹುದು, ಮೂರಾವರ್ತಿ ಬಂದದ್ದೂ ರುಜುವಾಗಿ ಇರುವದ್ದರಿಂದಾ ಜಬರದಸ್ತಿಯೆಂತಾ ಹೇಳುವುದು ಯುಕ್ತವಲ್ಲಾ ಮತ್ತು ಶೃಂಗೇರಿ ಮಠದ ಶಿಷ್ಯ ಬಾಹುಳ್ಯದಿಂದ ಕಲಹ ಪಡುವುದಕ್ಕೆ ಪ್ರಯತ್ನಪಟ್ಟ ಸಂಗತಿ ಸರಕಾರದವರಿಗೆ ತಿಳಿದು ಮಾಮೂಲ ವಿಚಾರಿಶಿ ಖಜಿಯಾಬಬೇಡೆ ನಡೆಯುದರೀತಿಗೆ ಬಂದೋಬಸ್ತು ಮಾಡಿಸಿದ ಮಾತ್ರದಿಂದ ಸರಕಾರದ ಕುಮ್ಮಕಿನಿಂದಾ ಕೂಡ್ಲೀ ಸ್ವಾಮಿಗಳು ಶಿವಮೊಗ್ಗೆಗೆ ಬಂದಹಾಗೆ ಎಣಿಸುವುದಕ್ಕೆ ಆಗುವುದಿಲ್ಲ. ಇಂಥಾ ಬಂದೋಬಸ್ತು ಇಂಥಾ ವಿಷಯಗಳಲ್ಲಿ ಸರಕಾರದವರು ಮಾಡಿಕೊಡುವುದು ಸಕಲ ದೇಶಗಳಲ್ಲೂ ಪದ್ಧತಿ ಉಂಟು ಆದ್ದರಿಂದ ಇದು ಜಬರದಸ್ತಿಯೆಂತಲೂ ಸರಕಾರದ ಕುಮ್ಮಕು ಎಂತಲೂ ಹೇಳುವುದು ಯುಕ್ತವಲ್ಲ

ಮತ್ತು ಆಂಗೀರಸ ಸಂವತ್ಸರದಲ್ಲಿ ಶ್ರೀರಂಗಪಟ್ಟಣಕ್ಕೆ ಕೂಡ್ಲೀ ಸ್ವಾಮಿಗಳು ಬಿರುದುಗಳು ಸಮೇತ ಬಂದವ್ಯಾಳ್ಯಾ ಶ್ರೀರಂಗಪಟ್ಟಣದ ಕೋಟೆವಳಗೆ ಹೋಗುವಾಗ ಅಲ್ಲಿ ಇರುವ ಶೃಂಗೇರಿ ಮಠದ ಶಿಷ್ಯರು ಅಟಕಾಯಿಶಿದ ಹಾಗೂ, ಶ್ರೀರಂಗಪಟ್ಟಣದ ಜಿಲ್ಲಾ ಕೋರ್ಟಿನಲ್ಲಿ ಫಿರ್ಯಾದು ಮಾಡಿದ ಹಾಗೂ ವಿವಾದದಲ್ಲಿ ಹೇಳಿ ಸಾಕ್ಷಿಗಳನ್ನು ಮಾಡಿಸಿ ಇದ್ದಾರೆ. ಆ ಕಾಲದಲ್ಲಿ ಶ್ರೀರಂಗಪಟ್ಟಣ ಕುಂಫಣೀ ಸ್ವಾಧೀನದಲ್ಲಿ ಇದ್ದದ್ದರಿಂದಾ, ಆಗ ಶೃಂಗೇರಿ ಮಠದ ಶಿಷ್ಯರು ಕಲಹಗಳು ಮಾಡಿದಹಾಗೆ ತೋರುತ್ತೆ ಹೊರ್ತು ಆ ಜಿಲ್ಲಾಕೋರ್ಟಿನಲ್ಲಿ ವಿವಾದ ಪಟ್ಟು ಯಾವುದೊಂದೂ ಫೈಸಲುಪಡಕೊಳ್ಳಲಿಲ್ಲವೆಂತ ಶೃಂಗೇರಿ ಮಠದ ದೇಶಾಧಿಕಾರಿ ಶೇಷಜೋಯಿಸರು ಕೊಟ್ಟ ಮಜಕೂರಿನಲ್ಲಿ ಬರಶಿರುವ ಸವಾಲ ಜವಾಬಿನಿಂದಲೇ ಸ್ಪಷ್ಟವಾಗುತ್ತದೆ.

ಮತ್ತೂ ಮಹಾರಾಜ ರಾಜಾಸಾಹೇಬ ಬಹದ್ದೂರ್‌ರವರು ಸದರೀ ಆಂಗೀರಸ ಸಂವತ್ಸರದಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳನ್ನು ಮೈಸೂರಿಗೆ ಬರುವ ಬಗ್ಗೆ ರಹದಾರಿ ನಿರೂಪ ಸಹ ಕಳುಹಿಸಿಕೊಟ್ಟ ಪ್ರಕಾರ ಅವರು ಮೈಸೂರಿಗೆ ಬಂದಾಗ ಸಮಸ್ತ ಬಿರುದುಗಳಿಂದ ಬಂದಹಾಗೂ ಆ ಸಂಗತಿ ಮಹಾರಾಜಾ ರಾಜಾಸಾಹೇಬ ಬಹದ್ದರವರಿಂದ ತಿಳಿದುಕೊಳ್ಳಬಹುದೆಂತಲೂ ಅಫೀಲಿ ಅರ್ಜಿಯಲ್ಲಿ ಬರದು ಇರುವದಲ್ಲದೆ ಮೈಸೂರಿಗೆ ಸ್ವಾಮಿಗಳು ಬಂದಕಾಲದಲ್ಲಿ ಮಹಾರಾಜ ರಾಜಾಸಾಹೇಬ್ ಬಹದ್ದರವರು ಅಠಾರಾಕಛೇರೀ ಜನಗಳು ಇಸ್ತಕ ಬಾಲ ಬಂದು ಸ್ವಾಮಿಗಳನ್ನು ಕರೆದುಕೊಂಡು ಬಂದರೆಂತಲೂ ಸ್ವಾಮಿಗಳು ಬರುವಾಗ್ಯೆ ಅಡ್ಡಪಾಲಕಿ, ಮಕರತೋರಣ, ಪಂಚಕಲಶ, ಹಗಲು ದೀವಟಿಗೆ ಮುಂತಾದ ಬಿರುದುಗಳಿಂದ ಗ್ರಾಮಪ್ರವೇಶಮಾಡಿದರೆಂತಲೂ ಅರಿಜಿನಲ್ ಪ್ರತಿವಾದಿ ಕೋರ್ಟ ಮಜಕೂರುಸವಾಲ ಜವಾಬಿನಲ್ಲಿ ಹೇಳಿ ಇದಾರೆ.

ಕೂಡ್ಲೀ ಸ್ವಾಮಿಗಳು ಮೈಸೂರಿಗೆ ಬಂದದ್ದು ಉಂಟು ದಿವಾನ್ ರಾಮರಾಯರು ಅಭಿಮಾನಿಸಿ ಸವಾರು ಬಾರಿನಿಂದಾ ಕರಶಿ ಇದ್ದರು. ಆ ಗದ್ದಲದಲ್ಲಿ ನಮ್ಮ ಮಠದವರು ವಬ್ಬರೂ ಹೋಗಲಿಲ್ಲ. ಆದ್ದರಿಂದಾ ಆಗ ಹ್ಯಾಗೆ ಬಂದರೋ ತಿಳಿಯಲಿಲ್ಲವೆಂತ ಶೃಂಗೇರಿ ಮಠದ ದೇಶಾಧಿಕಾರರಾದ ಶೇಷಜೋಯಿಸರು ಅಫೀಲಿನಲ್ಲಿ ಸವಾಲು ಜವಾಬಿನಲ್ಲಿ ಹೇಳಿ ಇಧಾರೆ. ಆ ಕಾಲದಲ್ಲಿ ಶೃಂಗೇರಿ ಮಠಮುದ್ರೆಯವರು ತೀರ್ಥಪ್ರಸಾದಕ್ಕೆ ಬಂದು ಇದ್ದರು ಎಂತ ಅಸಲ್ ಪ್ರತಿವಾದಿ ಸವಾಲ್‌ಜವಾಬಿನಲ್ಲಿ ಹೇಳಿ ಇಧಾರೆ. ಹಾಗೆ ಕೂಡ್ಲಿ ಸ್ವಾಮಿಗಳಿಗೆ ಬಿರುದುಗಳು ಇಲ್ಲದೆ ಇದ್ದಲ್ಲಿ ಆ ಕಾಲದಲ್ಲಿ ಶೃಂಗೇರಿ ಮಠದವರು, ಮಹಾರಾಜಾರಾಜಾಸಾಹೇಬ್ ಬಹದ್ದೂರ್‌ರವರಲ್ಲಿ ತಿಳಿಯಪಡ್ಸಿ ವ್ಯವಸ್ಥೆಮಾಡಿಕೊಳ್ಳದೆ ಇರಲಾರರು. ಮತ್ತು ಆ ಕಾಲದಲ್ಲಿ ಮೈಸೂರಲ್ಲಿ ಯಾವ ಕಲಹಗಳು ನಡೆದಹಾಗೆ ಹೇಳುವುದಿಲ್ಲ. ಕೂಡ್ಲಿ ಸ್ವಾಮಿಗಳು ಶಿವಮೊಗ್ಗೆಗೂ ಶ್ರೀರಂಗಪಟ್ಟಣಕ್ಕೂ ಬಿರುದುಗಳ ಸಮೇತ ಬಂದಾಗ ಶೃಂಗೇರಿ ಮಠದ ಶಿಷ್ಯರು ಅಟಕಾಯಿಸಿದ್ದರಿಂದ ಅವರಿಗೆ ಬಿರುದುಗಳು ಯಿಲ್ಲವೆಂತ ಹೇಳುತ್ತಾರೆ. ಕೆಲವು ಸ್ಥಳಗಳಲ್ಲಿ ಅಟಕಾಯಿಸಿದಹಾಗೂ ಕೆಲವು ಸ್ಥಳಗಳಲ್ಲಿ ಅಟಕಾಯಿಸುವುದಕ್ಕೆ ಪ್ರಯತ್ನಪಟ್ಟಹಾಗೂ ಸಾಕ್ಷಿಗಳು ಹೇಳುತ್ತಾರೆ ಹೊರ್ತು ಇವರಿಗೆ ಪಾರಂಪರ್ಯವಾಗಿ ಬಿರುದುಗಳು ಇಲ್ಲವೆಂತ ನಿಷೇಧಿಸಿ, ಯಾವ ಸಾಕ್ಷಿಗಳೂ ಹೇಳುವುದಿಲ್ಲವಾದ್ದರಿಂದಲೂ, ವಂದು ಮಠಾಧಿಪತಿಗಳಿಗೆ ಶಿಷ್ಯ ಪ್ರಾಬಲ್ಯವೂ ಬಾಹುಳ್ಯವೂ ಯಿರುವಂಥಾ ಸ್ಥಳಗಳೆಲ್ಲಾ ಮತ್ತೊಂದು ಮಠಾಧಿಪತಿಗಳು ಬಂದಲ್ಲಿ, ಬಿರುದುಗಳ ವಿಷಯ ಅವರ ಶಿಷ್ಯರು ಕೊಟ್ಟುತೋರಿ ಕಲಹಗಳಮಾಡಿ ಹರಕತ್ತು ಮಾಡುವದು ಯಿಲ್ಲಿಯ ಪದ್ಧತಿ ಉಂಟು ಅಂಥಾ ಕಲಹಗಳು ನಡೆದಮಾತ್ರದಿಂದಲೇ ಅವರುಗಳಿಗೆ ಬಿರುದುಗಳು ಯಿಲ್ಲಾ ಎಂತಾ ಹೇಳುವುದಕ್ಕೆ ನ್ಯಾಯ ಸಾಲುವುದಿಲ್ಲ. ಈ ಸಬುಬುಗಳಿಂದಲೂ ಅರಿಜನಾಲ್ ವಾದಿಕಡೆಯವರು ಶ್ರೀರಂಗಪಟ್ಟಣದಲ್ಲಿ ಕಲಹಗಳು ನಡಶಿದ ಮೇರಿಗೆ ಮೈಸೂರಲ್ಲಿ ಅಟಕಾವು ಮಾಡಿ ಕಲಹಗಳು ನಡೆದಹಾಗೆ ಹೇಳುವುದಿಲ್ಲವಾದ್ದರಿಂದಲೂ ಅವರು ಬಿರುದುಗಳ ಸಂಗಡ ಮೈಸೂರಿಗೆ ಬರಲಿಲ್ಲ ಎಂತಾ ಸಾಫ್ ಹೇಳವೆ ಮೈಸೂರಿಗೆ

ಬಂದು ಯಿದ್ದರು, ಹೇಗೆ ಬಂದು ಇದ್ದರೋ ತಿಳಿಯದೆಂತ ಹೇಳಿರುವದ್ದರಿಂದಲೂ ಸಹ, ಕೂಡ್ಲಿ ಶೃಂಗೇರಿಸ್ವಾಮಿಗಳಿಗೆ ಬಿರುದುಗಳು ಉಂಟು ಎಂತಲೂ ಬಿರುದುಗಳ ಸಂಗಡ ಮೈಸೂರಿಗೆ ಬಂದಹಾಗೂ ಕಾಣುವುದಲ್ಲದೆ ಮೈಸೂರು ಸಂಸ್ಥಾನಕ್ಕೆ ಅಧಿಪತಿಗಳಾಗಿರುವಂಥಾ ಮಹಾರಾಜ ರಾಜಾಸಾಹೇಬ ಬಹದ್ದರವರ ಬಳಿಗೆ ಬಿರುದುಗಳ ಸಂಗಡ ಬಂದಮೇಲೆ ಇವರಿಗೆ ಬಿರುದುಗಳು ಉಂಟು ಇಲ್ಲ ಎಂತ ಸಂಶಯಪಡುವುದಕ್ಕೆ ಎಷ್ಟು ಮಾತ್ರವೂ ಆಸ್ಪದ ತೋರುವದಿಲ್ಲ.

ಈ ಪ್ರಕಾರ ಶಿದ್ಧಾರ್ಥಿಯಿಂದ ಈಚೆಗೆ ಶಿವಮೊಗ್ಗಿಯ ಸ್ಥಳಕ್ಕೆ ಬಿರುದುಗಳು ಸಮೇತ ಕೂಡ್ಲಿ ಶೃಂಗೇರಿ ಸ್ವಾಮಿಗಳು ಮೂರಾವರ್ತಿ ಬಂದಹಾಗೂ ಶ್ರೀರಂಗಪಟ್ಟಣಕ್ಕೆ ಬಂದಾಗ ಕಲಹಗಳು ನಡದದ್ದರಿಂದಲೇ ಬಿರುದುಗಳಿಂದಲೇ ಬಂದಹಾಗೂ ಮೈಸೂರಿಗೆ ಬಿರುದುಗಳ ಸಂಗಡ ಬಂದಹಾಗೂ ಸಹ ಸಾಫ್ ರುಜುವಾಗಿರುವಲ್ಲಿ ಶಿದ್ಧಾರ್ಥಿಗೆ ಆಚೆ ಬಹುಕಾಲದಲ್ಲಿ ಹುಟ್ಟಿದಂಥಾ ಉಭಯವಾದಿಗಳೂ ಹಾಜರು ಮಾಡಿದಂಥಾ ಈ ಕಾಲದಲ್ಲಿ ವಿಚಾರಣೆಗೆ ಅಸಾಧ್ಯವಾಗಿರುವಂಥಾ ದಸ್ತೈವೇಜುಗಳ ಮೆತಲಬುಗಳನ್ನು ಯಥಾರ್ಥಭಾವಿಸಿ ಅವುಗಳನ್ನು ಮುಖ್ಯವಾಗಿ ಫೈಸಲಿನಲ್ಲಿ ಉದಾಹರಿಶಿ ಅಸಲ ವಾದಿ ಪಕ್ಷಕ್ಕೆ ಬಲವೂ ಅಸಲ ಪ್ರತಿವಾದಿ ಪಕ್ಷಕ್ಕೆ ದುರ್ಬಲವೂ ಉಂಟುಮಾಡಿ ವಿವಾದಕ್ಕೆ ಸಂಬಂಧಪಡದೆ ಇರುವ ಸಂಗತಿಗಳನ್ನು ವಿಸ್ತರಿಸಿ ಅಸಲು ಫೈಸಲಿನಲ್ಲಿ ಬರೆದು ಇಧಾರೆ. ಆದಕಾರಣ ಅವುಗಳ ಪೂರ್ವಪಕ್ಷ, ಸಿದ್ಧಾಂತ ಮಾಡುವುದಕ್ಕೆ ಅವಶ್ಯಕ ತೋರಲಿಲ್ಲ. ಆದರೆ ಅರಿಜನಲ್ ಫೈಸಲಿನಲ್ಲಿ ಕೆಲವು ಸಾಕ್ಷಿಗಳು ದಸ್ತೈವಜುಗಳು ಅರಿಜನಾಲ್‌ವಾದಿಗೆ ಸಾಧಕತ್ವೇನ ನಮೂದುಮಾಡಿ ಉದಾಹರಿಸಿ ಇಧಾರೆ. ಆ ಸಾಕ್ಷಿಗಳಿಗೂ ದಸ್ತೈವಜುಗಳಿಗೂ, ಕಡಿಮೆಸಾಕ್ಷಿ ದಸ್ತೈವಜುಗಳು ವಿಶಿಷ್ಟಕ್ಕೂ ಇದರ ಕೆಳಗೆ ಬರೆದಿರುವ ಷರಾದಿಂದಾ ಅವುಗಳು ವಿವಾದಕ್ಕೆ ಉಪಯೋಗಿಸುವುದಿಲ್ಲ.

ಸದರಿ ನ್ಯಾಯ ಕಾರಣಗಳಿಂದ ಕೂಡ್ಲಿ ಶೃಂಗೇರಿ ಮಠ ತುಂಡು ಮಠವಲ್ಲವೆಂತಲೂ, ಸ್ವತಂತ್ರಮಠವೆಂತಲೂ ವಿವಾದಪಡುವ ಬಿರುದುಗಳು ಕೂಡ್ಲಿ ಸ್ವಾಮಿಗಳಿಗೆ ಉಂಟೆಂತಲೂ ಆ ಬಿರುದುಗಳಿಂದ ದೇಶ ಸಂಚಾರಮಾಡಿ ಯಿಧಾರೆಂತಲೂ ಸ್ಪಷ್ಟವಾಗಿ ರುಜುವಾಗಿ ಇರುವುದ್ದರಿಂದ ಸದರಿ ಕೂಡ್ಲಿ ಶೃಂಗೇರಿ ಸ್ವಾಮಿಗಳು ಅಡ್ಡಪಾಲಕಿ, ಮಕರ ತೋರಣ, ಪಂಚ-ಕಲಶ, ಹಗಲು ದೀವಟಿಗೆ ಮೊದಲಾದ ಬಿರುದುಗಳ ಸಮೇತ ದೇಶ ಸಂಚಾರ ಮಾಡಬಹುದೆಂತ ಅಭಿಪ್ರಾಯ ಪಡುವದ್ದರಿಂದ ಅರಿಜನಾಲ್ ಫೈಸಲು ರದ್ದುಮಾಡಿ ವಾದಿ ಅಪೀಲ ಮಂಜೂರ್ ಮಾಡಲ್ಪಟ್ಟು ಇಥೆ.

ವಾದಿ ಪ್ರತಿವಾದಿಗಳು ಹಾಜರು ಮಾಡಿರುವ ದಸ್ತೈವಜುಗಳು ಈ ವಿವಾದಕ್ಕೆ ಉಪಯೋಗಾನುಪಯೋಗವೆಂದು ವಿವರಿಶಿರುವದೇನಂದರೆ

೧೮೯ ನೇ ಶಂಬುಛತ್ರಪತಿಯವರು ಲಕ್ಷ್ಮೇಶ್ವರದ ಖಾನ ಗೌಡಗೆ ಬರದದ್ದರಲ್ಲಿ ಶೃಂಗೇರಿ ಮಠ ಅನಾದಿ ಇಥೆ ಕೂಡ್ಲಿಯವರು ಶೃಂಗೇರಿ ಹೆಸರು ಹೇಳಿಕೊಂಡು ಮಠಾಧಿಪತ್ಯ ಮಾಡಿಕೊಂಡು ಸಂಚಾರ ಮಾಡುತ್ತಾರೆ ಅವರಿಗೆ ಸಂಬಂಧವಿಲ್ಲ ಎಂತ ಬರೆದು ಇದೆ. ಇದರಲ್ಲಿ ಸಾಲ ಮಾಹೆ ತಾರೀಖ ಇಲ್ಲ. ಕೂಡ್ಲಿಮಠದವರು ಬಹುದಿವಸದಿಂದಾ ಮಠಾಧಿಪತ್ಯ ಮಾಡಿಕೊಂಡು ಯಿರುವದ್ದರಿಂದ ಇದು ವಾದೀವಿವಾದಕ್ಕೆ ಉಪಯೋಗವಿಲ್ಲ

೧೯೦ ನೆ ಬಾಬ್ತು ಶೃಂಗೇರಿ ಸ್ವಾಮಿಗಳಿಗೆ ಶ್ರೀರಂಗಪಟ್ಟಣದ ಕಮರಿ ನರಸಯ್ಯ ಅಂಗೀರಸ ಸಂವತ್ಸರದ ಆಶ್ವೀಜ ಶುದ್ಧ ೧೫ ಯಲ್ಲೂ ಬರದ್ದರಲ್ಲಿ ಕೂಡ್ಲಿ ಸ್ವಾಮಿಗಳು ಬಿರುದು ಬಾಹುಳ್ಯದಿಂದ ಶ್ರೀರಂಗಪಟ್ಟಣದ ಕೋಟೆಗೆ ಶ್ರೀರಂಗನಾಥಸ್ವಾಮಿಯವರ ದರ್ಶನಾ ಮಾಡಬೇಕೆಂದು ಹೊರಟುಬಂದ ವರ್ತಮಾನ ಕೇಳಿ ಅಶೇಷ ಮಹಾ ಜನಂಗಳು ಕೂಡಿ ಆಟಕಾಯಿಸಿ ಕಮಿಟಿಯವರಿಗೂ ಫಿರ್ಯಾದು ಆಗಿ ಧೊರೆಗಳವರು ಹುಕ್ಕುಂ ಕೊಡಲಿಲ್ಲ ವಾದ್ದರಿಂದ ಹಿಂದಕ್ಕೆ ಹೊರಟುಹೋದರೆಂದು ಬರೆದು ಯಿದೆ. ಇವನು ಶೃಂಗೇರಿ ಮಠದ ಶಿಷ್ಯನಾದ್ದರಿಂದ ಆ ಕಾಲದಲ್ಲಿ ನಡೆದ ಸಂಗತಿ ಬರೆದು ಇಧಾನೆ ಹೊರ್ತು ಸಂಸ್ಥಾನಾಧಿಪತಿ ವಿವಾದ ವಿಚಾರಿಸಿ ವ್ಯವಸ್ಥೆ ಮಾಡಿದ ಹಾಗೆ ಬರದು ಇಲ್ಲವಾದ್ದರಿಂದ ಇದು ವಾದೀವಿವಾದಕ್ಕೆ ಉಪಯೋಗವಿಲ್ಲ.

೧೯೧ನೇ ಬಾಬತು ಶ್ರೀರಂಗಪಟ್ಟಣದ ಮಹಾಜನಂಗಳು, ಮಠಮುದ್ರೆಯವರು ಸಹ ಅಂಗೀರಸ ಸಂವತ್ಸರದ ಆಶ್ವೀಜ ಬ ೩ ಯಲ್ಲೂ ಶೃಂಗೇರಿ ಸ್ವಾಮಿಗಳಿಗೆ ಸದರಿ ಮೇರಿಗೆ ಬರೆದು ಇಧಾರೆ. ಇಂಥಾ ಕಲಹಗಳು ಶಿಷ್ಯ ಬಾಹುಳ್ಯವೂ ಪ್ರಾಬಲ್ಯವೂ ಯಿದ್ದಸ್ಥಳಗಳಲ್ಲಿ ನಡೆಯುವ ಸಂಪ್ರದಾಯ ಯಾವ ದೇಶದಲ್ಲೂ ಉಂಟು. ಇದರಿಂದಲೇ ಬಿರುದುಬಾವಲಿ ಕೂಡಲೀಮಠದವರಿಗೆ ಇಲ್ಲ ಎಂತಾ ಹೇಳುವುದಕ್ಕೆ ಆಗುವುದಿಲ್ಲ. ಮತ್ತು ಮಹಾರಾಜ ರಾಜಾಸಾಹೇಬ ಬಹದರವರ ರಹದಾರೀ ಮೇರಿಗೆ ಕೂಡ್ಲಿ ಸ್ವಾಮಿಗಳು ಮೈಸೂರಿಗೆ ಬಂದಾಗ ಯಾವ ಪ್ರಕಾರ

ಬಂದರೋ ಆ ಸಂಗತಿ ಎಬ್ಬರೂ ಹೇಳುವುದಿಲ್ಲಾ. ಬಿರುದುಬಾವಲೀಸಮೇತ ಮೈಸೂರಿಗೆ ಬಂದ ಬಗ್ಗೆ ಅಲ್ಲೀ ಮರ್ಯಾದೆಗಳು ನಡೆದ ಸಂಗತೀ ಸಹಾ ಮಹಾರಾಜ ರಾಜಾಸಾಹೇಬ ಬಹದರವರಿಂದ ತಿಳಿದುಕೊಳ್ಳಬಹುದೆಂತ ಅಪೀಲ ಅರ್ಜಿಯಲ್ಲಿ ಕೂಡ್ಲಿಮಠದವರು ಬರೆದು ಇಧಾರೆ. ಕೂಡ್ಲಿಸ್ವಾಮಿಗಳಿಗೆ ಬಿರುದುಬಾವಲೀ ಉಂಟೋ ಇಲ್ಲವೋ ಎಂತ ತಿಳಿದುಕೊಳ್ಳಬೇಕೆಂತ ಯೋಚಿಸುವಲ್ಲಿ ಅವರಿಗೆ ಇಲ್ಲವೆಂತ ಶೃಂಗೇರಿ ಮಠದವರು ಅಪೀಲ ಫಿರ್ಯಾದಿನಲ್ಲಿ ಹೇಳುವುದಿಲ್ಲವಾದ್ದರಿಂದ ವಿಚಾರಿಸುವುದಕ್ಕೆ ಜರೂರು ತೋರಲಿಲ್ಲ. ಆದಕಾರಣ ಇದು ವಾದೀವಿವಾದಕೆ ಉಪಯೋಗವಿಲ್ಲ.

೧೯೨ನೇ ಬಾಬ್ತು ಶೃಂಗೇರಿ ಸ್ವಾಮಿಗಳಿಗೆ ಕೊಲ್ಲೂರು ಪಾರುಪತ್ಯೇಗಾರ ವೆಂಕಪ್ಪಯ್ಯ ಬರಸಿದ್ದರಲ್ಲಿ ಕೂಡ್ಲಿಮಠದವರು ಬಿರುದು ಬಾಹುಳ್ಯದಿಂದ ಬರುತ್ತಾರೆ. ಬಂದೋಬಸ್ತು ಮಾಡುವುದು ಎಂಬದಾಗಿ ಅಪ್ಪಣೆ ಬಂದ ಮೇರಿಗೆ ಅವರಿಗೆ ತಿಳಿಸಿದ್ದಕ್ಕೆ ಆ ಮಾರ್ಗವನ್ನು ಬಿಟ್ಟು ಅಡ್ಡಮಾರ್ಗವಾಗಿ ಹೋದರೆಂತ ಬರೆದು ಇಥೆ. ಯಿದರಲ್ಲಿ ಸಾಲು ಮಾಹೇ ತಾರೀಖು ಇಲ್ಲ. ಶೃಂಗೇರಿ ಸ್ವಾಮಿಗಳು ಬರದ್ದಕ್ಕೆ ಜವಾಬ್ ಬರೆದುಯಿರುವದ್ದರಿಂದ ವಿವಾದಕ್ಕೆ ಉಪಯೋಗವಿಲ್ಲ.——

೧೯೩. ಹೈದರಾಬಾದು ರಾಜಾರಾಂಭಕ್ಷಿಯೆಂಬವರು ಸನ್. ೧೨೬೦ನೆ ಯಿಜರಿ, ರಬೀಸಾನೀ ತಾರೀಖು ೯ರಲ್ಲೂ ಬರದ ಇಸ್ತಿಹಾರ್ ಎಂಬುವದರಲ್ಲಿ ಶೃಂಗೇರಿ ಮಠದವರು ಸರಸ್ವತೀಪೂಜೆ ಮಾಡಿಕೊಂಡು ಸ್ಥಳದಲ್ಲಿ ಇರಬೇಕೆಂತಲೂ ಕೂಡ್ಲಿ ಮಠದವರು ಶೀಮೇ ಸಂಚಾರಮಾಡಿಕೊಂಡು ಇರಬೇಕೆಂದು ಮಾಮೂಲುಯಿದೆ ಎಂತಾ ಕೂಡ್ಲಿಮಠದವರು ಫಿರ್ಯಾದು ಮಾಡಿದ್ದಕ್ಕೆ ಶೃಂಗೇರಿ ಮಠದವರಲ್ಲಿದ್ದ ಸನ್ನದು ಪತ್ರಗಳನೋಡಿ ವಿದ್ವಾಂಸರ ವಶಕ್ಕೆ ಕೊಡುವಲ್ಲಿ ಸರ್ವಸ್ವಾತಂತ್ರ್ಯವೂ ಶೃಂಗೇರಿಯವರಿಗೆಯಿದೆಯೆಂದೂ, ಅವರು ಬರೆದುಕೊಟ್ಟಿದ್ದರಿಂದ ಕೂಡ್ಲಿಯವರು ಶೃಂಗೇರಿಯವರ ಸ್ವಾಧೀನದಲ್ಲಿದ್ದುಕೊಂಡು ಅವರ ಹುಕುಮಿಗೆ ಬರಕಿಲಾಫ್ ನಡೆಯದಂತೆ ಯಿರಬೇಕೆಂಬ ವಗೈರೆ ಬರದು ಇಥೆ. ಯಿದರಲ್ಲಿ ಇರುವ ಮೊಹರಿನಲ್ಲಿ ಮುಫ್ತೀಯಂತ ಷರಾ ಬರದು ಇಥೆ ಮತ್ತು ಯಿದರಲ್ಲಿ ಬಿರುದು ಬಾವಲೀ ವಿವಾದವೇನೂ ಕಾಣಿಶಿಲ್ಲವಾದ್ದರಿಂದ ಯಿದು ಈ ದೇಶಕ್ಕೆ ಪ್ರಕೃತ ವಿವಾದಕ್ಕೆ ಯೇನೂ ಉಪ ಯೋಗವಿಲ್ಲ.

೧೯೪. ಶೃಂಗೇರಿ ಸ್ವಾಮಿಗಳಿಗೆ ಮೈಸೂರು ದಳವಾಯಿ ವೀರರಾಜಯ್ಯನವರು ದುಂದುಭಿ ಸಂ. ಮಾಘ ಬ ೫ ಯಲ್ಲೂ ಬರದು ಯಿರುವುದರಲ್ಲಿ ಸಂಗಮದವರು ಎಂದಿಗೂ ಈ ರಾಜ್ಯಕ್ಕೆ ಬಾರದೇ ಯಿದ್ದವರು. ಈಗ ಶ್ರೀರಂಗಪಟ್ಟಣಕ್ಕೆ ಬರಬೇಕೆಂದು ಕನ್ನಂಬಾಡಿಗೆ ಬಂದು ಯಿದ್ದದ್ದರಿಂದಾ, ಮಹಾರಾಜೇಶ್ರೀ ಕರ್ತರು ಅಮ್ಮನವರಿಗೆ ಸಹ ತಿಳಿಸಿದ್ದಕ್ಕೆ ಬಾನಾಬಿಷ್ಟಪ್ಪಯ್ಯನವರಿಗೆ ಹೇಳಿ ಕಳುಹಿಸಿ ಪೂರ್ಣಯ್ಯನವರಿಗೆ ಬಹಳವಾಗಿ ಹೇಳಿಕೊಂಡದ್ದರಿಂದ ಅವರು ಅಲ್ಲಿಗೆ ಹೋಗಿ ಅಲ್ಲಿಂದಾಲೇಅಪ್ಪಣೆಕೊಟ್ಟು ಕಳುಹಿಸಿ ಯಿದಾರೆಂಬ ವಗೈರೆ ಬರೆದುಯಿದೆ. ಕನ್ನಂಬಾಡಿಗೆ ಪೂರ್ಣಯ್ಯನವರೇಹೋಗಿ ಕಂಡು ಅಲ್ಲಿಂದಲೇ ಕಳುಹಿಸಿಬಿಟ್ಟಹಾಗೆ ಬರದುಯಿಥೆಯೋ ಹೊರತು, ಬಿರುದುಬಾವಲೀ ವಿಷಯ ವಾದ ಬಿದ್ದು ಫೈಸಲು ಮಾಡಿದಹಾಗೆ ಯಿಲ್ಲದೆಇರುವದ್ದರಿಂದಲೂ, ಅನಂತರ ಪ್ರಜೋತ್ಪತ್ತಿ ಆಂಗೀರಸ ಸಂವತ್ಸರಗಳಲ್ಲಿ ಸಂಸ್ಥಾನದ ಮರ್ಯಾದೆಯಿಂದಾ ಕರತಂದು ಯಿಳಿಸುವವೆಂಬದಾಗಿ ಮಹಾರಾಜ ರಾಜಾಸಾಹೇಬ್ ಬಹದ್ದೂರ್ರವರ ರಹದಾರಿಗಳು ಅಸಲು ಪ್ರತಿವಾದಿ ಹಾಜರುಮಾಡಿ ಯಿರುವದ್ದರಿಂದ ಸಹ ಇದು ವಿವಾದಕ್ಕೆ ಉಪಯೋಗವಿಲ್ಲ.

೧೯೫. ಸರ್ವಧಾರಿ ಸಂವತ್ಸರದ ಜೇಷ್ಟ ಬ ೮ಯಲ್ಲೂ ಮಹಾರಾಜಾ ರಾಜಾ ಸಾಹೇಬ್ ಬಹದ್ದೂರವರು, ಬರೆದಿರುವ ರಹದಾರಿಯಲ್ಲಿ ಶೃಂಗೇರಿಸ್ವಾಮಿಗಳ ಆಜ್ಞಾನುಸಾರವಾಗಿ ನಡೆದುಕೊಳ್ಳುವ ರಾಮಚಂದ್ರಪುರ, ಹೊಂನ್ನೇನಹಳ್ಳಿ, ತೀರ್ಥಹಳ್ಳಿ, ಹರಿಹರಪುರ, ಮುಳುಬಾಗಿಲು, ಮುಂತಾದ ತುಂಡುಮಠದವರು ಬಿರುದುಬಾವಲೀ, ಶ್ವೇತಛತ್ರಿ, ಮಕರತೋರಣ, ಮೊದಲಾದ ಹೆಚ್ಚುಗಟ್ಲೆ ಬಿರುದುಗಳು ಹೆಚ್ಚು ಹವ್ಯಾಸಮಾಡಿಕೊಂಡು ತಿರುಗುತ್ತಿರುವದರಿಂದ ರಾಮಚಂದ್ರಪುರದ ಮಠದ ಬಿರುದು ಬಾವಲೀ ಶೃಂಗೇರಿ ಮಠಕ್ಕೆ ತೆಗೆದುಕೊಂಡು ಯಿರುವದು ಸರಿಯಷ್ಟೆ. ಅದು ಶೃಂಗೇರಿ ಮಠಕ್ಕೆ ಸಲ್ಲತಕ್ಕದ್ದೇ ಹೊರ್ತು ತುಂಡು ಮಠಗಳಿಗೆ ಸಲ್ಲತಕ್ಕದ್ದಿಲ್ಲ. ಶೃಂಗೇರಿ ಮಠಕ್ಕೆ ಕಾಣಿಕೆ ಕಪ್ಪ ಕೊಟ್ಟು, ಅಲ್ಲಿನ ಆಜ್ಞಾನುಸಾರವಾಗಿ ನಡೆಯುತ್ತಾ ಯಿರುವಲ್ಲಿ, ಯೀಗ ನೂತನ ಪದ್ಧತಿ ನಡಿಸತಕ್ಕದ್ದಲ್ಲಾ. ಯಿನ್ಯಾರಾದರೂ ಯೀ ತುಂಡುಮಠದ ಸನ್ಯಾಸಿಗಳು ತಮ್ಮ ತಮ್ಮ ಆಶ್ರಮಧರ್ಮದಲ್ಲಿ ವಿಹಿತವಾಗಿರದೆ ಯಿಲ್ಲದ ಹವ್ಯಾಸ ಬಿರುದು ಬಾವಲಿಗಳು ಮಾಡಿಕೊಂಡು ಮನಸ್ವೀ ನಡೆದಲ್ಲಿ, ಶೃಂಗೇರಿ ಮಠದವರು, ತಕ್ಕ ಬಂದೋಬಸ್ತು ಮಾಡ್ಯಾರು. ಮುಂದೆ ಇಂಥಾ ಹವ್ಯಾಸ ನಡೆಯದೆ ಶ್ರೀಮಠದ ಅಪ್ಪಣೆ ಪ್ರಕಾರ ನಡೆದುಕೊಳ್ಳುವಂತೆ ಹೇಳು

ವದೆಂದು ಅರಮನೆ ಶೀಮೇಗಡಿಗಳ ಅಮೀಲ ಕಿಲ್ಲೇದಾರ ಹೆಸರಿಗೆ ಬರದು ಯಿಥೆ. ಯಿದರಲ್ಲಿ ಕೂಡ್ಲಿ ಮಠದ ಹೆಸರು ಯಿಲ್ಲ. ಯಿವರು ಅಧಿಕ ಬಿರುದು ಹಾಕಿಕೊಂಡು ತಿರುಗುತ್ತಾರೆಂದು ಶೃಂಗೇರಿ ಮಠದವರು ಫಿರ್ಯಾದು ಹೇಳಿಕೊಂಡು ಆ ಪ್ರಕಾರ ವಿಚಾರಣೆ ಆಗಿ ಕೂಡ್ಲಿ ಮಠದವರಿಗೆ ಬಿರುದು ಯಿಲ್ಲವೆಂತ ಫೈಸಲು ಮಾಡಿ ನಿರೂಪ ಹುಟ್ಟಿ ಇದ್ದಲ್ಲಿ, ಹಾಜರು ಮಾಡುತ್ತಾ ಯಿದ್ದರು. ಆ ಪ್ರಕಾರ ಇಲ್ಲದ್ದರಿಂದಲೂ ಯಿದಕ್ಕೆ ಪೂರ್ವ ಪ್ರಜೋತ್ಪತ್ತಿ ಆಂಗೀರಸ ಸಂವತ್ಸರದಲ್ಲಿ ಕೂಡ್ಲಿ ಸ್ವಾಮಿಗಳು ಬರುವದ್ದರಿಂದ ಸಂಸ್ಥಾನದ ಮರ್ಯಾದೆ ಪ್ರಕಾರ ನಡೆಸತಕ್ಕದ್ದೆಂತ ಅಸಲು ಪ್ರತಿವಾದಿ ಹಾಜರು ಮಾಡಿರುವ ೨೪೯–೨೫೧ನೇ ಸಂಖೆಗಳು ಉಳ್ಳ ೨ ರಹದಾರಿಗಳು ಹುಟ್ಟಿ ಯಿರುವದಲ್ಲದೆ ಮೈಸೂರಿಗೆ ಬರಬೇಕಂತ ರಹದಾರಿ ಕಳುಹಿಸಿ ಇಥೆಯಂತಲೂ ಧಾರಣಾರ್ಥವಾಗಿ ವಸ್ತ್ರ ಕಳುಹಿಸಿ ಯಿದೆ ಯೆಂತಲೂ ಆಂಗೀರಸ ಸಂವತ್ಸರದಲ್ಲಿ ೨೫೦ನೆ ಸಂಖೆ ನಿರೂಪವೆಂಬ ವಿಜ್ಞಾಪನೇ ಪತ್ರಿಕೆ ಆ ಸ್ವಾಮಿಗಳ ಹೆಸರಿಗೆ ಬರದು ಇರುವದ್ದರಿಂದಲೂ ಸಹ ಯೀ ಕೂಡ್ಲಿ ಶೃಂಗೇರಿಮಠ ತುಂಡು ಮಠಕ್ಕೆ ಶೇರಲಿಲ್ಲವೆಂತಲೂ ಸ್ವತಂತ್ರ ಮಠವೆಂತಲೂ, ತೋರುವದ್ದರಿಂದಾ ಯೀ ದಸ್ತೈವೆಜು ವಾದಿವಿವಾದಕ್ಕೆ ಉಪಯೋಗವಿಲ್ಲಾ.

೧೯೬. ಶೇತುಪತಿ ವಿಜಯ ರಘುನಾಥ ಮುತ್ತುಕಲದೇವರು ಅರಶಿನವರು ಸರ್ ೧೮೩೮ನೆ ಇಸ್ವಿ ಮೇ ತಾರೀಖು ೧೯ರಲ್ಲಿ ಬರದಿರುವ ರಹದಾರಿಯಲ್ಲಿ ಬಿರುದು ಬಾವಲೀ, ಮಕರ ತೋರಣ, ಅಡಪಾಲಖಿ, ಮೊದಲಾದ್ದು ಶೃಂಗೇರಿ ಮಠಕ್ಕೆ ಸಲ್ಲತಕ್ಕದ್ದೇ ಹೊರ್ತು ಚಿಲ್ಲರೆ ಮಠಗಳಿಗೆ ಸಲ್ಲತಕ್ಕದ್ದಲ್ಲವೆಂದು, ಬರದು ಯಿಥೆ ಮಧುರೆ ಜಿಲ್ಲಾಕ್ಕೆ ಶೇರಿದಾ ರಾಮನಾಥಪುರದೇಶಕ್ಕೆ ಯಿವರು ಅಧಿಪತಿಯನ್ನಿಸಿಕೊಂಡು ಯಿಧಾರೆ. ಕುಂಫಣಿ ನ್ಯಾಯ ಸ್ಥಳಗಳಲ್ಲಿ ಫಿರ್ಯಾದಾಗಿ ಫೈಸಲು ಪಡಕೊಂಡದಲ್ಲವಾದ್ದರಿಂದಲೂ ಶೃಂಗೇರಿ ಮಠದವರು ಹೇಳಿಕೊಂಡ ಪ್ರಕಾರ ಬರದು ಯಿರುವದ್ದರಿಂದ ಸಹಾ ಇದು ವಾದೀ ವಿವಾದಕ್ಕೆ ಉಪಯೋಗವಿಲ್ಲ.

೧೯೭. ಅಮ್ಮದಾನಗರ ನಾಶಿಕಾದವರು ಸರ್ ೧೮೩೮ನೇ ಯಿಸ್ವಿ ಜೂನ್ ತಾರೀಖು ೨೯ರಲ್ಲೂ ಬರದು ಯಿರುವ ಮಹಜರಿನಲ್ಲಿ ಶೃಂಗೇರಿ ಮಠದ ಕಾಳಂಭಟ್ಟ ಹೇಳಿಕೊಂಡ ಸಂಗತಿ ದರ್ಯಾಪ್ತಿ ಮಾಡುವಲ್ಲಿ ಕೂಡ್ಲಿ ಮಠದ ದುಂಡಿರಾಜ ಭಟ್ಟನಲ್ಲಿ ಯಿರುವ ಮುದ್ರೆ ಸರಕಾರದಲ್ಲಿ ಯಿಟ್ಟುಕೊಳ್ಳುವದಲ್ಲದೆ ಮುಖ್ಯ ಬಾಧ್ಯತೆ ಶೃಂಗೇರಿ ಮಠಕ್ಕೆ ಯೆಂಬದಾಗಿ ಬರದು ಯಿಥೆ ಕೂಡ್ಲಿ ಮಠದ ಕಡೆ ಬ್ರಾಂಹ್ಮರು ಶೃಂಗೇರಿ ಮಠದ ಕಡೆ ಬ್ರಾಂಹ್ಮರು, ಸಹ ಅಲ್ಲಲ್ಲಿ ತಿರುಗಾಡಿಕೊಂಡು ವಿವಾದಪಟ್ಟ ವ್ಯಾಳೆಯಲ್ಲಿ ಮಹಜರು ಹುಟ್ಟಿದ ಹಾಗೆ ಯಿಥೆ. ಅದರಲ್ಲಿ ಬಿರುದು ಬಾವಲೀ ವಿಷಯವೇನೂ ಯಿಲ್ಲ ಮತ್ತು ಪರದೇಶದಲ್ಲಿ ಹುಟ್ಟಿದಾದ್ದರಿಂದ ವಾದೀ ವಿವಾದಕ್ಕೆ ಉಪಯೋಗವಿಲ್ಲ.

೧೯೮. ಶೃಂಗೇರಿ ಸ್ವಾಮಿಗಳಿಗೆ ನಾಶಿಕ ತ್ರಿಯಂಬಕದ ಮಹಾಜನಗಳು, ಪ್ಲವ ಸಂವತ್ಸರದ ಅಧಿಕ ಆಶ್ವೀಜ ಬ. ೩ಲ್ಲೂ ಬರೆದಿರುವುದರಲ್ಲಿ ಕೂಡ್ಲಿ ಮಠದ ದುಂಡೀರಾಜ ಭಟ್ಟ, ಶಂಕರಭಟ್ಟ, ಸುಬ್ಬಾಶಾಸ್ತ್ರೀ ಸಹ, ಶೃಂಗೇರಿ ಮಠದ ಹೆಸರು ಹೇಳಿಕೊಂಡು ಉದರ ಪೋಷಣೆಮಾಡಿಕೊಂಡು ಯಿರುವ ಸಂಗತಿ ಕಾಳಂಭಟ್ಟ ತಿಳಿಸಿದ್ದರಿಂದ ಸವಿಸ್ತಾರವಾಗಿ ತಿಳಿದುಬಂತು. ಮುಖ್ಯ ಶೃಂಗೇರಿ ಮಠದ ಆಜ್ಞಾನುಸಾರವಾಗಿ ನಡೆದುಕೊಳ್ಳುತ್ತೇವೆಂತ ಬರದು ಯಿದೆ. ಸದರಿ ೧೯೭ನೇ ಸಂಖೆ ದಸ್ತಾವೈಜಿಗೆ ಬರದಿರುವ ಷರಾದಮೇರಿಗೆ ಯಿದು ವಿವಾದಕ್ಕೆ ವುಪಯೋಗವಿಲ್ಲಾ.

೧೯೯. ಸದರೀ ಸ್ವಾಮಿಗಳಿಗೆ ದುಂಡಿರಾಜಭಟ್ಟ ಹೇವಿಳಂಬಿ ಸಂವತ್ಸರದ ಮಾಘ ಬ. ೧೩ರಲ್ಲೂ ಬರೆದಿರುವುದರಲ್ಲಿ ಕೂಡ್ಲಿ ಸ್ವಾಮಿಗಳು ನನ್ನ ಕರಶಿ ಮಠಮುದ್ರೆ ಅಧಿಕಾರಕೊಟ್ಟು ಶೃಂಗೇರಿ ಮಠದ ಹೆಸರು ಹೇಳಿ ಸಂಚಾರಮಾಡುವ ಹಾಗೆ ಹೇಳಿದ್ದರಿಂದಲೂ, ಆಗ ಕಾಳಂಭಟ್ಟ ಶಿಕ್ಕಿ ನೀನು ಈ ಮೇರಿಗೆ ಮಾಡತಕ್ಕದ್ಧಲ್ಲವೆಂದು ಹೇಳಿದ್ದರಿಂದ ನಾನು ಹೊರಟು ಬಂದು ಯಿದೇನೆ. ನನಗೆ ಶೃಂಗೇರಿ ಮಠದಿಂದ ಮಠಮುದ್ರೆ ಅಧಿಕಾರ ಕೊಟ್ಟಿಲ್ಲ. ದ್ರವ್ಯ ಸಂಪಾದಿಶಿ ಕೊಡುತ್ತೇನೆಂದು ಬರದು ಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೦. ಹೈದರಾಬಾದು ರಶಿಡೆಂಟ್ ಸಾಹೇಬರಿಗೆ ಮೈಸೂರು ರಶಿಡೆಂಟು ಖ್ಯಾಸಮೆಜರ ಸಾಹೇಬರು ಸರ್ ೧೮೨೮ನೆ ಯಿಸ್ವಿ ಜುಲೈ ತಾರೀಖು ೩ರಲ್ಲೂ ಬರೆದಿರುವ ಲೆಟ್ಟುರನಲ್ಲಿ ಬಾಲಕೃಷ್ಣ ಭಾರತೀ ಎಂಬ ಬ್ರಾಹ್ಮಣ ಶೃಂಗೇರಿ ಮಠದ ಗುರು ಎಂಬದಾಗಿ ವಂಚನೆಯಿಂದಾ ಹೆಸರು ಇಟ್ಟುಕೊಂಡು ಆ ಅಧಿಕಾರದಿಂದ ಕರಿಮನುಷ್ಯರಿಂದಾ ತೆರಿಗೆ ವಸೂಲು ಮಾಡುವದಾಗಿಯೂ ಯಿವನು ನಿಜಾಮರವರ ರಾಜ್ಯದಲ್ಲಿ ಸಂಚಾರಾ ಮಾಡುವುದಾಗಿಯೂ ಶೃಂಗೇರಿ ಮಠದ ನರಶಿಂಹ ಭಾರತೀ ಸ್ವಾಮಿಯವರು ಮುಖ್ಯವಾಗಿ ಮೈಸೂರು ಸಂಸ್ಥಾನದ ನಗರದ ಕೊಪ್ಪದ

ತಾಲ್ಲೂಕು ಶೃಂಗೇರಿ ದೇವಸ್ಥಾನದಲ್ಲಿ ವಾಸವಾಗಿ ಯಿಧಾರೆ. ಅವರು ಮಹಾರಾಜ ರಾಜಾ ಸಾಹೇಬ್ ಬಹದ್ದೂರವರಿಂದ ರಹದಾರಿಯು ರಶಿಡೆಂಟು ಸಾಹೇಬರ ಕೈಬರಹಾದ್ದು ಸಹ ಪಡೆದು ಯಿಧಾರೆಂಬದಾಗಿ ತಮಗೆ ತಿಳಿಸುವಂತೆ ಮಹಾರಾಜಾ ರಾಜಾ ಸಾಹೇಬ್ ಬಹದ್ದೂರವರಿಂದ ನಾನು ಕೇಳಿಕೊಳ್ಳಲ್ಪಡುತ್ತೇನೆಂದು ಬರದು ಯಿದೆ.

ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೧. ಶೃಂಗೇರಿ ಸ್ವಾಮಿಗಳಿಗೆ ಚಿತ್ತೂರು ಜಿಲ್ಲಾ ಕಲಕಟ್ಟರು ಸಲರ್ವ ಗ್ರೈರ್ ಸಾಹೇಬರು ಬಗರಸಾಲ ಮಾಹೆ ತಾರೀಖಿನಲ್ಲಿ ಬರೆದಿರುವುದರಲ್ಲಿ, ತಿರುಪತಿಗೆ ಬರಬೇಕೆಂದು ಬರದು ಯಿಧೀರಿ. ಅಲ್ಲಿ ಜಿಯ್ಯರು ಆಚಾರ್ಯಪುರುಷರು ಭಟ್ಟರು ಸಹ ಯಿಧಾರೆ. ತಮ್ಮ ತಮ್ಮಲ್ಲೆ ರಾಜಿ ಆಗಿ ಇದ್ದಾರೆ. ಆ ಪ್ರಕಾರ ದರುಶನ ಮಾಡಿಕೊಂಡು ಬರಬಹುದೆಂದು ಬರೆದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೨. ಬಲಾಲ ಪ್ರಧಾನ ಮಾಧವರಾಯರು ಕಮಾವಿಷಿದಾರಿಗೆ ಶ್ಯಾಬಾನ ತಾರೀಖು ೧೧ಲ್ಲೂ ಬರದ್ದರಲ್ಲಿ ಶೃಂಗೇರಿ ಸ್ವಾಮಿಗಳು, ಜಗದ್ಗುರು ಸರ್ವರಿಗೂ ಪೂಜ್ಯರು ಯಿವರ ಪೂಜೆಮಾಡಿದಲ್ಲಿ ಶ್ರೇಯಸ್ಕರ ತಿಳಿಯುವುದು. ಸ್ವಾಮಿಗಳು ಗಂಗಾ ತೀರಕ್ಕೆ ಶಿಷ್ಯರನ್ನು ಕಳುಯ್ಸಿರುತ್ತಾರೆ. ಅವರ ಅಗ್ರ ಪೂಜಾವಿಷಯ ತಾಕೀತು ಮಾಡುವುದೆಂದು ಬರೆದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೩. ಅಮ್ಮದಾನಗರದ ಕಲೆಕ್ಟರು, ಸರ್ ೧೮೩೮ನೆ ಯಿಸ್ವಿ ಅಗಟಂಬರು ೨೯ರಲ್ಲೂ ಬರದ ರಹದಾರಿಯಲ್ಲಿ, ದುಂಡಿರಾಜಭಟ್ಟನೆಂಬುವನು ಕಳ್ಳ ಮೊಹರು ಮಾಡಿಕೊಂಡು ಶೀಮೇ ಮೇಲೆ ಸಂಚಾರ ಮಾಡುತ್ತಾನೆಂಬದಾಗಿ ಶೃಂಗೇರಿ ಮಠದ ಕಾಳಂಭಟ್ಟ ಹಜೂರಿಗೆ ಬರಕೊಂಡದ್ದರಿಂದ ಅವನ ಯಿಡಿತರ್ಸಿ ಅವನಲ್ಲಿದ್ದ ಮೊಹರು ಜಫ್ತಿ ಮಾಡಿ ಅವನ್ನ ಬಿಟ್ಟು ಯಿದೆ ಎಂಬ ವಗ್ಯೆರೆ ಬರದುಯಿಥೆ. ಯಿದಕ್ಕೆ ೧೯೭ನೆ ಸಂಖೆ ದಸ್ತೈವಜಿಗೆ ಬರದಿರುವ ಷರಾ ಪ್ರಕಾರ ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೪. ಹೈದರಾಬಾದು ಸದರ ಅದಾಲತ್ತಿಗೆ ಮಹಾಜನಂಗಳು ೧೨೬೦ನೆ ಯಿಜರಿ ಮೊಹರಂ ತಾರೀಖು ೧೧ರಲ್ಲೂ ಬರದುಕೊಟ್ಟ ಮಹಜರಿನಲ್ಲಿ ಶೃಂಗೇರಿ ಮಠಕ್ಕೆ ಸಕಲ ಬಿರುದುಗಳು ಇಥೆ. ದೇಶಸಂಚಾರಕ್ಕೆ ಶಿಕ್ಷೆರಕ್ಷೆಗೂ ಆ ಮಠವೇ ಹೊರತು ಬೇರೇ ಯಿಲ್ಲ. ಯೀಚೆಗೆ ಕ್ಷುದ್ರಮಠಸ್ತ ಕೂಡ್ಲಿ, ಶಿವಗಂಗೆ, ಪುಷ್ಪಗಿರಿ, ವಿರೂಪಾಕ್ಷ, ಕುಂಭಕೋಣ, ಕರವೀರ ವಗ್ಯೆರೇರು ಸಂಸ್ಥಾನದ ಹೆಸರು ಹೇಳಿಕೊಂಡು ದೇಶಸಂಚಾರ ಮಾಡುತ್ತಾರೆ. ನಮ್ಮ ಯಿರೇರು ಆದಿಯಾಗಿ ಶೃಂಗೇರಿ ಮಠದ ಆಜ್ಞಾನುಸಾರವಾಗಿ ನಡೆಯತಕ್ಕದೆಂದು ಹೇಳುತ್ತಾಯಿದ್ದದ್ದು ಕೇಳಿ ಯಿಥೇವೆ. ಆದ್ದರಿಂದಾ ಕೂಡ್ಲಿ ಮಠದವರಿಗೆ ನಿಮಿತ್ಯವಿಲ್ಲವೆಂದು ಬರದುಯಿಥೆ. ಕೂಡ್ಲಿ ಮೊದಲಾದ ಮಠಗಳು ಮೈಸೂರು ಕುಂಭಕೋಣ ಸಂಸ್ಥಾನಗಳಲ್ಲಿ ಬಹುದಿವಸದಿಂದಾ ಪಾರಂಪರ್ಯವಾಗಿದೆ. ಅವರ ಮಠಗಳ ಹಕ್ಕುಗಳು ವಿಚಾರಣೆ ಮಾಡದೆ ಶೃಂಗೇರಿ ಮಠಕ್ಕೆ ಸಂಬಂಧಪಟ್ಟ ಸೋಮೇಶ್ವರಶಾಸ್ತ್ರಿ ಹೇಳಿಕೊಂಡ ಪ್ರಕಾರ ಹತ್ತು ಜನಾ ಕೂಡಿ ಹೈದರಾಬಾದು ಅದಾಲತ್ತಿಗೆ ಬರದುಕೊಟ್ಟ ಮೇರಿಗೆ ಅಲ್ಲಿಂದ ವಂದು ಹ್ಕುಂ ಹುಟ್ಟಿದ ಹಾಗೆ ಇದೆ. ಯಿದೇ ಪ್ರಕಾರ ಶೃಂಗೇರಿಸ್ವಾಮಿಗಳವರು ರಾಮೇಶ್ವರಕ್ಕೆ ದಯಮಾಡುವಾಗ ಜಂಬುಕೇಶ್ವರ ದೇವಸ್ಥಾನದಲ್ಲಿ ಅಖಿಲಾಂಡೇಶ್ವರಿ ಅಮ್ಮನವರ ತಾಟಂಕ ವಿಷಯ, ಕುಂಭಕೋಣ ಸ್ವಾಮಿಗಳಿಗೂ ಶೃಂಗೇರಿ ಸ್ವಾಮಿಗಳಿಗೂ ವಿವಾದಬಿದ್ದು ತಿರುಚನಾಪಳ್ಳಿ ನ್ಯಾಯಸ್ಥಳದಲ್ಲಿ ವಿಚಾರಣೆ ಆಗಿ ಕುಂಭಕೋಣಸ್ವಾಮಿಗಳಿಗೆ ಹಕ್ಕು ಎಂತಲೂ ಶೃಂಗೇರಿಸ್ವಾಮಿಗಳಿಗೆ ಹಕ್ಕು ಯಿಲ್ಲವೆಂತಲೂ ಫೈಸಲಾಗಿ ಯಿಥೆ. ಯೀ ಪ್ರಕಾರ ವಂದು ವಂದು ಸಂಸ್ಥಾನದಲ್ಲಿ ವಂದೊಂದು ವಿಧವಾಗಿ ಫೈಸಲಾಗಿರುವದ್ದರಿಂದ ಅದರನ ಯೀ ಸಂಸ್ಥಾನದಲ್ಲಿ ಬಹುದಿವಸದಿಂದ ನಡೆದು ಬರುವಂಥಾ ಮಠಗಳ ನಡವಳಿಕೆಗಳಿಗೂ ಮಾಮೂಲು ಪದ್ದತಿಗಳಿಗೂ ಬದಲಾಯಿಸುವುದಕ್ಕೆ ಉಪಯೋಗವಾಗಲಾರದು. ಆದ್ದರಿಂದಾ ಇದು ವಿವಾದಕ್ಕೆ ಉಪಯೋಗವಿಲ್ಲ.

೨೦೫. ಶೃಂಗೇರಿ ಸ್ವಾಮಿಗಳಿಗೆ ಶ್ರೀರಂಗದೇವಸ್ಥಾನದ ಸ್ಥಾನಾಧಿಪತಿ ಮೊದಲಾದವರು ಹೇವಿಳಂಬಿ ಸಂವತ್ಸರದ ಮಾಘ ಶು. ೮ ಬರದ ಮಹಜರಿನಲ್ಲಿ ಸ್ವಾಮಿಗಳು ಶ್ರೀರಂಗಕ್ಕೆ ಬಂದು ಇದ್ದಲ್ಲಿ ಶ್ರೀರಂಗನಾಥ ಸ್ವಾಮಿಯವರ ದೇವಸ್ಥಾನದಲ್ಲಿ ನಡದ ಮರ್ಯಾದೆ ವಿಷಯ ಬರದು ಇದೆ. ಇದು ವಿವಾದಕ್ಕೆ ಉಪಯೋಗವಿಲ್ಲ.

೨೦೬. ವಿಶ್ವನಾಥಸೋಮಯಾಜಿಗಳಿಗೆ ಹೊಳೇ ಹೊನ್ನೂರು ಮಧ್ವಾಚಾರ್ಯರು ಶ್ರಾವಣ ಬ. ೧೦ಯಲ್ಲೂ ಬರದ ಕಾಗದದಲ್ಲಿ ಕೂಡ್ಲಿ ಸ್ವಾಮಿಗಳು ಸರ್ವೋತ್ತಮರಾಯರ ಮಾಮಲೆಯಲ್ಲೂ ಶಂಕರರಾಯರ ಮಾಮಲೆಯಲ್ಲೂ ತಿಮ್ಮಪ್ಪನವರ ಫೌಜುದಾರಿಯಲ್ಲೂ ಶಿವಮೊಗ್ಗೆಗೆ ಬಂದು ಯಿದ್ದರು. ಅಡ್ಡಪಾಲಕಿಯಿಂದ ಬರಲಿಲ್ಲಾ. ಬಿರುದುಬಾವಲಿಯಿಂದಾ ಬಂದದ್ದು ಜ್ಞಾಪಕವಿಲ್ಲಾ ಎಂತಾ ಬರದು ಯಿಥೆ. ಕೂಡ್ಲಿ ಸ್ವಾಮಿಗಳು

ಬಿರುದುಬಾವಲಿಯಿಂದ ಶಿವಮೊಗ್ಗಿಗೆ ಬಂದಹಾಗೆ ಬಹುಜನಗಳು ಹೇಳಿರುವುದರಿಂದ ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೦೭. ಪ್ಲವಂಗ ಸಂವತ್ಸರದ ಅಧಿಕ ಆಶ್ವೀಜ ಶು ೨ಯಲ್ಲೂ ಸದರಿ ಸೋಮಯಾಜಿಗಳಿಗೆ ತಿಮ್ಮಣ್ಣಾಚಾರ್ಯರು ಬರದ ಕಾಗದದಲ್ಲಿ ಕೂಡ್ಲಿ ಸ್ವಾಮಿಗಳು ಸರ್ವೋತ್ತಮರಾಯರ ಅಮಲಿನಲ್ಲಿ ಬಂದಾಗ ಬಿರುದು ಬಾವಲಿ ಇರಲಿಲ್ಲಾ ಶಂಕರರಾಯರ ಮಾಮಲೆಯಲ್ಲೂ ತಿಮ್ಮಪ್ಪನವರ ಫವಜುದಾರಿಯಲ್ಲೂ ಬಂದು ಯಿದ್ದಾಗ ಮಠಮುದ್ರೆಯವರು ಸ್ಥಳದವರೂ ಸಹ ವ್ಯವಹಾರಮಾಡಿದರು ಎಂಬ ವಗೈರೆ ಬರದು ಯಿಧೆ. ಸದರಿ ಮೇಲೆ ಬರೆದಿರುವ ಷರಾ ಪ್ರಕಾರ ಇದೂ ವಿವಾದಕ್ಕೆ ಉಪಯೋಗವಿಲ್ಲಾ.

೨೦೮. ನಗರದ ಸೂಪರಿಂಟೆಂಡ್ಯಾಂಟ್ ಜೋಕ್ಸ್‌ಸಾಹೇಬರು ಅಹೋಬಲಶಾಸ್ತ್ರಿಗಳ ಹೆಸರಿಗೆ ಸರ್ ೧೮೩೭ನೆ ಯಿಸ್ವಿ ಇಸವಿ ಶಪ್ಟಂಬರು ೨೧ರಲ್ಲೂ ಬರೆದು ಇರುವದರಲ್ಲಿ ಕೂಡಲೀ ಮಠದ ಕಡೇ ಶಂಕರಶಾಸ್ತ್ರಿಯು ಇಲ್ಲದ ಪದ್ಧತಿಮಾಡಿ ಮಠದ ಎದುರಿಗೆ ಬೆಳ್ಳೀ ಛಡಿ ಹಿಡಿಸಿಕೊಂಡು ತಿರುಗುವಲ್ಲಿ ಈ ಪ್ರಕಾರ ಮಾಡತಕ್ಕದ್ದಲ್ಲವೆಂದು ತಿಳಿಸಿದ್ದಕ್ಕೆ ಶಿಷ್ಯ ಜನಗಳಿಗೆ ದುರ್ಬೋಧನೆಮಾಡಿ ತಂಟೆಮಾಡಿದ್ದಾಗಿ ಬರೆದಬಗ್ಗೆಯೆ ಆ ಪ್ರಕಾರ ಯಿದ್ದಲ್ಲಿ ಮುಂದೆ ಆ ಮೇರಿಗೆ ಮಾಡದಂತೆ ತಾಕೀದಿ ಮಾಡುವ ಹಾಗೆ ಶಿವಮೊಗ್ಗೆ ಅಮೀಲರಿಗೆ ಹುಕುಂ ಕೊಟ್ಟು ಇಧೆ ಎಂಬ ವಗೈರೆ ಬರೆದು ಇದೆ. ಇದೂ ವಿವಾದಕ್ಕೆ ಉಪಯೋಗವಿಲ್ಲಾ.

೨೦೯. ನಗರದ ಸೂಪ್ರಿಂಟೆಂಡ್ಯಾಂಟ್ ಹೆನಸ ಸಾಹೇಬರಿಗೆ ಮಠದ ಕಡೇ ವಕೀಲ ಶ್ಯಾಮಯ್ಯಾ ಬರೆದ ಅರ್ಜಿಯಲ್ಲಿ ಕೂಡ್ಲಿಸ್ವಾಮಿಗಳು ಬಿರುದುಬಾವಲಿಯಿಂದ ಶಿವಮೊಗ್ಗೆ ಮಾರ್ಗವಾಗಿ ಸಂಚಾರಮಾಡುತ್ತಾರೆಂದು ಕೇಳಿಯಿದೇವೆ. ಈ ನಂಬರು ಫೈಸಲಾಗುವವರಿಗೂ ಸಂಚಾರ ಮಾಡದಂತೆ ಹುಕುಂ ಆಗಬೇಕೆಂದು ಬರೆದ ಬಗ್ಗೆ ಅವರು ಶಿವಮೊಗ್ಗೆ ಮಾರ್ಗವಾಗಿ ಬರುವುದಿಲ್ಲವೆಂದು ೧೮೪೩ನೆ ಯಿಸ್ವಿ ಮಾರ್ಚಿ ತಾರೀಖು ೫ರಲ್ಲೂ ಯಿಂಡಾರ್ಸು ಆಗಿ ಇಧೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೧೦. ಶೃಂಗೇರಿ ಸ್ವಾಮಿಗಳಿಗೆ ಶಿವಮೊಗ್ಗೆ ಮಹಾಜನಂಗಳು ಬರದುಕೊಂಡದರಲ್ಲಿ ಸರ್ವೋತ್ತಮರಾಯರ ದಿವಸದಲ್ಲಿ ಕೂಡ್ಲಿಮಠದಿಂದ ಬಂದ ರಾಯಸ ವೋದಿಸಬೇಕೆಂದು ನಿರ್ಬಂಧ ಮಾಡಿದ್ದರಿಂದ ನಿರ್ವಾಹವಿಲ್ಲದೆ ಹೋಗಿಯಿದ್ದೆವು ನಮ್ಮ ಸಪ್ತ ಪಾರುಷದಿಂದ ಗುರುಮನೆ ಶೃಂಗೇರಿಯೇ ಹೊರ್ತು ಬ್ಯಾರೆಯಿಲ್ಲವೆಂಬ ವಗೈರೆ ಬರದು ಯಿಧೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೧೧. ಸದರಿ ಮಹಾಜನಗಳು ಗ್ರಾಮಾಂತರದವರೂ ಸಹಾ ಸ್ವಾಮಿಗಳಿಗೆ ಬರೆದು ಯಿರುವುದರಲ್ಲಿ ಕೂಡ್ಲಿ ಮಠದವರು ಬಲಾತ್ಕಾರದಿಂದ ತಮ್ಮ ಮಠಕ್ಕೆ ನಡೆದುಕೊಳ್ಳಬೇಕೆಂದು ಜೋರಾವರಿ ಮಾಡಿ ವಂದು ಕಾಗದ ಬರ್ಸಿ ನಮ್ಮ ರುಜುಗಳು ತೆಗೆದುಕೊಂಡು ಯಿಧಾರೆ. ನಾವು ಶೃಂಗೇರಿ ಮಠಕ್ಕೆ ಶೇರಿದವರೇ ಹೊರ್ತು ಕೂಡ್ಲಿ ಮಠಕ್ಕೆ ಶೇರಿದವರಲ್ಲ ಯಂತಾ ವಗೈರೆ ಬರೆದು ಯಿದೆ. ಇದು ವಿವಾದಕ್ಕೆ ಉಪಯೋಗವಿಲ್ಲಾ.

೨೧೨. ಈಶ್ವರ ಸಂ॥ ಮಾರ್ಗಶಿರ ಶು. ೧೦ಯಲ್ಲೂ ಕೆಳದೀ ಬಸಪ್ಪನಾಯ್ಕರು ಶಿವಪ್ಪವಡೆಯರಿಗೆ ಬರೆದು ಯಿರುವದರಲ್ಲಿ ಶೃಂಗೇರಿ ಮಠದವರು ಆಚಾರ ವಿಚಾರಕ್ಕೆ ಮಠಕ್ಕೆ ಬರುವ ಮರ್ಯಾದೆ ನಡೆಯುವಂಥಾದ್ದು ನಡೆಯದೇ ಯಿರುವುದರಿಂದ ಅವರ ಕಡೆಯವರು ಬಂದಲ್ಲಿ ಆ ಪ್ರಕಾರ ನಡೆಯೋ ರೀತಿ ಕಟ್ಟುಮಾಡುವದೆಂದು ಬರೆದುಯಿದೆ. ಇದು ಚಿರಕಾಲವಾದ್ದರಿಂದಲೂ, ಯಿದರಲ್ಲಿ ಬರೆದಿರುವುದು ವಿವಾದಕ್ಕೆ ಸಂಬಂಧಪಡದೆ ಯಿರುವುದರಿಂದ ಸಹಾ ವಿವಾದಕ್ಕೆ ಉಪಯೋಗವಿಲ್ಲ.

೨೧೩. ಸಂತೇಬಿದನೂರು ಹನ್ಮಪ್ಪನಾಯಕರು ಶಾರ್ವರೀಸಂ॥ ಕಾರ್ತೀಕ ಶು. ೧೨ ಲ್ಲೂ ಶೃಂಗೇರಿ ಸ್ವಾಮಿಗಳಿಗೆ ಬರೆದಿರುವುದರಲ್ಲಿ ಮಠದ ಧರ್ಮಕ್ಕೆ ವಂದು ಗ್ರಾಮಾಕೊಟ್ಟುಯಿರುವುದಾಗಿ ಬರದುಯಿಧೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೧೪. ಅಜ್ಜಂಪುರದ ಬಾಗೂರು ಶೀಮೆ ಆರ್ಮಿ ಫೌಜುದಾರ ಹರಬಿಮಲ್ಲಸ್ವಾಮಿಗಳವರಿಗೆ ಬಗರಸಾಲ್ ಮಾಹೆ ತಾರೀಖಿನಲ್ಲಿ ಬರದುಯಿರುವದರಲ್ಲಿ ಒಂದುಗ್ರಾಮ ಯಲ್ಲಪ್ಪಶಾಸ್ತ್ರಿವಶಮಾಡಿಯಿಧೆ ಮಠಕ್ಕೆ ನಡಶಿಕೊಳ್ಳಬೇಕೆಂದು ಬರದುಯಿಧೆ ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೧೫. ತರೀಕೆರೆ ಮಹಾಜನಗಳು ಸ್ವಾಮಿಗಳಿಗೆ ಬಗರಸಾಲ್ ಮಾಹೆ ತಾರೀಖಿನಲ್ಲಿ ಬರದುಯಿರುವದರಲ್ಲಿ ನಾಡಿಗ ಸುಬ್ಬಣ್ಣನ ವಿವಾದ ವಿಷಯ ಬರದುಯಿರುವದರಿಂದ ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೧೬. ಶಿವಮೊಗ್ಗೆ ಮಹಾಜನಗಳು ಸ್ವಾಮಿಗಳಿಗೆ ಬಗರಸಾಲ್ ಮಾಹೆ ತಾರೀಖಿನಲ್ಲಿ ಬರದ್ದರಲ್ಲಿ ಕೂಡ್ಲಿ ಸ್ವಾಮಿಗಳನ್ನು ರಾಮರಾಯರು ಹೊಸ ಮನೆ ಗೃಹ ಪ್ರವೇಶಕ್ಕೆ ಕರಶಿಯಿದ್ದರು. ಬ್ರಾಹ್ಮಣರ

ಕೇರಿಯಲ್ಲಿ ಉತ್ಸವಮಾಡಬೇಕೆಂದು ಸರ್ವೋತ್ತಮರಾಯರ ಮನೆವರಿಗೂ ಬರುವಲ್ಲಿ ನಾವು ಹೋಗಿ ಅಟ ಕಾಯಿಶಿದೆವು. ಆಮೇಲೆ ಹಿಂದಕ್ಕೆ ಕರಕೊಂಡು ಹೋಗಿ ಮರುದಿವ್ಸ ಕೂಡ್ಲಿಗೆ ಕಳುಹಿಸಿದರು ಯಂಬದಾಗಿ ಬರದಯಿದೆ. ಯಿದು ಮಠದ ಶಿಷ್ಯರು ೪ ಜನಾ ಕೂಡಿ ಮಠಕ್ಕೆ ಬರಕೊಂಡ ಹಾಗೆಯಿದೆ ಮತ್ತು ಕೂಡ್ಲಿ ಸ್ವಾಮಿಗಳು ಶಿವಮೊಗ್ಗೆಗೆ ಬರೋವಾಗ ಆಗಲೀ ಹೋಗುವಾಗ ಆಗಲೀ ಅಟಕಾವುಮಾಡದೆ ಬ್ರಾಹ್ಮಣರ ಶ್ರೇಣಿಯಲ್ಲಿ ಉತ್ಸವಮಾಡುವಾಗ್ಗ್ಯ ಹರಕತ್ತುಮಾಡಿದಹಾಗೆ ಬರದುಯಿದೆ. ಕೂಡ್ಲಿ ಸ್ವಾಮಿಗಳು ೩–೪ ವರ್ತಿ ಬಿರುದುಗಳಸಮೇತ ಶಿವಮೊಗ್ಗೆಗೆ ಬಂದಹಾಗೆ ಅನೇಕ ಸಾಕ್ಷಿಗಳಿಂದ ರುಜುವಾಗಿಯಿರುವದ್ದರಿಂದ ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೧೭. ಶೃಂಗೇರಿ ಸ್ವಾಮಿಗಳಿಗೆ ಶಿವಮೊಗ್ಗಿ ಶಿರಸ್ತಾರ ರಾಮಯ್ಯ ಪುಷ್ಯ ಶುದ್ಧ ೫ ಲ್ಲೂ ಬರದ್ದರಲ್ಲಿ ಕೂಡ್ಲಿ ಸ್ವಾಮಿಗಳನ್ನು ಅಮೀಲ ಕೃಷ್ಣರಾಯರು ಕರಕೊಂಡುಬಂದು ತನ್ನ ಮನೇಲಿ ಮೂರು ದಿವಸ ಯಿಟ್ಟು ಕೊಂಡು ಯಿದ್ದು ಬ್ರಾಹ್ಮಣ ಶ್ರೇಣಿಯಲ್ಲಿ ಉತ್ಸವ ಮಾಡಬೇಕೆಂತ ಇರುವಲ್ಲಿ ಮಠದ ಶಿಷ್ಯರು ನಾನೂ ಮುಂತಾಗಿ ತಿಳಿಸಿದಕ್ಕೆ ಯಿಲ್ಲದ ಕಲಾಪಯಾಕೆ ಎಂದು ಆ ದಿವಸವೇ ಹೊರಟುಹೋದರು ಎಂಬದಾಗಿ ಬರದು ಯಿಥೆ. ಯಿದು ಸದರಿ ಮೇರಿಗೆ ವಿವಾದಕ್ಕೆ ಉಪಯೋಗವಿಲ್ಲಾ.

೨೧೮. ವಿರೂಪಾಕ್ಷ ಪುಷ್ಪಗಿರಿಸ್ವಾಮಿಗಳು ವೆಂಕಟಾಚಲ ಶಾಸ್ತ್ರಿಗೆ ಬಗರಸಾಲ್ ಮಾಹೆ ತಾರೀಖಿನಲ್ಲಿ ಬರದ್ದರಲ್ಲಿ ಪಶ್ಚಿಮ ದೇಶದಲ್ಲಿ ನವಿನಾರ್ಜಿತ ವರುಷಾಶನಾದಿ ವಿಶೇಷ ಶೇವಾದ್ರವ್ಯಗಳಿಂದ ತತ್ರತ್ಯಮಾಹಾ ಸ್ಥಳಗಳಲ್ಲಿ ಪುತ್ಸಂನ್ನತ್ಸತ್ರಾಧಿಕ ಪುನರುದ್ಧಾರ ಮಾಡುವದಕ್ಕೆ ನಿಶ್ಚಯಿಶಿ ಯಿಥಾರಾದ ಕಾರಣ ಯಿಲ್ಲಿಂದಲೇ ನಡಿಸಬೇಕೆಂಬದಾಗಿ ನಿಶ್ಚಯವಾಗಿ ಶ್ರೀ ಸನ್ನಿಧಾನದಲ್ಲಿ ತಾವು ವಿದಿತಮಾಡಬೇಕೆಂಬ ವಗೈರೆ ಬರದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೧೯. ಪುನೇದ ಶ್ರೀಮಂತ ಮಾಧವರಾಯರು ಶ್ಯಾಬಾರ್ ತಾ|| ೧೧ ರಲ್ಲೂ ಬರದಿರುವ ರಹದಾರಿಯಲ್ಲಿ ಸಮಸ್ತ ದೇಶಕ್ಕೂ ಆಚಾರ ವಿಚಾರ ಯಾವತ್ತು ಶೃಂಗೇರಿ ಮಠದ್ದೇ ಸರಿ, ಅಗ್ರಪೂಜೆಮಾಡುವದೆಂತ ಬರದು ಇದೆ. ಯಿದು ಯಥಾರ್ಥ ಅಬದ್ಧವೆಂತ ತಿಳಿಕೊಳ್ಳವದಕ್ಕೆ ಆಗುವುದಿಲ್ಲ. ಯಿದರಲ್ಲಿ ಬರದಿರುವ ಪ್ರಕಾರ ಕೂಡ್ಲಿ ಮಠದವರು ಸಂಚಾರವಮಾಡದೇಯಿರಲಿಲ್ಲಾ. ಇವರ ಮಠವೂ ಬಹುದಿವಸದಿಂದಾ ಉಂಟಾಗಿ ಇವರ ಶಿಷ್ಯರಲ್ಲಿ ಆಚಾರ ವಿಚಾರ ನಡದು ಬರುತ್ತದೆ. ಈ ವಾದಿಗಳು ಆ ವಿಷಯಕ್ಕೆ ವಿವಾದಪಡಲಿಲ್ಲವಾದ್ದರಿಂದ ಯಿದು. ವಿವಾದಕ್ಕೆ ಉಪಯೋಗವಿಲ್ಲಾ.

೨೨೦, ೨೨೧, ೨೨೨, ಯಿ ಮೂರು ಸದರಿಯವರು ಸದರಿ ವಿಷಯವಾಗಿಬರದ್ದು. ಯಿವುಗಳು ವಿವಾದಕ್ಕೆ ಉಪಯೋಗವಿಲ್ಲಾ.

೨೨೩. ಸರ್ ೧೮೪೨ ನೆ ಯಿಸ್ವಿ ಮಾರ್ಚಿ ತಾ|| ೧೫ ಲ್ಲೂ ಕಮೀಷರ್ ಸಾಹೇಬ್ ಬಹದೂರವರ ರಹದಾರಿಯಲ್ಲಿ ಶೃಂಗೇರಿ ನರಶಿಂಹಭಾರತೀ ಸ್ವಾಮಿಗಳು ಶ್ರೀನಾಶಿಕಾ, ಪಂಚವಟೀ, ದ್ವಾರಕ, ಕುರುಕ್ಷೇತ್ರ, ಜಗನ್ನಾಥ, ಬದರಿಕಾಶ್ರಮ, ಕಾಶೀ ವಗೈರೆ ಪುಣ್ಯಕ್ಷೇತ್ರಗಳಿಗೆ ಶೃಂಗೇರಿಯಿಂದಾ ಹೊರಟು ಶಿವಮೊಗ್ಗಾ ಮಾರ್ಗವಾಗಿ ಹೋಗಿ ಬರುವದ್ದರಿಂದಾ ಮರ್ಯಾದೆಯಿಂದಾ ಕಂಡು, ವಾಜಮಿಕಿಮ್ಮತಿಗೆ ಬೇಕಾದ ಪದಾರ್ಥ ಕೊಡಿಸುವುದಲ್ಲದೆ ಯಿವರ ಅಮರಹಾಯಿರುವ ಆನೆ, ವಂಟೆ, ಹತ್ಯಾರು ವಗೈರೆ ಅಟಕಾಯಿಸದೆ ಬಿಡುವುದು —ಶಿವಾಯಿ ಛತ್ರ ಚಾಮರ ವಗೈರೆಯೀಮಠದ ಬಿರುದು ಸಯಿತಯಿರುವದರಿಂದ ಹರಕತ್ತು ವಗೈರೆಯಿಲ್ಲದೆ ಬಿಡುವುದು ಎಂಬ ವಗೈರೆ ಬರದುಯಿದೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೨೪. ಸರ್ ೧೮೩೬ ನೆ ಯಿಸ್ವಿ ಜೂನ್ ತಾ|| ೩೦ ರಲ್ಲೂ ನಗರದ ಸೂಪ್ರಿಂಟೆಂಡ್ಯಾಂಟು ಟೊಕ್ಸು ಸಾಹೇಬರು ಬರದಿರುವ ರಹದಾರಿಯಲ್ಲಿ ಶೃಂಗೇರಿ ಸ್ವಾಮಿಗಳು ರಾಮೇಶ್ವರ ಮೊದಲಾದ ಯಾತ್ರೆಗೆ ಹೋಗಿ ಬರುವದ್ದರಿಂದ ಮಾಮೂಲ್ ಮೇರಿಗೆ ಮರ್ಯಾದೆಗೂಡಿ ನಡದುಕೊಳ್ಳುವದೆಂತ ವಗೈರೆ ಬರದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೨೫. ಕ್ರೋಧಿಸಂ ಚೈತ್ರ ಬ. ೯ ಶಕೆ ೧೭೬೬ ನೇ ವರುಷದಲ್ಲಿ ಕೂಡ್ಲಿ ಮಠದ ಸೋಮೇಶ್ವರ ಶಾಸ್ತ್ರಿ, ಹೈದರಾಬಾದಿನಲ್ಲಿ ಬರಕೊಟ್ಟ ಕರಾರಿನಲ್ಲಿ ನಮ್ಮ ಕಡೆ ದಸ್ತೈವಜು ಮುಂತಾಗಿ ವಿಚಾರ್ಸಿ ವಿದ್ವನ್ಮಹಾಜನಗಳಿಗೆ ಕೊಡುವಲ್ಲಿ ಶೃಂಗೇರಿ ಮಠವೇ ಅನಾದಿ ಎಂತಲೂ, ಸರ್ವರೂ ಶೃಂಗೇರಿ ಮಠದ ಶಿಷ್ಯರೆಂತಲೂ ಮಹಜರು ಬರದುಕೊಟ್ಟುಯಿರುವದರಿಂದ ನಾನು ಕಬೂಲು ಪಟ್ಟುಯಿಥೇನೆ ಮುಂದೆ ಈ ತಂಟೆ ಬರುವುದಿಲ್ಲವೆಂದು ಬರದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

೨೨೬. ಸರ್ ೧೭೪೯ನೇ ಯಿಜರಿ ರಂಜಾನ್ ತಾರೀಖು ೨೦ ರಲ್ಲೂ ಹೈದರಾಬಾದು ರಾಜಾರಾಮಭಕ್ಷಿ ಬರಸಿರುವ ರಹದಾರಿಯಲ್ಲಿ ಶೃಂಗೇರಿಸ್ವಾಮಿಗಳು ಯಾತ್ರಾನಿಮಿತ್ಯ ಅಡ್ಡಪಾಲಕಿ, ಪಂಚಕಲಶ, ಶ್ವೇತಛತ್ರ, ಮಕರತೋರಣಾ, ಹಗಲು ದೀವಟಿಗೆ ಬೆಳ್ಳಿ ಅಂಬಾರಿ ವಗೈರೆ ಮಹಾಬಿರುದು ತೆಗೆದುಕೊಂಡು ಹೋಗಿ, ಬರುವದರಿಂದ ಯೀ ಬಿರುದುಗಳು ಯಿವರಿಗೆ ಸಲ್ಲತಕ್ಕದ್ದೇಹೊರ್ತು ಯಿತರಸನ್ಯಾಶೀ ವಿರೂಪಾಕ್ಷ, ಪುಷ್ಪಗಿರಿ, ಕೂಡ್ಲೀ ಕರವೀರ, ರಾಮಚಂದ್ರಾಪುರ, ತೀರ್ಥರಾಜಪುರಾ, ಹೊನ್ನೇನಹಳ್ಳಿ, ಶಿವಗಂಗೆ, ಆವಣಿ, ಮುಳುಬಾಗಿಲು, ಭಂಡಗಡಿ, ಕುಂಭಕೋಣ್ ವಗೈರೆ ಯಿವರು, ದೇಶಸಂಚಾರಮಾಡಿಕೊಂಡು, ಆಚಾರ ವಿಚಾರಮಾಡಿಕೊಂಡು ಬಂದಲ್ಲಿ, ಅವರ ಯಿತಬಾರಿ ಮಾಡಕೆಲಸವಿಲ್ಲಾ. ಬಿರುದು ಕೊಡುವುದಕ್ಕೂ, ತೆಗೆದುಕೊಳ್ಳುವುದಕ್ಕೂ, ಶೃಂಗೇರಿ ಸ್ವಾಮಿಗಳೇ ಮೊಖ್ತ್ಯಾರು ಇದಾರೆ. ಆದ್ದರಿಂದ ಆ ಮಠಗಳಲ್ಲಿ ಬಿರುದುಗಳು ಯಿದ್ದಲ್ಲಿ ತರ್ಸಿ ಶೃಂಗೇರಿಮಠಕ್ಕೆ ಕೊಡುವುದೆಂದು ಬರದು ಇದೆ. ಉಭಯ ಮಠಗಳು ಮೈಸೂರು ಸಂಸ್ಥಾನದಲ್ಲಿ ಇರುತದೆ. ಇವರಗಳ ಬಿರುದು ಬಾವಲೀ ಪದ್ಧತಿ, ಯಾವವಿಧವಾಗಿ ಲಾಗಾಯ್ತು ನಿಂದ ನಡದು ಬಂದಿಥೆಯೋ, ಅದರನ್ನ ಚನ್ನಾಗಿ ವಿಚಾರಣೆಮಾಡಿ ತಿಳಕೊಂಡು ನಿಶ್ಚಿಯಿಶಿ ಹುಕುಂ ಕೊಟ್ಟಹಾಗೆ ಕಾಣುವದಿಲ್ಲವಾದ್ದರಿಂದಾ, ೨೦೪ನೆ ಸಂಖೆ ದಸ್ತೈವಜಿಗೆ ಬರದಿರುವ ಸಬಬುಗಳಿಂದಾ ಸಹಾ ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೨೭. ಸದರಿ ತಾರೀಖಿನಲ್ಲಿ ಸದರಿಯವರು ಬರದಿರುವ ಯಿನ್ನೊಂದು ರಹದಾರಿಯಲ್ಲಿ ಶೃಂಗೇರಿ ಸ್ವಾಮಿಗಳವರು, ಕಾಶೀ ಮೊದಲಾದ ಯಾತ್ರೆ ಹೋಗಿಬರುವದ್ದರಿಂದ ಸರ್ವ ಜಾತೀ ಹತ್ಯಾರು ಛತ್ರ ಚಾಮರ ವಗೈರೆ, ಬಿರುದು, ಹಗಲು ದೀವಟಿಗೆ ಪಂಚ ಕಲಶ, ಸಮೇತ ಅಡ್ಡಪಾಲಕಿ ವಗೈರೆ ಯಿರುವ ಕಾರಣ, ಅಟಕಾವು ಯಿಲ್ಲದೆ ಸಕಲ ಮರ್ಯಾದೆಗಳು ಮಾಡಿಸುವಂತೆ ವಗೈರೆ ಬರೆದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ--

೨೨೮. ಶೃಂಗೇರಿ ಸ್ವಾಮಿಗಳವರಿಗೆ ಸಂಕೇಶ್ವರಮಠದ ಪಾರುಪತ್ಯೇಗಾರ ಶಿವರಾಂಭಟ್ಟ ಪ್ಲವಸಂ, ಮಾರ್ಗಶಿರ ಶುದ್ಧ, ೧ಲ್ಲೂ ಬರದಿರುವದರಲ್ಲಿ ಕೂಡ್ಲಿಯವರು ಶೃಂಗೇರಿ ಹೆಸರು ಮಾಡಿಕೊಂಡು, ಬಂದದ್ದಕ್ಕೆ ಸಾತಾರೆ ಶಂಭು ಛತ್ರಪತಿಯವರು, ಕೂಡ್ಲಿಯವರಿಗೆ ಕಿಂಚದ್ದೇಶ ಕೊಟ್ಟುತ್ತಹಾನಾಮಾ ಮಾಡಿಕೊಟ್ಟು ಯಿದ್ದರು, ಈಚೆಗೆ ಕೂಡ್ಲಿಯವರು, ಯೀ ಪ್ರಾಂತ್ಯಕ್ಕೆ ಬಂದುಯಿದ್ದ ವ್ಯಾಳೇದಲ್ಲಿ ಸಾತಾರೆಶಾಹು ಛತ್ರಪತಿಯವರು ಹಾಲಮರಿಯಾದೆ ಠರಾಯ್ತು ಕೊಟ್ಟು ಯೀ ಪ್ರಾಂತ್ಯಕ್ಕೆ ಬರಕೆಲ್ಸವಿಲ್ಲವೆಂತ ಕಾಗದಪತ್ರ ಬರಕೊಟ್ಟರು ಎಂಬ ವಿವರವಾಗಿ ಬರದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ--೪೦ ಅಂತೂ ನಾಲ್ವತ್ತು ದಸ್ತೈವಜುಗಳಿಂದ ವಾದಿವಿವಾದಕ್ಕೆ ಉಪಯೋಗವಿಲ್ಲಾ---

ಅಸಲಸಂಖೆ

೨೩೧. ದುಂದುಭಿ ಸಂ|ಚೈತ್ರ ಶು ೧೨ಲ್ಲೂ, ಕೂಡ್ಲಿ ಸ್ವಾಮಿಗಳಿಗೆ ಶಿವಮೊಗ್ಗೆ ಮಹಾ ಜನಂಗಳು ಬರೆದಿರುವದರಲ್ಲಿ. ನಾಲ್ವತ್ತೈವತ್ತು ವರ್ಷದಿಂದಾ, ನಾವು ದೇಶಸಂಚಾರ ಹೋಗಿಯಿದ್ದುದ್ದರಿಂದ, ಈ ಸ್ಥಳದ ಮಠಮುದ್ರೆ ಶೃಂಗೇರಿ ಮಠಕ್ಕೆ ನಡೆದು ಬಂತು, ಮುಂದೆ ನಮ್ಮ ಮಠಕ್ಕೆಮುಂದೆ ನಮ್ಮ ಮಠಕ್ಕೆ ನಡ್ಸುವದೆಂತ ಅಪ್ಪಣೆ ಆದ್ದರಿಂದ, ಆ ಮೇರಿಗೆ ನಡ್ಸುತ್ತಾ ಯಿದ್ದೇವೆಂದು, ಬರದುಯಿಥೆ. ಯಿದರಲ್ಲಿ ಬಿರುದು ಬಾವಲಿ ಸಂಗತಿಯು ಯಿಲ್ಲ. ಯಿದು ಜಬರದಸ್ತಿಯಿಂದ ಬರ್ಸಿಕೊಂಡರೆಂತ್ತ ಯೀ ಜನಗಳೇ ವಾದೀಮಠಕ್ಕೆ ಬರದಿರುವದ್ದರಿಂದಾ, ಯಿದು ಪ್ರತಿವಾದಿಗೆ ಉಪಯೋಗವಿಲ್ಲಾ--

೨೩೨. ಸರ್ ೧೮೩೩ನೆ ಯಿಸ್ವಿ ಜುಲೈ ತಾರೀಖು, ೨೮ರಲ್ಲೂ, ನಗರದ ಸೂಪ್ರಿಂಟೆಂಡ್ಯಾಂಟ್ ಮೊಕಲಾಯಿ ಸಾಹೇಬರವರು, ಕೂಡ್ಲಿ ಮಠದ ಸುಬೇದಾರ ಪುಟ್ಟ ಶಾಸ್ತ್ರಿಗಳಿಗೆ ಬರದಿರುವದರಲ್ಲಿ ಮಾಮೂಲು ಪ್ರಕಾರ ಬಿರುದಾವಳೀ ಸಮೇತ ಶ್ರೀ ಸ್ವಾಮಿಗಳವರು, ದಯಮಾಡುವಲ್ಲಿ ಹರಕತ್ತು ಸಂಭವಿಸದರೀತಿ ಅಪ್ಪಣೆ ಆಗಬೇಕೆಂದು ಬರದುಯಿಧೀರಿ. ಯಿದೇ ವಿಷಯವಾಗಿ ಸಾಬೀತು ಶೃಂಗೇರಿಯವರಕಡೆ ವೆಂಕಾಜೋಯಿಸನೆಂಬವನು ಶ್ರೀ ಕೂಡ್ಲಿಸ್ವಾಮಿಗಳವರು ಮಾಮೂಲಿಗೆ ವ್ಯತಿರಿಕ್ತವಾಗಿ ಬಿರುದಾವಳಿಗಳನಿಶಿ, ಶಿವಮೊಗ್ಗೆ ವಗೈರೆಕಡೆ ದಯಮಾಡಿಸುತ್ತಾರಂತೆ ಆ ಪ್ರಕಾರ ಆಗದಂತೆ ಅಪ್ಪಣೆ ಆಗಬೇಕಾಗಿ ಬರದುಕೊಂಡ ಸಂಗತಿ, ಸ್ಥಳದ ಅಮಲದಾರರ ಮುಖಾಂತರ ದರ್ಯಾಫ್ತಿ ಮಾಡಿಸುವಲ್ಲಿ ಶ್ರೀ ಸ್ವಾಮಿಗಳವರು, ಬಿರುದಾವಳೀ ಸಮೇತ, ಸಾಬೀತು ದಯಮಾಡಿದ ಹಾಗೆ ಕೆಲವು ದಾಖಲೆಗಳಿಂದ, ತಿಳಿದ್ದಾಗಿ ವಗೈರೆ ಅರ್ಜಿಬರದದ್ದರಿಂದ, ಮಾಮೂಲಿಗೆ ವಿರೋಧವಲ್ಲದ ರೀತಿ ನಡಸಬೇಕಾಗಿ ಶಿವಮೊಗ್ಗೆ ಆಮೀಲರಿಗೆ ೨೩೦ನೆ ನಂಬರು ಹುಕುಂ ಕೊಟ್ಟು ಇಥೆ. ಮಾಮೂಲು ಪ್ರಕಾರ ಸ್ವಾಮಿಗಳು ಸಂಚಾರಾರ್ಥ ದಯಮಾಡಿಸುವುದಕ್ಕೆ ಏನೂ ಅಡ್ಡಿ ಯಿರುವದಿಲ್ಲವೆಂತ, ಬರದು ಇಥೆ. ಇದು ಪ್ರತಿವಾದಿಗೆ ಸಾಧಕವಾಗಿ ಇಥೆ.

೨೩೩. ಸರ್ ೧೮೩೩ನೆ ಯಿಸ್ವಿ, ಜುಲೈ ತಾ ೩ರಲ್ಲೂ ನಗರದ ಸೂಪ್ರಿಂಟೆಂಡ್ಯಾಂಟ್ ಮೊಕಲಾಯಿ ಸಾಹೇಬರವರು, ಶಿವಮೊಗ್ಗೆ ಆಮೀಲ ಶ್ರೀನಿವಾಸರಾಯರಿಗೆ ಬರದಿರುವ ಹುಕುಂನಲ್ಲಿ ಕೂಡ್ಲಿ ಸ್ವಾಮಿಗಳು

ಮಾಮೂಲು ಬಿಟ್ಟು ಶಿವಮೊಗ್ಗೆ ವಗೈರೆ ಸ್ಥಳಕ್ಕೆ ಬರುವದಾಗಿಯಿಧಾರೆ. ಬಂದೋಬಸ್ತಾಗಬೇಕೆಂದು, ಶೃಂಗೇರಿ ಮಠದಕಡೆ ವೆಂಕಾಜೋಯಿಸಬರದು ಕೊಂಡ ಅರ್ಜಿ ಕಳುಹಿಸಿಯಿದೆ. ಮಾಮೂಲು ಶಿವಾಯಿ, ಜಾಸ್ತಿ ನಡೆಯದ ರೀತಿಗೆ, ತಕಯಾದ ಯಿಟ್ಟು, ಯಿತ್ತಿಲ್ಲೆಮಾಡುವುದು ಎಂತ ಹುಕುಂ ಸಾದರಾದ ಮೇರಿಗೆ, ಶಿವಮೊಗ್ಗ ಸ್ಥಳದನಾಡಿಗ ಶಟ್ಟಿ ವರ್ತಕ, ಕದೀಂ ಮಾಯಿತದಾರು, ವಗೈರೆ ಜನಗಳ ದರ್ಯಾಫ್ತಿಮಾಡಿ ಕೈಫಿಯತ್ತು ಕಳುಹಿಸಿದೆ ಯಂತಲೂ ಮಾಮೂಲು ಮೇರೆ ನಡೆಯುವಂತೆ, ತಕಯಾದು ಇಟ್ಟು ಇದೇನೆಂತಲೂ, ಬರದ್ದು, ಮುಲಾಯಿಜಾಫರಮಾಯಿಸು ವಲ್ಲ, ಕೂಡ್ಲಿ ಶೃಂಗೇರಿಸ್ವಾಮಿಗಳು, ಶಿವಮೊಗ್ಗೆ ಸ್ಥಳಕ್ಕೆ ಬರುವ ಮಾಮೂಲು ಇದೆ ಕೆಲವು ವ್ಯಾಳೆ ಶಿವಮೊಗ್ಗಿಗೆ ಸ್ವಾಮಿಗಳು ಬಂದವ್ಯಾಳೆ ಅಡ್ಡಪಾಲಖೀ, ಸ್ವೇತಛತ್ರೀ, ಮಕರತೋರಣ, ಹಗಲುದೀವಟಿಗೇ ವಗೈರೆ ಸಮಸ್ತ ಬಿರುದಾವಳೀ ನಿಶಿಬಂದು ಯಿದ್ದರು, ಆಗಫ ವಜು ಕಛೇರಿ ಮೊದಲಾದವರು, ಯಿಸ್ತಕಬಾಲ ಹೋಗಿ ಇದ್ದಹಾಗೆ ನಾಡಿಗ ವಗೈರೇರ ಕೈಫಿಯತ್ತಿನಲ್ಲಿ, ದಾಖಲೆಯಿರುವುದರಿಂದ ಮಾಮೂಲು ಪ್ರಕಾರ ನಡಿಯುವಂತೇ ತಕಯಾದು ಇಟ್ಟಿದ್ದು ಬೆಹತರಇದೆ ಯಂಬದಾಗಿ ಬರದುಇದೆ. ಇದು ಪ್ರತಿವಾದಿಗೆ ಸಾಧಕ ವಾಗಿದೆ. ಮತ್ತು ೧೮೪೨ನೇ ಯಿಸವಿ ಜುಲೈ ತಾರೀಖು ೨೯ಲ್ಲೂ ನಗರದ ಸೂಪ್ರಿಂಟೆಂಡ್ಯಾಂಟ್ ಡಿಪೋರಕು ಸಾಹೇಬರವರು, ಕೊಟ್ಟಿರುವ ೨೭೨ನೆ ಸಂಖೆ ಹುಕುಂನಲ್ಲಿ ನ್ಯಾಯಸ್ಥಳದಲ್ಲಿ ಫೈಸಲಾಗುವವರಿಗೂ, 'ಮೋಕೂಫ ಮಾಡಿ ಇಥೆ ಎಂತಾ ಬರದು ಯಿದೆ. ಆದ್ದರಿಂದ ಈ ಹುಕುಂ ರದ್ದಾಗುವದಿಲ್ಲ——

೨೩೪. ಸ್ ೧೮೪೦ನೆ ಯಿಸ್ವಿ ಅಗಟಂಬರು ತಾ ೧ ಲ್ಲೂ ಸೂಪ್ರಿಂಡೆಂಟ್ಯಾಟ್ ಮೊಕಲಾಯಿ ಸಾಹೇಬ ರವರು, ಕೂಡ್ಲಿಮಠದ ರಂಗಾಶಾಸ್ತ್ರಿಗಳಿಗೆ ಬರದುಯಿರುವದರಲ್ಲಿ, ಕೂಡ್ಲಿ ಸ್ವಾಮಿಗಳು ಶಿವಮೊಗ್ಗೆಗೆ ಬರಕೂಡ ದೆಂಬಹಾಗೆ ಶೃಂಗೇರಿ ಮಠದ ಕಡೆ ವೆಂಕಾಜೋಯಿಸರು ಏನೊಂದು ದಸ್ತಾವೈಜು ಬಲವಾದ ಸಬಬುಸಹಾ ಕೊಡಲಿಲ್ಲವಾದ್ದರಿಂದ ಮೊದಲುಬಂಡ ಪ್ರಕಾರ ಶಿವಮೊಗ್ಗೆಗೆ ಬರಬಹುದೆಂದು ಬರದುಯಿಥೆ. ಯಿದು ಪ್ರತಿ ವಾದಿಗೆ ಸಾಧಕವಾಗಿದೆ.

೨೩೫. ಸ್ ೧೮೩೮ನೇ ಯಿಸ್ವಿ ಜುಲೈ ತಾ ೮ಲ್ಲೂ ಕೂಡ್ಲಿ ಸ್ವಾಮಿಗಳಿಗೆ, ಶಿವಮೊಗ್ಗೆ ಅಮೀಲ ಬರದ್ದರಲ್ಲಿ. ೨೪೦ನೆ ನಂಬರು ಹುಕುಂ. ಕಳುಹಿಸಿಯಿಥೆ ಎಂದು ಬರದಿಥೆ.

ಯಿದು ಪ್ರತಿವಾದಿಗೆ ಸಾಧಕವಾಗಿದೆ——

೨೩೬. ಸ್ ೧೮೪೦ನೇ ಯಿಸ್ವಿ ಅಗಟಂಬರು ತಾ ೨೨ ಲ್ಲೂಸ್ವಾಮಿಗಳವರಿಗೆ ಸೂಪ್ರಿಂಡೆಂಟ್ಯಾಂಟ್ ಸಾಹೇಬರವರು, ಬರೆದಿರುವದರಲ್ಲಿ ಶಿವಮೊಗ್ಗಿಗೆ ತಾವು ಬರುವುದಕ್ಕೆ ಯೇನೂ ಪ್ರತಿಬಂಧಕಯಿರುವುದಿಲ್ಲವೆಂದೂ ಬರದು ಇಥೆ.

ಯಿದು ಪ್ರತಿವಾದಿಗೆ ಸಾಧಕವಾಗಿಥೆ——

೨೩೮. ಸ್ ೧೨೧೮ನೇ ಯಿಜರಿ ಛಂದಗುರ್ರೆ ಮಹಮ್ಮದಿಯಲ್ಲಿ ಟೀಪೂಸುಲ್ತಾನರು ಬರೆದಿರುವ ಹುಕುಂನಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳವರು ಸರಕಾರದ ಶೀಮೆಯಲ್ಲಿ ಸಾಬಕಾರಭ್ಯ ತಮ್ಮ ಶಿಷ್ಯರಿಂದ ಪೂಜೆ ತೆಗೆದುಕೊಳ್ಳುತ್ತಾ ಯಿದ್ದರು ಹಾಲಿ ಶೃಂಗೇರಿ ಸ್ವಾಮಿಗಳು ಆಚಾರ ವ್ಯವಹಾರ ಪ್ರಾಯಶ್ಚಿತ್ತ ವಿಚಾರಿಸುತ್ತಾ ರೆಂದು ಹಜೂರು ಜಾಯಿರಾಯ್ತು ಸಾಬಕಾರಭ್ಯ ಹರದೊ ಸ್ವಾಮಿಗಳಿಗೆ ಯಾವ ಬಾಬತ್ತೆ ನಡೆಯುತ್ತಾ ಇತ್ತು ಅಲ್ಲಿ ಕದೀಮರನ್ನ ವಿಚಾರಿಸಿ ಆ ಪ್ರಕಾರ ನಡೆದುಕೊಳ್ಳುವದೆಂದು ಹೇಳುವದು ಯಂಬದಾಗಿ ಬರೆದು ಯಿದ್ದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೩೯. ದಳವಾಯಿ ಬಸವರಾಜೈಯ್ಯನವರು ಸರ್ವಜಿತು ಸಂವತ್ಸರದ ಭಾದ್ರಪದ ಬಹುಳ ೧೦ಲ್ಲೂ ಲಿಂಗಲಾಪುರದ ಗ್ರಾಮದ ವಿವಾದ ವಿಷಯವಾಗಿ ಮಲ್ಲರಾಜಯ್ಯನಿಗೆ ಬರದು ಯಿರುವದ್ದರಿಂದ ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೪೦. ರುಧಿರೋದ್ಗಾರಿ ಸಂವತ್ಸರದ ಕಾರ್ತೀಕ ಬ. ೫ಲ್ಲೂ ಕೆಳದಿ ಬಸಪ್ಪನಾಯಿಕರು ಹರಿಕಾರ ವೆಂಕಣ್ಣನಿಗೆ ಬರದಿರುವದರಲ್ಲಿ. ಶೃಂಗೇರಿಸ್ವಾಮಿಗಳು ಮಹಾಯಾತ್ರೆ ಹೋಗಿದ್ದ ಕಾಲದಲ್ಲಿ ಪುಸ್ತಕ ಸನ್ಯಾಸಾ ಮಾಡಿಕೊಂಡ ಕೆಲವು ದಿವಸದ ಮೇಲೆ ಸದರಿ ಸ್ವಾಮಿಗಳು ಕೂಡ್ಲಿಗೆ ಬಂದು ಹಜೂರಿಗೆ ಬರದುಕೊಂಡರು ಆಗ ಪುಸ್ತಕ ಸನ್ಯಾಸಾ ಮಾಡಿಕೊಂಡವರಿಗೆ ಯಿವರು ಉಪದೇಶಮಾಡಬೇಕು. ಅವರು ಶೃಂಗೇರಿಯಲ್ಲಿ ಪೂಜೆ ಪುನಸ್ಕಾರ ಮಾಡಿಕೊಂಡು ಯಿರಬೇಕು. ಕೂಡ್ಲಿಯವರು ಸಂಚಾರಮಾಡಿಕೊಂಡು ಮೊದಲು ತಹಾ ಮಾಡಿರು ಮೇರಿಗೆ ನಡೆದುಕೊಳ್ಳಬೇಕು. ಯೀ ಪ್ರಕಾರ ಉಭಯಸ್ವಾಮಿಗಳಿಗೂ ಹೇಳುವದು ಬರೆದು ಯಿದೆ. ಯಿದು ಬಹಳ ದಿವ್ಸವಾದ್ದರಿಂದ ಯಿದರ ಯಥಾರ್ಥ ತಿಳಿದುಕೊಳ್ಳವದಕ್ಕೆ ಯಿ ದಸ್ತೈವಜು ನಿಶ್ಚಯಿಸುವುದಕ್ಕೆ ಆಗೊದಿಲ್ಲವಾದ್ದ ರಿಂದ ಪ್ರಕೃತೋಪಯೋಗವಾಗುವುದಿಲ್ಲ.

೨೪೧. ಕ್ರೋಧನ ಸಂವತ್ಸರದ ಫಾಲ್ಗುಣ ಬಹುಳ ೬ಲ್ಲೂ ಕೂಡ್ಲಿಸ್ವಾಮಿಗಳಿಗೆ ಪೂರ್ಣಯ್ಯನವರು ಬರೆದಿರುವುದರಲ್ಲಿ ತಾವು ಬರೆದ ವಿವರ ತಿಳಿಬಂತು. ಪೂರ್ವಪದ್ಧತಿ ಮೇರಿಗೆ ಶೃಂಗೇರಿಯವರು ಶಾರದಾಮ್ಮನವರ ಪೂಜೆ ಮಾಡಿಕ್ಕೊಂಡು ಶೃಂಗೇರಿಯಲಿರುವಂತೆ ಅವರಿಗೆ ಬರಸಿಕಳುಹಿಶಿಯಿಥೆ. ತಾವು ಸಕಲ ದೇಶ ಸಂಚಾರ ಮಾಡಿಕೊಂಡು ಆಚಾರವಿಚಾರ ಮಾಡಿಕೊಳ್ಳಬಹುದು. ಯಂಬ ವಗ್ಯೆರೆ ಬರೆದು ಯಿಥೆ. ಯಿದರಿಂದ ಕೂಡ್ಲಿ ಮಠದವರಿಗೆ ಸಕಲ ದೇಶ ಸಂಚಾರ ಉಂಟೆಂತಲ್ಲೂ ಅನಾದಿ ಮಠವೆಂತಲ್ಲೂ, ತುಂಡುಮಠವಲ್ಲವೆಂತಲ್ಲೂ, ತೋರುವುದಲ್ಲದೆ ಪೂರ್ಣಯ್ಯನವರು ಈ ಸಂಸ್ಥಾನದಲ್ಲಿ ಬಹುಕಾಲ ಅನುಭವಶಾಲಿ ಆದ್ದರಿಂದ ಪೂರ್ವಾಪರ ವಿಚಾರಿಸಿ ಬರದುಕೊಟ್ಟಹಾಗೆ ತ್ತೋರುವದ್ದರಿಂದಾ ಸಹ ಪ್ರತಿವಾದಿಗೆ ಸಾಧಕವಾಗಿಯಿಥೆ.

೨೪೨. ದುರ್ಮುಖಿ ಸಂವತ್ಸರದ ಜೇಷ್ಟ ಬಹುಳ ೨ಲ್ಲೂ ನವಾಬಹೈದರಲ್ಲಿ ಖಾನರ ರಹದಾರಿಯಲ್ಲಿ ಕೂಡ್ಲಿಮಠದ ಶಂಕರ ಭಾರತೀ ಸ್ವಾಮಿಗಳವರು ತಮ್ಮ ಸ್ಥಳಕ್ಕೆ ಹೋಗುವದ್ದರಿಂದ ಯಿವರ ಸಂಗಡ ಯಿರುವ ಆನೇ ಕುದುರೆ ವಗ್ಯೆರೆ ತಡಿಯದೇ ಬಿಡುವುದೆಂತಾ ಬರದು ಯಿದೆ. ಯಿದು ಪ್ರತಿವಾದಿ ವಿವಾದಕ್ಕೆ ಉಪಯೋಗವಿಲ್ಲ.

ಆದರೆ ಯೀ ಮಠ ತುಂಡು ಮಠವಲ್ಲವೆಂತ ತೋರುತ್ತೆ.

೨೪೩. ಶಿದ್ಧಾರ್ಥಿ ಸಂವತ್ಸರದ ಕಾರ್ತೀಕ ಶುಕ್ಲ ೧ಲ್ಲೂ ನಂಜರಾಜಯ್ಯನವರ ರಹದಾರಿಯಲ್ಲಿ ಕೂಡ್ಲಿ ಸ್ವಾಮಿಗಳು ಶೀರ್ಯದ ಪ್ರಾಂತದಿಂದ ಪಟ್ಟಣಕ್ಕೆ ಬರುವದ್ದರಿಂದ ಯಿವರ ಸಂಗಡ ಪಾಲ್ಕಿ, ಆನೆ ವಂಟೆ, ಕುದುರೆ ವಗ್ಯೆರೆ ಬರುವದ್ದರಿಂದಾ, ಯಿಳಿಸಿ ಮುಂದಕ್ಕೆ ಸಾಗಿ ಕಳುಹಿಸುವುದೆಂತ್ತ ಬರೆದು ಯಿಥೆ.

ಯಿದು ವಿವಾದಕ್ಕೆಉಪಯೋಗವಿಲ್ಲಾ.

ಆದರೆ ತುಂಡು ಮಠವಲ್ಲ ಯಂತ್ತಾ ತೋರುತ್ತೆ.––

೨೪೪. ದುರ್ಮುಖಿ ಸಂವತ್ಸರದ ಜೇಷ್ಠ ಬಹುಳ ೧೪ಲ್ಲೂ ರಾಜಾರಾಮರ, ರಹದಾರಿಯಲ್ಲಿ ಶೃಂಗೇರಿ ಶಂಕರ ಭಾರತೀ ಸ್ವಾಮಿಗಳು ಚಾತುರ್ಮಾಸ ಸಂಕಲ್ಪನಿಮಿತ್ತ ಯಥಾ ಪ್ರಕಾರ ಕೂಡ್ಲಿ ಮಠಕ್ಕೆ ಬರುವದ್ದರಿಂದ ಈ ದೇಶ ಸಂಚಾರ ಮಾಡುವದ್ದರಿಂದ ಸಹಾ, ಯಿವರ ಸಂಗಡ ಬರುವ ಬ್ರಾಹ್ಮಣರು ಶೂದ್ರರು ಆಳು ಕಾಳು ನಗಾರಿ ನಿಶಾನಿ ವಗ್ಯೆರೆ ತಡೆಯದೆ ಬಿಡುವದೆಂಬದಾಗಿ ಬರದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.

ಆದರೆ ತುಂಡುಮಠವಲ್ಲವೆಂತ ತೋರುತ್ತೆ.

೨೪೫. ಥಾಂದ್ ೧೪ನೇ ಜಿಲ್‌ಹೆಜ್‌ನಲ್ಲಿ ಶ್ರೀಮಂತ್ತರಹದಾರಿಯಲ್ಲಿ ಕೂಡ್ಲಿಮಠದ ನರಸಿಂಹಭಾರತೀ ಸ್ವಾಮಿಗಳು ಗಂಗಾಸ್ನಾನಕ್ಕೆ ಹೋಗುತ್ತಾ ಯಿಧಾರೆ, ಅವರು ಇಳಿದಕಡೆ ಚೌಕಪಹರೆ ಜಾಗ್ರತೆ ಪಡಿಸುವುದೆಂಬ ದಾಗಿ ಬರದು ಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲ––

೨೪೬. ಸಾತಾರೆಯವರು ಚಂದ ೧೯ನೆ ರಬಿಲಾವಲ್‌ನಲ್ಲಿ ಬರದ ರಹದಾರಿಯಲ್ಲಿ ಕೂಡ್ಲಿ ಶಂಕರಾ ಚಾರ್ಯರು ಗಂಗಾಸ್ನಾನಕ್ಕೆ ಗೋದಾವರಿಗೆ ಹೋಗುತ್ತಾರೆ, ಮೊಕ್ಕಾಂ ಮಾಡಿದ ಕಡೆ ಸಾಹಿತ್ಯಮಾಡಿಕೊಡುವು ದೆಂಬದಾಗಿ ಬರೆದುಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲ.

೨೪೭. ದಫಾಥಾಂದ್ ೯ರಲ್ಲೂ ರಹದಾರಿ ವಂದಕ್ಕೆ ಸ್ವಾಮಿಗಳು ಈ ಶೀಮೆಗೆ ಬರುವದ್ದರಿಂದಾ ಪೂಜೆ ಪುನಸ್ಕಾರ ಮಾಡಿಸುವುದೆಂಬದಾಗಿ ಬರೆದುಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲ––

೨೪೮. ಶಿದ್ಧಾರ್ಥಿ ಸಂವತ್ಸರದ ಕಾರ್ತೀಕ ಶುದ್ಧ ೮ರಲ್ಲೂ ಪೂರ್ಣಯ್ಯನವರ ರಹದಾರಿಯಲ್ಲಿ ಕೂಡ್ಲಿ ಯಲ್ಲಿರುವ ಶೃಂಗೇರಿ ಶಂಕರ ಭಾರತೀ ಸ್ವಾಮಿಗಳು ದೇಶಸಂಚಾರಾರ್ಥವಾಗಿ ಸಾಗಿ ಬರುವದ್ದರಿಂದ ಪೂರ್ವ ಪ್ರಕಾರ ಮರ್‍ಯಾದೆಯಿಂದ ವಿಚಾರ್‍ಸಿಕೊಳ್ಳುವುದಾಗಿ ಬರೆದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ. ಆದರೆ ಯಿದು ಶೃಂಗೇರಿ ಪೀಠವೆಂತಲೇ ತೋರುತ್ತೆ.

೨೪೯. ಆಂಗೀರಸ ಸಂವತ್ಸರದ ಜೇಷ್ಠ ಬಹುಳ ೧೩ಲ್ಲೂ ಮಹಾರಾಜಾ ರಾಜಾಸಾಹೇಬ ಬಹದರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳು ಮೈಸೂರಿಗೆ ದಯಮಾಡುವದ್ದರಿಂದ ಸಂಸ್ಥಾನದ ಮರ್‍ಯಾದೆಯಿಂದ ಕರತಂದು ಯಿಳಿಸಿ ೫೦೦ ಜನದ ಪದಾರ್ಥಕೊಟ್ಟು ಭಿಕ್ಷಾ ಮಾಡಿಸುವುದೆಂಬದಾಗಿ ಬರೆದುಯಿದೆ. ಯಿದರಿಂದ ಕೂಡ್ಲಿ ಮಠದವರಿಗೆ ಸಂಚಾರ ಉಂಟೆಂತಲೂ ತುಂಡು ಮಠವಲ್ಲವೆಂತಲೂ ತೋರುವದ್ದರಿಂದಾ ಯಿದು ಪ್ರತಿ ವಾದಿಗೆ ಸಾಧಕವಾಗಿ ಯಿಥೆ––

೨೫೦. ಸದರಿ ತಾರೀಖಿನಲ್ಲಿ ಕೂಡ್ಲಿ ಸ್ವಾಮಿಗಳಿಗೆ ಮಹಾರಾಜ ರಾಜಾಸಾಹೇಬ ಬಹದರವರು ಬರೆದಿರುವ ಬಿನ್ನಹ ಪತ್ರವೆಂಬ ನಿರೂಪದಲ್ಲಿ ಪ್ರಕೃತಧಾರಣಾರ್ಥವಾಗಿ ವಸ್ತ್ರ ರಹದಾರಿ ಸಹ ಕಳುಹಿಸಿ ಯಿದೆ ಎಂದು ಬರೆದು ಯಿಥೆ. ಯಿದು ಸದರಿ ಮೇರಿಗೆ ಪ್ರತಿವಾದಿಗೆ ಸಾಧಕವಾಗಿ ಯಿಥೆ--

೨೫೧. ಪ್ರಜೋತ್ಪತ್ತಿ ಸಂವತ್ಸರದ ಜೇಷ್ಠ ಶು ೯ಲ್ಲೂ ಮಹಾರಾಜಾರಾಜಾ ಸಾಹೇಬ್ ಬಹದರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳು ಸಂಚಾರಾರ್ಥವಾಗಿ ಬಂದಿರುವದ್ದರಿಂದ ಮರ್ಯಾದೆಯಿಂದ ಕರತಂದು ಯಿಳ್ಸಿ ವಂದು ದಿವಸದ ಭಿಕ್ಷ ಸರಕಾರದಿಂದ ಮಾಡಿಸುವುದೆಂಬದಾಗಿ ಬರೆದು ಯಿಥೆ.

ಯಿದು ಸದರಿ ಮೇರಿಗೆ ಪ್ರತಿವಾದಿಗೆ ಸಾಧಕವಾಗಿಥೆ

೨೫೨. ಚಿತ್ರಭಾನು ಸಂವತ್ಸರದ ಮಾಘ ಶುದ್ಧ ೧೩ಲ್ಲೂ ಮಹಾರಾಜಾ ರಾಜಾ ಸಾಹೇಬ್ ಬಹದರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳವರು ಗೋಕರ್ಣಕ್ಕೆ ಹೋಗಿ ಬರುವದ್ದರಿಂದ ಮರ್ಯಾದೆಯಿಂದ ಕರತಂದು ಯಿಳ್ಸಿ ೫೦೦ ಜನ ಪದಾರ್ಥಕೊಟ್ಟು ವಂದು ದಿವಸದ ಭಿಕ್ಷಾಮಾಡಿಸುವದೆಂಬದಾಗಿ ಬರೆದುಯಿಥೆ. ಯಿದು ಸದರಿ ಮೇರಿಗೆ ಪ್ರತಿವಾದಿಗೆ ಸಾಧಕವಾಗಿದೆ.

೨೫೩. ಈಶ್ವರಸಂ॥ರದ ಅಧಿಕ ಶ್ರಾವಣ ಬಹುಳ ೩೦ಲ್ಲೂ, ಮಹಾರಾಜರಾಜಾಸಾಹೇಬ್ ಬಹದ್ದೂರ್ರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿಸ್ವಾಮಿಗಳು ದೇಶಸಂಚಾರ ಹೋಗುವದ್ದರಿಂದ ಮರ್ಯಾದೆಯಿಂದ ಕರತಂದು ಯಿಳ್ಸಿ ೫೦೦ ಜನದ ಪದಾರ್ಥಕೊಟ್ಟು ಭಿಕ್ಷಾಮಾಡಿಸುವದೆಂಬದಾಗಿ ಬರದುಯಿಥೆ.

ಯಿದು ಸದರಿ ಮೇರಿಗೆ ಪ್ರತಿವಾದಿಗೆ ಸಾಧಕವಾಗಿಥೆ

೨೫೪. ಭಾವ ಸಂ॥ರದ ಆಶ್ವಯುಜ ಬ. ೨ಲ್ಲೂ ಮಹಾರಾಜಾರಾಜಾಸಾಹೇಬ ಬಹದ್ದೂರವರ ರಹದಾರಿಯಲ್ಲಿ ಶೃಂಗೇರಿ ಕೂಡ್ಲಿಮಠದ ಸ್ವಾಮಿಗಳವರು ಮಾತ್ರ ದೇಶ ಸಂಚಾರಾರ್ಥವಾಗಿ ಹೋಗುವದರಿಂದ, ೫೦೦ ಜನ ಸೋಬಸ್ಕರ ಕೊಡುವದೆಂಬದಾಗಿ ವಗೈರೆ ಬರದುಯಿಥೆ--

ಯಿದು ಸದರಿಮೇರಿಗೆ ಪ್ರತಿವಾದಿಗೆ ಸಾಧಕವಾಗಿಯಿಥೆ

೨೫೫. ಬಹುಧಾನ್ಯ ಸ॥ರದ ಮಾರ್ಗಶಿರ ಶು. ೧೫ ಲ್ಲೂ, ಮಹಾರಾಜಾರಾಜಾಸಾಹೇಬ ಬಹದೂರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳವರು ದೇಶ ಸಂಚಾರಾರ್ಥವಾಗಿ ಹೋಗಿಬರುವದ್ದರಿಂದ, ದಿನ ೧ಕ್ಕೆ ೫೦೦ ಜನದ ಪದಾರ್ಥ ಕೊಡಿಸುವುದೆಂಬ ವಗೈರೆ ಬರೆದು ಯಿಥೆ. ಯಿದು ಸದರಿಮೇರಿಗೆ ಪ್ರತಿವಾದಿಗೆ ಸಾಧಕವಾಗಿಥೆ.

೨೫೬. ಶಾಹೂಛತ್ರಪತ್ತಿ ಜಯಸಂ॥ ಫಾಲ್ಗುಣ ಶು. ೧೪ ಲ್ಲೂ ಬರದ ರಹದಾರಿಯಲ್ಲಿ ಶೃಂಗೇರಿ ಮಠದ ಕೂಡ್ಲಿ ಸ್ವಾಮಿಗಳು ಗೋದಾವರಿಗೆ ಹೋಗಿಬರುವದ್ದರಿಂದ ಯಿವರಸಂಗಡ ಯಿರುವ ಆನೇ ಕುದುರೆ ಹತ್ಯಾರು ವಗೈರೆ ಬಿಟ್ಟುಬಿಡುವುದೆಂಬದಾಗಿ ಬರದು ಇಥೆ.

ಯಿದು ಪ್ರತಿವಾದಿಗೆ ಸಾಧಕವಾಗಿಥೆ.

೨೫೭. ಕೂಡ್ಲಿ ಶೃಂಗೇರಿಸ್ವಾಮಿಗಳವರಿಗೆ ಶ್ರೀಮಂತ ಬಾಜೇರಾಯರು ಬರೆದಿರುವುದರಲ್ಲಿ ವಂದು ಗ್ರಾಮ ಯಿನಾಂ ಕೊಟ್ಟುಯಿಥೆ ಎಂಬದಾಗಿ ಬರದುಯಿಥೆ. ಯಿದು ಪ್ರತಿವಾದಿ ವಿವಾದಕ್ಕೆ ಸಾದಕವಾಗಿಯಿಥೆ. ಯಿದರಿಂದ ತುಂಡುಮಠವಲ್ಲವೆಂತ ತೋರುತ್ತೆ.

೨೫೮. ಶ್ರೀಮಂತರು ಬಿದನೂರುಬಸಪ್ಪನಾಯ್ಕರಿಗೆ ಬರದ್ದರಲ್ಲ, ಕೂಡ್ಲಿಮಠದ ಶೃಂಗೇರಿ ಶಂಕರ ಭಾರತೀಸ್ವಾಮಿಗಳವರು ಈ ದೇಶಕ್ಕೆ ಬಂದು ನೀವು ಕೊಟ್ಟ ಗ್ರಾಮ ಭೂಮಿ ವಿಚಾರ ಹೇಳಿದ್ದರಿಂದ ಬಹಳ ಸಂತೋಷವಾಗಿಯಿಥೆ. ಮುಂದೆ ಅವಿಛಿನ್ನವಾಗಿ ನಡಸಿಕೊಂಡು ಬರತಕ್ಕ ವಿಷಯದಲ್ಲಿ ಬರ್ಸತಕ್ಕದ್ದು ಯೇನು ಯಿಥೆ–ಯೆಂಬದಾಗಿ ಬರದುಯಿಥೆ--

ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ--

೨೫೯. ಶ್ರೀಮಂತರು ಬೂದಿಬಸಪ್ಪನಾಯ್ಕರಿಗೆ ಬರದುಯಿರುವದರಲ್ಲಿ, ಕೂಡ್ಲಿಶೃಂಗೇರಿ ಶಂಕರಭಾರತೀ ಸ್ವಾಮಿಗಳು ಯೀದೇಶಕ್ಕೆ ಬಂದು ಯಿದ್ದರು. ಯಥಾವಿಧಿ, ಮರ್ಯಾದೆಮಾಡಿಯಿದೇವೆ, ದೊಡ್ಡವರು ಈ ಮಠ ಪುರಾತನ ಗುರುಪರಂಪರಾಯಿಥೆ, ಎಂಬ ವಿವರವಾಗಿ ಬರದುಯಿಥೆ. ಯಿದರಿಂದ ಈ ಮಠ ತುಂಡುಮಠವಲ್ಲ ವೆಂತ ತೋರುವದ್ದರಿಂದ ಯಿದು ಪ್ರತಿವಾದಿಗೆ ಸಾಧಕವಾಗಿಥೆ.

೨೬೦. ಹರಪನಹಳ್ಳಿ ಸಂಸ್ಥಾನದ ಬಸಪ್ಪನಾಯ್ಕರಿಗೆ ಪ್ರಧಾನಮಧ್ದೂರಾವ್ ಬಲಾಲ ಬರದ್ದರಲ್ಲಿ ಕೂಡ್ಲಿಸ್ವಾಮಿಗಳವರಿಗೆ ಸಾವಗಾನೆಯಲ್ಲಿ ವರುಷಾಶನ ಮುಂತಾದ್ದು ಯಿಥೆ. ಆ ಪ್ರಕಾರ ಸರಕಾರದಿಂದಲೂ

ಸನ್ನದು ಯಿದೆ. ಸುದಾಮುದು ನಡೆಯುವಮೇರಿಗೆ ನಡಿಸುವದೆಂತಾ ಬರದುಯಿದೆ.

ಯಿದು ಪ್ರತಿವಾದಿಗೆ ಸಾಧಕವಾಗಿಥೆ–

೨೬೧. ಮಹೀಪತಿರಾವು ದಿನಕರ ಹೆಸರಿಗೆ ರಘೋಜಿಭೋಸಲೆ ಬರದ್ದರಲ್ಲಿ. ವ್ಯಾಪಾರಸ್ತ ಮುಂತಾದವರಿಂದಾ, ಶಂಕರಾಚಾರ್ಯರ ಕಡೆ ಬ್ರಾಂಹ್ಮರಿಗೆ ವಂದು ರೂಪಾಯಿ ಯಿಮೇರಿಗೆ ಕೊಡಿಸಬೇಕು, ಕೊಡದೆಯಿದ್ದಲ್ಲ ಬಹಿಷ್ಕಾರಹಾಕ್ಯಾರು, ಎಂಬದಾಗಿ ಬರದುಯಿಥೆ. ಯಿದು ಪ್ರತಿವಾದಿಗೆ ಸಾಧಕವಾಗಿದೆ—

೨೬೨. ಶಂಕರಾಚಾರ್ಯಸ್ವಾಮಿಗಳವರಿಗೆ ಸದರಿ ಭೋಸಲೆ ಬರದ್ದರಲ್ಲಿ ತಾವು ಜಗದ್ಗುರುಗಳು. ತಾವು ಒಬ್ಬನಿಗೆ ಬಹಿಷ್ಕಾರ ಹಾಕಿದ್ದು ಶುದ್ಧಪತ್ರಿಕೆ ಕಳುಹಿಸಿಕೊಡಬೇಕೆಂಬದಾಗಿ ಬರದುಯಿಥೆ. ಯೀಮಠ ತುಂಡುಮಠವಲ್ಲವಾದ್ದರಿಂದ ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ––

೨೬೩. ಜಯ ಸಂ|ರದ ಭಾದ್ರಪದ ಶು| ೧೦ ಲ್ಲೂ, ಅಬ್ದುಲ್‌ಹುಶೇ೯ಸಾಬರು ಜಾಲೀಕುಂಟೆ ಗ್ರಾಮವನ್ನು ಶೃಂಗೇರಿವಡೇರಿಗೆ ಯಿನಾಮಾಗಿ ಕೊಟ್ಟುಯಿಥೆ ಯಂಬದಾಗಿ ಬರದುಯಿಥೆ. ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ––

೨೬೪. ಶೃಂಗೇರಿಶಂಕರಭಾರತೀಸ್ವಾಮಿಗಳಿಗೆ ಪೂರ್ಣಯ್ಯನವರು ಬಗರಸಾಲ್ ಮಾಹೆ ತಾರೀಖಿನಲ್ಲಿ ಬರದಿರುವುದರಲ್ಲಿ ಬಾಜೀರಾಯರಿಗೆ ದರುಶನಾಕೊಟ್ಟು ಅವರು ಮಾಡಿದಪೂಜೆ ಕೇಳಿ ಸಂತೋಷವಾಯಿತು. ಯೀಗ ಧಾರಣಾರ್ಥವಾಗಿ ಕೃಷ್ಣಶಾಸ್ತ್ರೀಕೈಲಿ ಜೋಡುಧೊತ್ರಾ ಕಳುಹಿಸಿಯಿದೆ ಯಂಬದಾಗಿ ಬರದುಯಿಥೆ. ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ––

೨೬೫. ಕ್ರೋಧನ ಸಂ|ರದ ಫಾಲ್ಗುಣ ಬ ೭ಲ್ಲೂ, ಶೃಂಗೇರಿಕೂಡ್ಲಿ ಶಂಕರಭಾರತೀಸ್ವಾಮಿಗಳವರಿಗೆ ಪೂರ್ಣಯ್ಯನವರು ಬರದಿರುವುದರಲ್ಲಿ ಶಿಷ್ಯರಲ್ಲಿ ಆಚಾರ ವಿಚಾರಮಾಡುವಲ್ಲಿ ಸದಾಗೂಡಿನಡಿಸಿಕೊಂಡು ಬರುವ ಹಾಗೆ ವಟ್ಟು ತಾಕೀತಿ ಕಳುಹಿಸಬೇಕೆಂತ ಅಪ್ಪಣೆಕೊಟ್ಟ ಬಗ್ಯೆ, ತಮ್ಮ ಶಿಷ್ಯರಲ್ಲಿ ತಾವು ವಿಚಾರಮಾಡುವುದಕ್ಕೆ ಅರಮನೆ ತಾಕೀತಿ ಕಳುಹಿಸಿದರೆ ಬಲವಂತವಾಗಿ ತೋರುತ್ತಾಯಿಥೆ. ತಮ್ಮ ಶಿಷ್ಯರನ್ನು ತಾವು ವಿಚಾರಮಾಡುವಲ್ಲಿ ಯಾರೂ ಅಡ್ಡಿಬರತಕ್ಕದ್ದಿಲ್ಲವೆಂದು ಬರದುಯಿಥೆ––ಯಿದು ಸದರಿಮೇರಿಗೆ ಪ್ರತಿವಾದಿಗೆ ಸಾಧಕವಾಗಿಥೆ

೨೬೬. ದುಂದುಭಿ ಸಂ|ರದ ಕಾರ್ತೀಕ ಬ. ೧೦ ಲ್ಲೂ, ಪೂರ್ಣಯ್ಯನವರು ನಗರದ ಸುಭೇದಾರ ರಾಮರಾಯರಿಗೆ ಬರೆದಿರುವುದರಲ್ಲಿ ಶೃಂಗೇರಿಮಠದ ಸ್ವಾಮಿಗಳಿಗೂ, ಕೂಡ್ಲಿಮಠದ ಸ್ವಾಮಿಗಳಿಗೂ ಪೂರ್ವದಿಂದ ಯಾವ ಮೇರಿಗೆ ಮರ್ಯಾದೆ ನಡದು ಬಂತೋ, ಆ ಪ್ರಕಾರ ಸಾರೋಧ್ಧಾರ ಮಾಡುವದೆಂಬದಾಗಿ ಬರದುಯಿಥೆ

ಯಿದು ಸದರಿಮೇರಿಗೆ ಪ್ರತಿವಾದಿಗೆ ಸಾಧಕವಾಗಿಯಿಥೆ. ಮತ್ತು ತುಂಡುಮಠವಲ್ಲವೆಂತ ತೋರುತ್ತೆ––

೨೬೭. ನಗರದ ಸುಭೇದಾರ ರಾಮರಾಯರು ತುಕಡಿ ಅಮೀಲರಿಗೆ ಬರದ್ದರಲ್ಲ, ಕೂಡ್ಲಿಶೃಂಗೇರಿಸ್ವಾಮಿಗಳು ಮಠಕ್ಕೆ ಪೂರ್ವಾರಭ್ಯ ಆಚಾರವಿಚಾರ ಅಗ್ರತಾಂಬೂಲಾ ಮುಂತಾಗಿ ವಿಚಾರ್ಸಿಕೊಳ್ಳುವಲ್ಲಿ ಶೃಂಗೇರಿಮಠದವರು, ಅಡ್ಡೀಮಾಡಕೆಲಸವಿಲ್ಲವೆಂದು ಹುಜೂರು ಪರವಾನೆಬರದು ಯಿರುವದ್ದರಿಂದ, ಪೂರ್ವದಮೇರಿಗೆ ಕೂಡ್ಲಿ ಮಠದ ಪಾರುಪತ್ಯೇಗಾರ ವಿಚಾರಮಾಡಿಕೊಂಡು ಬರುವಲ್ಲಿ ಅಡ್ಡಿಮಾಡದಂತೆ ಸರಾಗಗೂಡಿ ನಡೆಸಿಕೊಂಡು ಬರುವುದು ಎಂಬದಾಗಿ ಬರದುಯಿಥೆ

ಯಿದು ಸದರಿಮೇರಿಗೆ ಪ್ರತಿವಾದಿಗೆ ಸಾಧಕವಾಗಿಯಿಥೆ––

೨೬೮. ವಿರೋಧಿ ಸಂ|ಭಾದಪದಶು. ೧ ಲ್ಲೂ ಶೃಂಗೇರಿ ಶಂಕರಭಾರತೀ ಸ್ವಾಮಿಗಳವರಿಗೆ ಮಜರಜನಲ್ ಸಹಜಾಮಲಕಂ ಸಾಹೇಬರವರು ಬರದಿರುವುದರಲ್ಲಿ ವಿಮಲನಿರ್ಮಲ ಶ್ರೀ ಶಂಕರಾಚಾರ್ಯರ ವೃಂದಾವನದ ದರುಶನಕ್ಕೆ ಹೋಗಬೇಕಾಗಿಯಿಥೆ. ಈ ಬಗ್ಗೆ ರಹದಾರಿ ಕೊಡಿಸಬೇಕು. ಭೂಸಾವಗೈರೆ ಸುಂಕ ಸರಕಾರಕ್ಕೆ ತೆಗೆದುಕ್ಕೊಂಡು, ಹೋದಸಬುಬು ಧಾರವಾಡದ ಸುಭೇದಲ್ಲಿ, ಭೂಸಾವಗೈರೆ ಸುಂಕದ ಮೇಲೆ ರುಸುಂ ಮಾಮೂಲಿಂದಾ ಸಂಸ್ಥಾನಕ್ಕೆ ತೆಗೆದುಕೊಳ್ಳುವ ಚ್ಯಾಲೂಇದೆ ಆ ಪ್ರಕಾರ ಕೊಡಿಸಬೇಕು, ಎಂಬದಾಗಿ ಬರದ್ದಕ್ಕೆ, ೩ನೆ ಕಲಂನ ವಿಷಯುಕ್ಕೆ ಸುಭಾಕಲೇಕ್ಟರು ಸಾಹೇಬರಿಗೆ ಮೊದಲೇ ಬರದುಯಿಥೆ, ಸುಭಾಕಲೆಕ್ಟರುಸಾಹೇಬರು ಸರ್ವರಿಗೂ ರಹದಾರೀ ಕೊಡುತ್ತಾಯಿಧಾರೆ. ಅವರಲ್ಲಿ ರಹದಾರಿವಿಷಯ ಜಾಹೀರು ಮಾಡಿಕೊಳ್ಳವದೆಂದು ವಗ್ಯೆರೆ ಬರದುಯಿಥೆ, ಯಿದರಿಂದ ಯೀ ಮಠ ತ್ತುಂಡು ಮಠವಲ್ಲವೆಂತ ತೋರುವದ್ದರಿಂದ ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ

೨೬೯. ವಿದ್ಯಾಶಂಕರಸ್ವಾಮಿಗಳಿಗೆ ಧಾರವಾಡದ ಸುಭಾಕಲೆಕ್ಟರು ಮಜಿರಬ್‌ಬರಸಾಹೇಬರವರು ಬರದಿರುವದರಲ್ಲಿ ದೇಶಸಂಚಾರಾರ್ಥವಾಗಿಯೂ ಕೃಷ್ಣಾಸ್ನಾನ ಮೊದಲಾದ ಕಡಿಗೆ ಹೋಗತಕ್ಕ ಬಗ್ಗೆ ರಹದಾರಿ ಕಳುಹಿಸಿಯಿದೇವೆ. ಸರಕಾರದ ನವಕರಿಯವರು ದರಮಹಾದಲ್ಲಿ ಚವುಥಾಯ ಮೇರಿಗೆ ಕೊಡುವಂತೆ ಹುಕುಂಮಾಡಿಯಿಥೆ

ಎಂಬ ವಗೈರೆ ಬರದುಯಿಥೆ. ಸಾಲುಮಾಹೆ ತಾರೀಖುಯಿಲ್ಲ. ಯಿದುಸದರಿ ಮೇರಿಗೆ ಪ್ರತಿವಾದಿಗೆ ಸಾಧಕ ವಾಗಿಥೆ——

೨೭೦. ಕನಡಾ ಜಿಲ್ಲಾ ಆಗುಂಬಿಸಬ್ ಕಲೆಕ್ಟರ್ ಸಾಹೇಬರು ಸೋದಾ ತಾಲ್ಲು ತಹಶೀಲುದಾರ್‍ರಿಗೆ ಬರದ್ದರಲ್ಲಿ ಶೃಂಗೇರಿ ಮಠಕ್ಕೆ ಬನವಾಶಿ ದೇವಸ್ಥಾನದಿಂದ ೮, ಕೂಡ್ಲಿಮಠಕ್ಕೆ ಬಕುಳ ದೇವಸ್ಥಾನದಿಂದ ೧೨,೩=ಸಹ ಯೀಮಠಗಳಿಂದ ನೇಮಕವಾಗಿಯಿದ್ದು ಗುರುನಾಥ ಭಟ್ಟನ ವಶಕ್ಕೆ ಸಲ್ಲುತ್ತಾಯಿತ್ತು. ಈಗ ಬ್ಯಾರೆ ಜನಕ್ಕೆ ನೇಮಕವಾದದ್ದರಿಂದ ಶೃಂಗೇರಿಮಠಕ್ಕೆ ಸಲ್ಲುವತಸದೀಕು ಕೂಡ್ಲಿಮಠಕ್ಕೆ ಸಲ್ಲುವದ್ದರಿಂದ ಅದನ್ನು ಕೊಡಿಸ ಬೇಕೆಂತ, ಶೃಂಗೇರಿ ಮಠದ ಗಣೇಶಭಟ್ಟ ಹೇಳಿಕೊಂಡದ್ದರಿಂದ ದರ್ಯಾಪ್ತಿಮಾಡುವಲ್ಲಿ ಕೂಡ್ಲಿಮಠಕ್ಕೆ ಸಲ್ಲತಕ್ಕ ದ್ದಾದ್ದರಿಂದ, ಕೂಡ್ಲಿಮಠಕ್ಕೆ ನಡಿಸಿಕೊಂಡು ಬರುವದೆಂಬದಾಗಿ ಸರ್ ೧೨೪೫ನೇ ಫಸಲಿ, ಮೇ ತಾರೀಖು ೧೮ರಲ್ಲೂ, ಬರದು ಯಿಥೆ, ಇದು ಸದರಿಮೇರಿಗೆ, ಪ್ರತಿವಾದಿಗೆ ಸಾಧಕವಾಗಿಯಿಥೆ——

೨೭೧. ಸರ್ ೧೨೪೭ನೇ ಪಸಲೀ ಪೆಬ್ಬರವರಿ ತಾ ೧೬ರಲ್ಲೂ ಸದರಿ ಸಾಹೇಬರು, ಸದರಿ ತಹಶೀಲು ದಾರರಿಗೆ ಹುಕುಂ ಕೊಟ್ಟಿರುವ ಮೇರಿಗೆ ತಸದೀಕುವಗೈರೆ ಕೂಡ್ಲಿಮಠದಕಡೆ ಮದ್ವಲಿಂಗಾಭಟ್ಟ ವೆಂಕಟಾಚಲ ಶಾಸ್ತ್ರಿ ವಶಕ್ಕೆ ಕೊಡಿಸತಕ್ಕದ್ದು, ಯಿವರು ಆಚಾರ ವಿಚಾರ ನಡಿಸುವಲ್ಲಿ ಯಾರೂ ತಂಟೆ ಮಾಡದ ಹಾಗೆ ಬಂದೋಬಸ್ತು ಮಾಡಿಸುವದೆಂಬದಾಗಿ ಬರದು ಯಿಥೆ. ಇದು ಸದರಿ ಮೇರಿಗೆ ಪ್ರತಿವಾದಿಗೆ ಸಾಧಕವಾಗಿ ಯಿಥೆ——

೨೭೨. ಸರ್ ೧೮೪೨ನೆ ಇಸ್ವಿ ಜುಲೈ ತಾ ೨೯ರಲ್ಲೂ ನಗರದ ಸೂಪ್ರಿಂಟೆಂಡ್ಯಾಂಟ್ ಡಿವೋರಕ ಸಾಹೇಬರು ಕೂಡ್ಲಿಶೃಂಗೇರಿ ಸಂಸ್ಥಾನದ ಸುಬೇದಾರ ಪುಟ್ಟಶಾಸ್ತ್ರಿಗಳಿಗೆ ಬರದಿರುವುದರಲ್ಲಿ, ನಿಮ್ಮ ಸ್ವಾಮಿಗಳು ಬಿರುದು ಬಾವಲಿಯಿಂದ ಶಿವಮೊಗ್ಗೆಗೆ ಬರಬಾರದೆಂಬ ವಿಷಯದಲ್ಲಿ, ಇವರಿಗೆ ಕೊಟ್ಟಿರುವ ಹುಕುಂ ಮೋಕೂಫಮಾಡಿಯಿದೆ. ನಿಮ್ಮಸ್ವಾಮಿಗಳು ಬರಬಾರದೆಂಬ ವಿಷಯದಲ್ಲಿ ಸೂಪ್ರಿಂಟೆಂಡ್ಯಾಂಟ್ ಕೋರ್ಟಿನಲ್ಲಿ ಫಿರ್ಯಾದು ಮಾಡಿಕೊಂಡಲ್ಲಿ ಅನ್ಯ ಜಾತೀಜನರ ಪಂಚಾಯಿತೀಗೆ ನೇಮಿಸಿ ಪೈಸಲು ಮಾಡುತ್ತಾಯಿಥೆ ಯಂಬದಾಗಿ ಶೃಂಗೇರಿ ಮಠದ ಸರ್ವಾಧಿಕಾರಿಗೆ ಹುಕುಂ ಕೊಟ್ಟುಯಿಥೆ, ಶ್ರೀ ಶೃಂಗೇರಿ ಸ್ವಾಮಿಗಳಿಗೆ ಮಹಾಯಾತ್ರೇ ಉದ್ದಿಶ್ಯ ಕಮೀಷನರ ರಹದಾರಿ ಆಗಿರುವ ವಿಷಯದಲ್ಲಿ ನೀವು ಅಡ್ಡೀ ಮಾಡುವದಕ್ಕೆ ಮಜಬೂತು ಸಬೂಬು ಇರಬಹುದೆಂತಾ ತಿಳಿದುಕೊಳ್ಳುವುದಕ್ಕೆ ಕಠಿಣವಾಗಿ ಇರುತ್ತದೆ ಎಂತ ವಗೈರೆ, ಬರೆದುಯಿಥೆ.——

ಯಿದು ಪ್ರತಿವಾದಿಗೆ ಸಾಧಕವಾಗಿಯಿದೆ.——

೨೭೩. ಸರ್ ೧೮೪೨ ನೆ ಯಿಸವಿ, ಜುಲಾಯಿ ತಾ ೬ರಲ್ಲೂ ಸದರಿ ಸೂಪ್ರಿಂಟೆಂಡ್ಯಾಂಟ್ ಸಾಹೇಬರು ಪುಟ್ಟ ಶಾಸ್ತ್ರಿಗಳಿಗೆ ಬರದಿರುವದ್ದರಲ್ಲಿ, ಶೃಂಗೇರಿ ಸ್ವಾಮಿಗಳು ಆನೇ ಮೇಲೆ ಅಂಬಾರಿ, ಪಂಚಕಲಶ ಹಾಕಿಕೊಂಡು, ದೇಶಸಂಚಾರ ಮಾಡಿಕೊಂಡು ಮಾಹಾಯಾತ್ರೆ ಹೋಗುತ್ತಾರೆಂಬ ವಿವರವಾಗಿ ಬರೆದ ಬಗ್ಗೆ, ಹೊನ್ನಾಳೀ ವಗೈರೆ ಮಾರ್ಗವಾಗಿ ಹೋಗುತ್ತಾರೆಂದು ಕಮೀಷನರ ಹುಜೂರು ರಹದಾರಿ ಯಿರುವದ್ದರಿಂದ ಹರಕತ್ತು ಆಗಲಾರದು. ಪಂಚಕಲಶ ಮೊದಲಾದ ವಿಷಯದಲ್ಲಿ ನೀವು ಫಿರ್ಯಾದು ಮಾಡಿಕೊಳ್ಳಬಹುದೆಂಬದಾಗಿ ವಗೈರೆ ಬರದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.——

೨೭೪. ಸರ್ ೧೮೪೨ನೆ ಯಿಸ್ವಿ ಅಗಸ್ಟು ತಾರೀಖು ೨೯ರಲ್ಲೂ, ಸದರಿ ಸಾಹೇಬರು, ಪುಟ್ಟಶಾಸ್ತ್ರಿಗಳಿಗೆ ಬರೆದು ಯಿರುವದರಲ್ಲಿ, ಶಿವಲ್‌ನಲ್ಲಿ ಮೊಬಲಗು ನಮೂದಿಲ್ಲದೆ ನಿಮ್ಮ ಹೆಸರಿನಲ್ಲಿ ನಂಬರು ದಾಖಲು ಮಾಡಬಹು ದೆಂತಲೂ ಫೈಸಲಾಗುವವರಿಗೂ ಪಂಚ ಕಲಶ ಮೊದಲಾದ್ದು ನಡೆಯಬಾರದೆಂದು ಅರ್ಜಿ ಕೊಟ್ಟರೆ ಮನ್ನ ಆಗಬಹುದೆಂದೂ ಹುಕುಂ ಕೊಡುತ್ತೇವೆ. ಆ ಪ್ರಕಾರ ರುಜುವಾಗದೇ ಯಿದ್ದಲ್ಲಿ ಮನ್ನ ಆಗಬೇಕೆಂದು ಅರ್ಜಿ ಕೊಟ್ಟವರಿಗೆ ಮುನಾಸಾಬ್ ಜುರುಮಾನೆ ಠರಾಯಿಸಿ ಫೈಸಲಿನಲ್ಲಿ ಬರೆಯಲಾದೀತೆಂತ ವಗೈರೆ ಬರೆದು ಯಿಥೆ. ಯಿದು ಪ್ರತಿವಾದಿಗೆ ಸಾಧಕವಾಗಿಯಿಥೆ.——

೨೭೫. ಸರ್ ೧೮೪೨ನೆ ಯಿಸ್ವಿ ಶಪಟಂಬರು ತಾರೀಖು ೨೪ಲ್ಲೂ ಕಮೀಷನರ ಸಾಹೇಬ್ ಬಹದ್ದೂರವರು ಕೂಡ್ಲಿ ಶೃಂಗೇರಿ ಮಠದ ಸುಭೇಧಾರ ನಾರಾಯಣ ಶಾಸ್ತ್ರಿ ಸುಬ್ಬಾಶಾಸ್ತ್ರಿಗೆ, ಬರದಿರುವ ಹುಕುಂನಲ್ಲಿ ಶೃಂಗೇರಿ ಗುರು ಗಳು ಯಾತ್ರೇ ಹೋಗತಕ್ಕ ಬಗ್ಗೆ ರಹದಾರಿ ಕೊಟ್ಟುಯಿಥೆ. ಅದು ಮನ್ನಾ ಮಾಡುವದಕ್ಕೆ ಆಗೊದಿಲ್ಲಾ. ಸೂಪ್ರಿಂ ಟೆಂಡ್ಯಾಂಟ್ ಸಾಹೇಬರವರು, ಜುಲೈ ೨೯ರಲ್ಲಿ ಕೊಟ್ಟಿರುವ ಹುಕುಂ ಮೇರಿಗೆ ಫಿರ್ಯಾದು ಮಾಡಿಕೊಂಡಲ್ಲಿ ಪೂರ್ತಾ ವಿಚಾರಣೆಯಾಗಿ ನ್ಯಾಯ ಪ್ರಕಾರ ಫೈಸಲಾದೀತು ಯಂತ ವಗೈರೆ ಬರದು ಯಿಥೆ. ಯಿದು ವಿವಾದಕ್ಕೆ ಸಾಧಕವಿಲ್ಲಾ.——

೨೭೬. ಸರ್ ೧೮೪೩ನೆ ಯಿಸ್ವಿ ಜನವರಿ ತಾರೀಖು ೧೪ಲ್ಲೂ ಕವಿಷನರ ಸಾಹೇಬ ಬಹದರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳು ರಾಮೇಶ್ವರ ಯಾತ್ರೆ ಹೊನ್ನಾಳಿ ಮಾರ್ಗವಾಗಿ ಹೋಗಿಬರುವದ್ದರಿಂದ ಮಾಮೂಲ ಮೇರಿಗೆ ಸರಬರಾಯಿ ಮಾಡುವುದೆಂತಲ್ಲೂ, ಛತ್ರಿಚಾಮರ ಮುಂತಾದ ಬಿರುದುಗಳು ಅಟಕಾಯಿಸದೆ ಬಿಡುವದೆಂತ ವಗೈರೆ ಬರದುಯಿಥೆ. ಯಿದು ವಿವಾದಕ್ಕೆ ಸಾಧಕವಿಲ್ಲದೆ ಯಿದ್ದಾಗ್ಯೂ ತುಂಡು ಮಠವಲ್ಲವೆಂತ ಯಿದರಿಂದ ತಿಳಿಯಬರುತ್ತೆ.——

೨೭೭. ಬಗರಸಾಲ್ ಮಾಹೇ ತಾರೀಖು ಸ್ವಾಮಿಗಳವರಿಗೆ ನಗರದ ಫೌಜುದಾರ ತಿಮ್ಮಪ್ಪನವರು ಬರೆದಿರುವದರಲ್ಲಿ ಸ್ವಾಮಿಗಳು ದಿಗ್ವಿಜಯ ಮಾಡುತ್ತೇವೆಂದು ಶ್ರೀಮುಖ ಕೃಪೆಮಾಡಿದ್ದು ಸಂತೋಷವಾಯ್ತು ಯಂತ ವಗೈರೆ ಬರದು ಯಿಥೆ. ಯಿದು ಉಪಯೋಗವಿಲ್ಲ.——

೨೭೮. ಸಾಲು ಇಲ್ಲದೆ ಜೇಷ್ಠ ಶು. ೧೫ಲ್ಲೂ ಕೂಡ್ಲಿ ಸ್ವಾಮಿಗಳಿಗೆ, ಶಿವಗಂಗೆ ಸಚ್ಚಿದಾನಂದ ಸಾಮಿಗಳು ಬರದ್ದರಲ್ಲಿ ಕಾರ್ತಿಕ ಶು ೧೫ಲ್ಲೂ ಶ್ರೀಕಂಠಶಾಸ್ತ್ರೀಗೆ ಸನ್ಯಾಸ ಕೊಟ್ಟು ಸಚ್ಚಿದಾನಂದ ಭಾರತೀಯಂತ ಯೋಗ ಪಟ್ಟ ಕೊಡಲ್ ಪಟ್ಟಿಥೆ. ನಾವು ಶ್ರೀರಂಗಪಟ್ಟಣಕ್ಕೆ ಹೋಗಿಯಿದ್ದೆವು. ಪೂರ್ಣಯ್ಯನವರು ಮರ್‍ಯಾದೆ ಮಾಡಿ ಕಳುಹಿಸಿಕೊಟ್ಟರು. ಶಿಲ್ಪಿನದೇಶದಲ್ಲಿ ಶಿಷ್ಯಾರ್ಚನೆಯು ನಡೆಯುತ್ತಾ ಯಿತ್ತು. ಬಹುದಿವ್ಸದಿಂದ ಸಂಚಾರ ಹೋಗಲಿಲ್ಲವಾದ್ದರಿಂದ ಪೂರ್ವಪ್ರಕಾರ ನಡೆಸಿಕೊಂಡು ಬರುವಂತೆ, ಶ್ರೀಮುಖ ಕೃಪೆ ಮಾಡಿಸಬೇಕೆಂದು ವಗೈರೆ ಬರದು ಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.——

೨೭೯. ಸ್ವಾಮಿಗಳಿಗೆ ಶಿವಗಂಗೆ ಸಚ್ಚಿದಾನಂದ ಸಾಮಿಗಳು ಬರೆದಿರುವುದರಲ್ಲಿ ಪ್ರಾಗ್ ದೇಶಕ್ಕೆ ಹೋಗಿರುವ ವರ್ತಮಾನ ಸದ್ಯ ಆಗಮನ ತೋರಲಿಲ್ಲ. ಯಿಲ್ಲಿ ಉತ್ಸವಕ್ಕೆ ತಾವು ದಯಮಾಡಿಸಿದಲ್ಲಿ ಬಹು ಸಂತೋಷವಿಥೆ ಎಂಬ ವಗೈರೆ ಬರದು ಇಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.——

೨೮೦. ಸಾಲು ಇಲ್ಲದೆ ಭಾದ್ರಪದ ಶು. ೧೦ಲ್ಲೂ ಸ್ವಾಮಿಗಳಿಗೆ, ಶಿವಗಂಗೆ ಸಚ್ಚಿದಾನಂದ ಸ್ವಾಮಿಗಳು ಬರದಿರುವುದರಲ್ಲಿ ಪ್ರಕೃತ ಶಾಲು ಧೋತ್ರಸಹಾ ಕಳುಹಿಸಿಕೊಟ್ಟದ್ದು ಸಂತೋಷವಾಯಿತು, ತಾವು ಈ ಮಾರ್ಗವಾಗಿ ದಯಮಾಡಿ ದರುಶನಕೊಟ್ಟಲ್ಲಿ ಬಹುಸಂತೋಷವಿಥೆಯಂತಾ ವಗೈರೆ ಬರದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲಾ.——

೨೮೧. ದಪಾ ಸಚ್ಚಿದಾನಂದ ಸ್ವಾಮಿಗಳು ಬರದಿರುವದರಲ್ಲಿ ಪೂರ್ಣಯ್ಯನವರಿಗೆ, ಷಷ್ಠಿಪೂರ್ತಿ ಶಾಂತಿ ವಗೈರೆ ಆಗುತ್ತೆ. ಬೆಂಗಳೂರಿಂದ ಮೈಸೂರಿಗೆ ಹೋದವರಿಗೆ ತಿರುಮಕೂಡ್ಲು ಮೊದಲಾದ ತೀರ್ಥಯಾತ್ರೆಯಲ್ಲಿ ಇರಬೇಕಾಗಿ ಯಿಥೆ ಯಂಬ ವಗೈರೆ ಬರೆದುಯಿಥೆ——ಯಿದು ವಿವಾದಕ್ಕೆ ಉಪಯೋಗವಿಲ್ಲಾ.——

೨೮೨. ರೌದ್ರಿ ಸಂವತ್ಸರದ ವೈಶಾಖ ಶು. ೫ ಲ್ಲೂ ಸ್ವಾಮಿಗಳಿಗೆ ಕೋಲಾಳದ ವಿದ್ಯಾರಣ್ಯ ಸ್ವಾಮಿಗಳು ಬರದ್ದರಲ್ಲಿ ಪೂರ್ವದಲ್ಲಿ ಗುರುಸ್ವಾಮಿಗಳು ಮೂಲ ದೇವತಾರ್ಚನೆಯ ಸನ್ನದು ಪತ್ರಗಳು, ಕೊಟ್ಟು ಯಾವಮೇರಿಗೆ ಅಪ್ಪಣೆಕೊಟ್ಟು ಯಿದ್ದರೋ, ಆ ಪ್ರಕಾರ ನಡದುಕೊಳ್ಳಲುಳ್ಳವರೆಂದು ಬರದುಯಿಥೆ. ಯಿದು ವಿವಾದಕ್ಕೆ ಉಪಯೋಗವಿಲ್ಲ.——

೨೮೩. ಪ್ರಭವಸಂವತ್ಸರದ ಚೈತ್ರ ಶು. ೧ ಲ್ಲೂ ಸ್ವಾಮಿಗಳಿಗೆ ಮುಳುಬಾಗಿಲು ಸದಾನಂದ ತೀರ್ಥ ಸ್ವಾಮಿಗಳು ಬರದ್ದರಲ್ಲಿ ರಾಣಿಬೆನ್ನೂರಲ್ಲಿ ನಮಗೆ ನಡೆಯುವ ೧೨,೦ದ ಭೂಮಿಯನ್ನು ದೀಪಾರಾಧನೆ ಬಗ್ಗೆ ಕೊಟ್ಟು ಯಿಥೇನೆಂಬುದಾಗಿ ಬರದು ಇಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲಾ.——

೨೮೪. ಸ್ವಾಮಿಗಳಿಗೆ ಸಂಕೇಶ್ವರ ಸ್ವಾಮಿಗಳು ಬರದ್ದರಲ್ಲಿ ವರುಷವಂಡಕ್ಕೆ೧೦೦೦,೦ ವರಹಾದಮೇರಿಗೆ ಕೊಡುತ್ತಾ ಬರುತ್ತೇವೆಂಬದಾಗಿ ಬರೆದುಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲಾ.——

೨೮೫. ಸ್ವಾಮಿಗಳಿಗೆ ಗಾಜನೂರು ಮಹಾಜನಗಳು, ರೈತರೂ ಸಹ ಮನ್ಮಥ ಸಂವತ್ಸರದ ಮಾಘ ಶು. ೧೫ರಲ್ಲೂ ಬರೆದಿರುವುದರಲ್ಲಿ ಕೂಡ್ಲಿಯಲ್ಲಿರುವ ಅನ್ನಛತ್ರಕ್ಕೆ, ನಾವು ಸರಕಾರಕ್ಕೆ ತೆರುವ ೧,೦ಕ್ಕೆ ಅರುವೀಸ ಮೇರಿಗೆ ಕೊಡುತ್ತೇವೆಂದು ಬರದುಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲಾ——

೨೮೬. ಸದರಿ ತಾರೀಖಿನಲ್ಲಿ ಸದರಿ ಅಗ್ರಹಾರದವರು ಸ್ವಾಮಿಗಳಿಗೆ ಬರದ್ದರಲ್ಲಿ ಬತ್ತಗಳ ಕೊಡುತ್ತೇವೆಂದು ಬರದುಯಿಥೆ.

ಯಿದು ವಿವಾದಕ್ಕೆ ಉಪಯೋಗವಿಲ್ಲಾ——

